ಶ್ರೀ ಕಾಶೀನಾಥಗ್ರಂಥಮಾಲಾ

ತ್ರಯೋವಿಂಶತಿತಮಪುಷ್ಪ

# ಶಿಖಾಸೂತ್ರಸಿದ್ಧಾಂತದರ್ಪಣ

ಗ್ರಂಥಕರ್ತರು

ಬಿ ಗುರುಸಿದ್ಧಶಾಸ್ತ್ರಿಗಳು

ಬೆಲೆ ೧೨ ಆಣೆ

ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು.

# ಪ್ರಸ್ತಾವನೆ.

---

ನಮ್ಮಾ ಭಾರತಭೂಮಿಯಲ್ಲಿ ವೇದಾಗಮಾದಿಗಳ ಶಾಸನದಂತೆ, ಅನಾದಿಕಾಲದಿಂದಲೂ ವರ್ಣಾಶ್ರಮಧರ್ಮಗಳು ರೂಢಮೂಲವಾಗಿ ಬಂದಿರುವುದು ಪ್ರತಿಯೊಬ್ಬರಿಗೂ ತಿಳಿದ ವಿಷಯವಾಗಿದೆ. ನಿಗಮಾಗಮಗಳನ್ನು ಪ್ರಮಾಣವನ್ನಾಗಿ ಮನ್ನಿಸತಕ್ಕ ಪ್ರತಿಯೊಂದು ವೈದಿಕ ಮತದಲ್ಲಿಯೂ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ನಾಲ್ಕು ವರ್ಣಗಳೂ, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಎಂಬ ನಾಲ್ಕು ಆಶ್ರಮಗಳೂ ಉಂಟೇ ಉಂಟು. ಈ ವಿಷಯವು ಶಾಸ್ತ್ರಪ್ರಸಿದ್ಧವೂ ಲೋಕಪ್ರಸಿದ್ಧವೂ ಆಗಿದೆ. ಸ್ಮಾರ್ತ-ವೈಷ್ಣವ-ಶ್ರೀವೈಷ್ಣವಾದಿ ಮತಗಳಲ್ಲಿರುವಂತೆ, ವೀರಶೈವಮತದಲ್ಲಿಯಾದರೂ ವರ್ಣಾಶ್ರಮಧರ್ಮ ನಿಬಂಧನೆಯು ಸರ್ವೋತ್ತಮವಾಗಿರುತ್ತದೆ. ವೀರಶೈವಮತಸ್ಥಾಪನಾಚಾರ್ಯರಾದ ಶ್ರೀ ಜಗದ್ಗುರು ರೇಣುಕಾಚಾರ್ಯರು ಸಿದ್ಧಾಂತಶಿಖಾಮಣಿಯಲ್ಲಿ—

> ವರ್ಣಾಶ್ರಮಾದಿಧರ್ಮಾಣಾಂ ವ್ಯವಸ್ಥಾ ಹಿ ದ್ವಿಧಾ ಮತಾ ।
> ಏಕಾ ಶಿವೇನ ನಿರ್ದಿಷ್ಟಾ ಬ್ರಹ್ಮಣಾ ಕಥಿತಾ ಪರಾ ॥

ಎಂದು ವರ್ಣಾಶ್ರಮಧರ್ಮಗಳ ವಿಷಯವನ್ನು ಅಪ್ಪಣೆಕೊಡಿಸಿರುತ್ತಾರೆ. ಮತಸ್ಥಾಪನಾಚಾರ್ಯರೇ ಈರೀತಿ ಸ್ಪಷ್ಟವಾಗಿ ಅಪ್ಪಣೆ ಕೊಡಿಸಿದ್ದರೂ, ಕಲಿಕಾಲಮಹಿಮೆಯಿಂದ ಈ ಸಮಯದಲ್ಲಿ ಕೆಲಜನ ನವೀನನಾಸ್ತಿಕರು, ಈ ತರಹದ ನಿಬಂಧನೆಯಿಂದ ತಮ್ಮ ಸ್ವೇಚ್ಛಾಚಾರಕ್ಕೆ ತೊಂದರೆಯು ಬರುವುದೆಂದು ಭಾವಿಸಿ, ಶಾಸನಕರ್ತೃಗಳನ್ನೇ ನಿಂದಿಸಹತ್ತಿದ್ದಾರೆ. ಇದು ಅವರ ಪಾಪಾಚರಣೆಯನ್ನು ವ್ಯಕ್ತಗೊಳಿಸುವುದಲ್ಲದೆ ಬೇರೆಯಿಲ್ಲ.

ವರ್ಣಾಶ್ರಮಗಳಿಲ್ಲದ ಮತವು ಪಶುಮತವೆನಿಸಿಕೊಳ್ಳುವುದಲ್ಲದೆ ಎಂದೂ ವೈದಿಕಮತವೆನಿಸಿಕೊಳ್ಳಲಾರದು. ಈ ವಿಷಯವು ಸ್ವೇಚ್ಛಾಚಾರಶೀಲ ರಾದವರಿಗೆ ಹೇಗೆ ಗೊತ್ತಾಗಬೇಕು? ಅಸ್ತು! ನಿಗಮಾಗಮೋಕ್ತಗಳಾದ ಚತುರ್ವರ್ಣಗಳಲ್ಲಿ ಬ್ರಾಹ್ಮಣ-ಕ್ಷತ್ರಿಯ-ವೈಶ್ಯರಿಗೆ ಮಾತ್ರ ವೈದಿಕ ಸಂಸ್ಕಾರವು ಹೇಳಲ್ಪಟ್ಟಿರುವುದಲ್ಲದೆ, ಶೂದ್ರರಿಗೆ ಹೇಳಲ್ಪಟ್ಟಿಲ್ಲ. ಈ ವಿಷಯವು ಧರ್ಮಶಾಸ್ತ್ರಗಳಲ್ಲಿ ವಿಸ್ತಾರವಾಗಿ ಪ್ರತಿಪಾದಿಸಲ್ಪಟ್ಟಿದೆ. ಧರ್ಮಶಾಸ್ತ್ರಗಳಲ್ಲಿ ಮೊದಲನೆಯ ಮೂರುವರ್ಣದವರಿಗೆ, ಉಪನಯನ ದ್ವಾರಾ ದ್ವಿಜರೆಂಬ ನಾಮವು ಪ್ರಾಪ್ತವಾಗುವುದೆಂದು ಹೇಳಲ್ಪಟ್ಟಿರು ವುದು. ಯಾರು ಉಪನಯನಸಂಪನ್ನರೋ ಅವರೇ ದ್ವಿಜಪದವಾಚ್ಯ ರಾಗುವರು. ಪ್ರತಿಯೊಂದು ಮತದಲ್ಲಿಯೂ ಜಾತಿಸಂಸ್ಕಾರ ಮತ್ತು ಮತ ಸಂಸ್ಕಾರವೆಂದು ಎರಡು ವಿಧವಾದ ಸಂಸ್ಕಾರಗಳುಂಟು. ಉಪನಯನವೆಂ ಬುದು ಎಲ್ಲಾ ಮತಗಳಲ್ಲಿಯೂ ಜಾತಿಸಂಸ್ಕಾರರೂಪವಾಗಿದೆ. ಆದರೆ ಮತ ಸಂಸ್ಕಾರವು ಮಾತ್ರ ಆಯಾ ಮತಾನುಗುಣವಾಗಿ ಭಿನ್ನಭಿನ್ನವಾಗಿದೆ. ವೈಷ್ಣವ ಮತ್ತು ಶ್ರೀವೈಷ್ಣವರಲ್ಲಿ ಮತಸಂಸ್ಕಾರವು ತಪ್ತಶಂಖಚಕ್ರಧಾರ ಣಾತ್ಮಕವಾಗಿದೆ. ಆದರೆ ವೀರಶೈವರಲ್ಲಿ ಈ ಮತಸಂಸ್ಕಾರವು ಲಿಂಗಧಾರ ಣಾತ್ಮಕವಾಗಿದೆ. ಶ್ರೀವೈಷ್ಣವರಲ್ಲಿಯೂ ವೀರಶೈವರಲ್ಲಿಯೂ ಮತ ಸಂಸ್ಕಾರವು ಬ್ರಾಹ್ಮಣಾದಿಯಾಗಿ ಸಕಲ ಜಾತಿಯವರಿಗೂ ಹೇಳಲ್ಪ ಟ್ಟಿದೆ. ಆದರೆ ಉಪನಯನಸಂಸ್ಕಾರವು ದ್ವಿಜರಿಗೆ ಮಾತ್ರ ಹೇಳಲ್ಪಟ್ಟಿ ರುವುದು. ಉಪನಯನಸಂಸ್ಕಾರಕ್ಕೆ ಶಿಖಾಸೂತ್ರಧಾರಣವು ಮುಖ್ಯ ವಾದ ಅಂಗವಾಗಿದೆ. ಆದುದರಿಂದ ಪ್ರತಿಯೊಂದು ಮತದ ದ್ವಿಜರೂ ವೇದಾಧಿಕಾರಪ್ರಾಪ್ತಿಗಾಗಿ ಉಪನಯನವನ್ನು ಹೊಂದಲೇಬೇಕು. ಉಪನಯನವಿಲ್ಲದೆ ವೇದಾಧಿಕಾರವಿಲ್ಲ; ವೇದಾಧಿಕಾರವಿಲ್ಲದೆ ಜ್ಞಾನ ವಿಲ್ಲ; ಜಾನವಿಲ್ಲದೆ ಮುಕ್ತಿಯಿಲ್ಲ; ಎಂಬೀ ವಿಷಯವು ಶಾಸ್ತ್ರಪ್ರಸಿದ್ಧ ವಾಗಿದೆ. ಆದುದರಿಂದ ಮುಕ್ತಿಗೆ ಮೊದಲನೆಯ ಸೋಪಾನವೆನಿಸಿದ

ಉಪನಯನವನ್ನು ಪ್ರತಿಯೊಂದು ವೈದಿಕಮತದ ದ್ವಿಜನೂ ಹೊಂದಲೇ
ಬೇಕು. ಈ ವಿಷಯುವನ್ನು ಲಿಂಗಧಾರಿಗಳಲ್ಲಿ ಕೆಲಜನರು ಅಲ್ಲಗಳೆಯು
ಹತ್ತಿರುವರಲ್ಲದೆ, ಮತಸಂಸ್ಕಾರರೂಪವಾದ ದೀಕ್ಷೆಯನ್ನೇ ಉಪನಯನ
ವೆಂದು ತಿಳಿದುಕೊಂಡಿದ್ದಾರೆ. ಇದು ಧರ್ಮಶಾಸ್ತ್ರವನ್ನು ಕಣ್ದೆರೆದು
ನೋಡದಿದ್ದುದರ ಫಲವಲ್ಲದೆ ಬೇರೆಯಲ್ಲ. ಈ ಪುಣ್ಯಾತ್ಮರು ತಾವು
ಮೊದಲು ಮತಕ್ಕೂ ಜಾತಿಗೂ ಇರತಕ್ಕ ತಾರತಮ್ಯವನ್ನು ಚನ್ನಾಗಿ
ತಿಳಿದುಕೊಂಡು ಪರಶಿವನ ಕೃಪೆಗೆ ಪಾತ್ರರಾಗಬೇಕು. ಅಸ್ತು!

ಧರ್ಮಶಾಸ್ತ್ರಾನುಸಾರವಾಗಿ ವೀರಶೈವದ್ವಿಜರಿಗೆ ಉಪನಯನವು
ಮುಖ್ಯವಾದುದಾಗಿದೆ. ಈ ಉಪನಯನಕಾಲದಲ್ಲಿಯೇ ಇವರಿಗೆ ಶಿಖಾ
ಸೂತ್ರಧಾರಣವು ವಿಹಿತವಾಗಿರುವುದರಿಂದ, ಪ್ರತಿಯೊಬ್ಬ ವೀರಶೈವ
ದ್ವಿಜನೂ ಇವುಗಳನ್ನು ಧರಿಸಿಯೇ ತೀರಬೇಕು. ಈ ಶಿಖಾಸೂತ್ರ
ಧಾರಣವು ಧರ್ಮಶಾಸ್ತ್ರದಲ್ಲಿ ಶೂದ್ರರಿಗೆ ಮಾತ್ರ ನಿಷೇಧಿಸಲ್ಪಟ್ಟಿರುವುದ
ರಿಂದ, ಶೂದ್ರರು ಮಾತ್ರ ಇವುಗಳನ್ನು ಧರಿಸಬಾರದು. ಇದು ಶಾಸ್ತ್ರ
ಸಮ್ಮತವಾದ ಮಾರ್ಗವು. ಶಾಸ್ತ್ರಮಾರ್ಗವು ಈ ರೀತಿಯಾಗಿದ್ದರೂ
ಕೆಲಜನರು ಈ ತತ್ತ್ವವು ತಮಗೆ ತಿಳಿಯದ ಕಾರಣದಿಂದಲೋ ಅಥವಾ
ಯಾವುದಾದರೊಂದು ದುರಭಿಮಾನದಿಂದಲೋ ಯಾವ ವೀರಶೈವರಿಗೂ
ಶಿಖಾಸೂತ್ರಧಾರಣವು ಬೇಕಾಗಿಲ್ಲವೆಂದು ಕೇವಲ ಶೂದ್ರವಾದವನ್ನೇ
ಮುಂದೆ ಮಾಡುವರು. ಇದು ಕಲಿಮಹಿಮೆಯೆಂದೇ ಹೇಳಬೇಕಾಗಿದೆ.
ಅಸ್ತು! ಸದ್ಯಃ ಕಲಿಗಣನಾಥಶಾಸ್ತ್ರಿಯೆಂಬಾತನು ಈ ತತ್ತ್ವವನ್ನೇ ಸಾಧಿ
ಸಲು "ಶಿಖಾಸೂತ್ರವಿಮರ್ಶ" ಎಂಬ ಚಿಕ್ಕ ಪುಸ್ತಕವನ್ನು ಬರೆದು
ಪ್ರಕಟಿಸಿದ್ದಾನೆ. ಪಂಡಿತರಾದವರು ಈತನು ಬರೆದ ಅಮಂಗಲಪುಸ್ತಕ
ವನ್ನು ನೋಡಿ ಬಿದ್ದುಬಿದ್ದು ನಗುತ್ತಿರುವರು. ಆದಿಯಿಂದಲೂ ಅಂತ್ಯದ
ವರೆಗೂ ಒಂದಾದರೂ ಶಾಸ್ತ್ರಸಮ್ಮತವಾದ ವಚನಗಳಿರುವುದಿಲ್ಲ.
ಶಾಸ್ತ್ರವಿರುದ್ಧವಾದ ಅಮಂಗಲವಚನಗಳೇ ತುಂಬಿತುಳುಕಾಡುತ್ತವೆ.

ಈ ವಿಷಯವು ಶಾಸ್ತ್ರಜ್ಞರಿಗೆ ವೇದ್ಯವಾಗುವುದಲ್ಲದೆ ಅನ್ಯರಿಗೆ ವೇದ್ಯವಾಗದು. ಇಂಥ ಕ್ಷುದ್ರಪುಸ್ತಕದ ಖಂಡನವನ್ನೇಕೆ ಮಾಡಬೇಕೆಂದು ಭಾವಿಸಿ ಇದರ ಬಗ್ಗೆ ಇಲ್ಲಿಯವರೆಗೆ ಉದಾಸೀನತೆಯನ್ನು ಹೊಂದಿತ್ತು; ಆದರೆ ಅಲ್ಲಲ್ಲಿ ಕೆಲಜನ ಮುಗ್ಧರು ಈ ಅಮಂಗಲಪುಸ್ತಕವನ್ನು ನೋಡಿ ಮೋಸಹೋಗುತ್ತಿರುವರೆಂದು ತಿಳಿದು ಬಂದುದರಿಂದ, ಈಗ ಖಂಡನ ಮಾಡುವ ಪ್ರಸಂಗವೊದಗಿತು. ಈತನು ಬರೆದಿರುವ ಪ್ರತಿಯೊಂದು ವಿಷಯವೂ ನಮ್ಮಿಪುಸ್ತಕದಲ್ಲಿ ಸಪ್ರಮಾಣವಾಗಿ ಖಂಡಿಸಲ್ಪಟ್ಟಿರುವುದು. ಪಾಠಕರು ನಾವು ಪ್ರತಿಪಾದಿಸಿರುವ ಎಲ್ಲಾ ವಿಷಯಗಳನ್ನು ವಿವೇಕದೃಷ್ಟಿಯಿಂದ ಪರಿಶೀಲಿಸಬೇಕು. ಈತನು ತನ್ನ ಪುಸ್ತಕದಲ್ಲಿ ತಿಳಿಯದ ಜನರನ್ನು ಭ್ರಾಂತಿಗೊಳಿಸುವುದಕ್ಕಾಗಿ ಶಿಖಾಸೂತ್ರಗಳಿರಕೂಡದೆಂಬ ಬಗ್ಗೆ ಕೆಲವು ಕೃತ್ರಿಮಶ್ಲೋಕಗಳನ್ನು ಉದಾಹರಿಸಿ ಆ ಶ್ಲೋಕಗಳು ವೀರಾಗಮ, ವಾತುಲಾಗಮ ಮೊದಲಾದ ಆಗಮಗಳಲ್ಲಿ ಹೇಳಿರುವುವೆಂದು ಅಸತ್ಯವಾಗಿ ಬರೆದಿದ್ದಾನೆ. ಈತನು ಉದಾಹರಿಸಿರುವ ಯಾವ ಶ್ಲೋಕಗಳೂ ಯಾವ ಆಗಮಗಳಲ್ಲಿಯೂ ಇರುವುದಿಲ್ಲ. ಇಲ್ಲಿಯವರೆಗೆ ವೀರಶೈವಮತದಲ್ಲಿ ಅನೇಕ ಮತಗ್ರಂಥಗಳು ಮುದ್ರಿತಗಳಾಗಿವೆ; ಮದ್ರಾಸಪಟ್ಟಣದಲ್ಲಿ ಶಿವಾಗಮಗಳು ಮುದ್ರಿತಗಳಾಗಿವೆ; ಅನೇಕ ಲೈಬ್ರರಿಗಳಲ್ಲಿ ಶಿವಾಗಮಗಳು ದೊರೆಯುತ್ತವೆ. ಒಂದರಲ್ಲಿಯಾದರೂ ಈ ಪುಣ್ಯಾತ್ಮನು ಉದಾಹರಿಸಿದ ಶ್ಲೋಕಗಳು ದೊರೆಯುವುದಿಲ್ಲ. ಈಗ್ಗೆ ೨೦-೮೦ ವರ್ಷಗಳ ಪೂರ್ವದಲ್ಲಿ ಶಿಖಾವಿರೋಧಿಗಳಾದ ಕೆಲಜನ ಶೂದ್ರ ಮುಂಡಿಗಳು, ತಮ್ಮ ಇಚ್ಛಾನುಸಾರವಾಗಿ ಕೆಲವು ಅಬದ್ಧಶ್ಲೋಕಗಳನ್ನು ರಚಿಸಿ, ಅವು ಆಗಮಾಂತರ್ಗತಗಳೆಂದು ಬರೆದು, ಮಹಾ ಪಾಪಾತ್ಮರಾಗಿ ಹೋಗಿದ್ದಾರೆ. ಈ ಮುಂಡಿತಮುಂಡನು (ಬೋಳುದಲೆಯ ಮಹಾಶಯನು) ಮುಂಡನವನ್ನು ಸಾಧಿಸುವುದಕ್ಕಾಗಿ ತೆಗೆದುಕೊಂಡಿರುವ ಶ್ಲೋಕಗಳೆಲ್ಲಾ ಆ ಮಹಾಶಯರಿಂದಲೇ ರಚಿಸಲ್ಪಟ್ಟವುಗಳಾಗಿವೆ. ಇಂಥ

ಅಮಂಗಲಕೃತ್ರಿಮಶ್ಲೋಕಗಳನ್ನು ಪ್ರಮಾಣವನ್ನಾಗಿ ತೆಗೆದುಕೊಂಡಿರುವ ಈ ಲೇಖಕನ ಪಾಂಡಿತ್ಯವನ್ನು ನೋಡಿ ಬಹು ಆಶ್ಚರ್ಯಪಡಬೇಕಾಗಿದೆ.

ವೀರಶೈವದ್ವಿಜರಿಗೆ ಶಿಖಾಸೂತ್ರಗಳಿರಕೂಡದೆಂಬ ಬಗ್ಗೆ ಒಂದು ಶ್ಲೋಕವನ್ನಾದರೂ ಕ್ರಮವಾಗಿರುವ ಶಿವಾಗಮಗಳಲ್ಲಿ ತೋರಿಸಿದರೆ, ಈತನು ಹೊರುವಷ್ಟು ಇನಾಮನ್ನು ಕೊಡಬಹುದಾಗಿದೆ. ಪ್ರತಿಯೊಂದು ಶ್ಲೋಕಕ್ಕೆ ಇಂಥ ಆಗಮ, ಇಷ್ಟನೆಯ ಪಟಲ, ಇಷ್ಟನೆಯ ಶ್ಲೋಕವೆಂದು ಬರೆಯದೆ, ಸುಮ್ಮನೆ ವೀರಾದಿಶಿವಾಗಮಗಳು, ವಾತುಲಾದಿ ಶಿವಾಗಮಗಳು, ಶಿವಾಗಮಗಳು, ಆಗಮಗಳು ಎಂದು ಬರೆದಿರುವುದನ್ನು ನೋಡಿದರೆ ಈತನ ಬರವಣಿಗೆಯ ವಂಚಕತನವು ಪ್ರತಿಯೊಬ್ಬರಿಗೂ ತಿಳಿಯುವಂತಿದೆ. ಈತನು ಆಗಮಗಳ ಹೆಸರಿನಿಂದ ಉದಾಹರಿಸಿರುವ ಶ್ಲೋಕಗಳನ್ನು ಈ ಪ್ರಪಂಚವು ಹುಟ್ಟಿದಂದಿನಿಂದ ಇಂದಿನವರೆಗೆ ಯಾರೂ ನೋಡಿಲ್ಲ ಮತ್ತು ಕೇಳಿಲ್ಲ. ಇಂಥ ಅಮಂಗಲಕೃತ್ರಿಮಶ್ಲೋಕಗಳನ್ನು ಆಗಮಗಳ ಹೆಸರಿನಿಂದ ಪ್ರಕಟಿಸಿರುವುದು ಅತ್ಯಂತ ಹೇಯವಾದ ಕಾರ್ಯವಾಗಿದೆ. ಇನ್ನಾದರೂ ಈತನು ಧರ್ಮಶಾಸ್ತ್ರದ್ರೋಹಕರವಾದ ಈ ವಕ್ರಮಾರ್ಗವನ್ನು ಬಿಟ್ಟು, ಶಾಸ್ತ್ರಸಮ್ಮತವಾದ ರಾಜಮಾರ್ಗವನ್ನು ಹಿಡಿದು ಪರಮೇಶ್ವರನ ಕೃಪೆಗೆ ಪಾತ್ರನಾಗಿ ಧನ್ಯನಾಗಬೇಕೆಂದು ಕೋರುತ್ತೇವೆ. ಮುಂಡನವನ್ನು ಸಾಧಿಸುವುದು ತಮ್ಮ ಮನೆತನದವರ ಪ್ರತಿಜ್ಞೆಯಿರುವುದರಿಂದ ಇದನ್ನು ಸಾರ್ಥಕಮಾಡಬೇಕೆಂದು, ಸ್ವತಃ ಈ ಲೇಖಕನೇ ತಾ|| ೩೦—೯—೧೯೩೧ ರಲ್ಲಿ ತಮ್ಮ ಬಂಧುಗಳಿಗೊಂದು ಪತ್ರವನ್ನು ಬರೆದಿದ್ದಾನೆ. ಇದರ ಮೇಲಿಂದ ಈತನ ಬರವಣಿಗೆಯು ಶಾಸ್ತ್ರಸಿದ್ಧವಾಗಿರಬಹುದೋ ಅಥವಾ ಹಠಾತ್ಮಕವಾಗಿರಬಹುದೋ ಎನ್ನುವುದನ್ನು ಕುಶಲರಾದ ವಾಚಕರು ಯೋಚಿಸದಿರಲಾರರು. ತಮ್ಮ ಮನೆತನದವರ ಪ್ರತಿಜ್ಞೆಯನ್ನು ಸಾಧಿಸುವುದಕ್ಕಾಗಿ

ಶಾಸ್ತ್ರವಿರುದ್ಧವಾಗಿ ಬರೆಯುವುದು ಯಾರಿಗೂ ಭೂಷಣವಲ್ಲ! ಇದನ್ನು ಯಾರೂ ಒಪ್ಪಲಾರರು. ಈತನು ಈ ವಿಷಯವನ್ನು ಚನ್ನಾಗಿ ತಿಳಿದು. ಕೊಂಡು ಇನ್ನುಮುಂದಾದರೂ ಧರ್ಮಶಾಸ್ತ್ರವಿರುದ್ಧವಾದ ಪ್ರತಿಜ್ಞೆಯ ಕಡೆಗೆ ಲಕ್ಷ್ಯಗೊಡದೆ, ಧರ್ಮಶಾಸ್ತ್ರದಂತೆ ವರ್ತಿಸಿ ಧನ್ಯಾತ್ಮನಾಗಬೇಕೆಂದು ಬಯಸುತ್ತೇವೆ. ಅಸ್ತು!

ಇಂದಿನವರೆಗೆ ಅನೇಕ ಕಡೆಗೆ ಮುದ್ರಿತಗಳಾದ ಮತಗ್ರಂಥಗಳಲ್ಲಿ ಶಿಖಾಸೂತ್ರವಿಷಯವು ಯಾವರೀತಿಯಾಗಿ ಪ್ರತಿಪಾದಿಸಲ್ಪಟ್ಟಿರುವುದೆಂಬುದನ್ನು ಈ ಕೆಳಗೆ ಸಪ್ರಮಾಣವಾಗಿ ತೋರಿಸಿರುತ್ತೇವೆ. ಈ ವಿಷಯವನ್ನು ಸರ್ವರೂ ಶಾಂತಚಿತ್ತದಿಂದ ತಿಳಿದುಕೊಳ್ಳಬೇಕಾಗಿ ಕೋರಿಕೆ.

## ವೀರಾಗಮದಲ್ಲಿ—

ಶಿಖಾ ಸೂತ್ರಂ ಜಟಾ ಭಸ್ಮ ದಂಡಾಧಾರೌ ಕಮಂಡಲುಃ ।
ಆಸನಂ ಧ್ಯಾನಭವನಮೇವಂ ಜಂಗಮಲಕ್ಷಣಂ ॥೯॥

(ಪಟಲ. ೯)

ಜಟಾ ಯಜ್ಞೋಪವೀತಂ ಚ ಕೌಪೀನಂ ಚ ಕಮಂಡಲುಃ ॥೪॥

(ಪಟಲ. ೧೨)

ಶಿಖಾಯಾಂ ಧಾರಯೇನ್ನಿತ್ಯಂ ತಸ್ಯ ಪುಣ್ಯಫಲಂ ಶ್ರುಣು ॥೩೦॥

(ಪಟಲ. ೧೪)

ಅಕ್ಷಮಾಲಾ ತಥಾ ಲಿಂಗಂ ಬ್ರಹ್ಮಸೂತ್ರಂ ಚ ಕಂಬಲಂ ।
ಏತೈರ್ವಿರಾಜಿತೋ ಕಶ್ಚಿತ್ತದೇತಜ್ಜಂಗಮಸ್ಥಲಂ ॥೨॥

(ಪಟಲ. ೨೨)

ಅಂಗಹೀನಂ ಚಾಧಿಕಾಂಗಂ ಕೇಶಹೀನಂ ತಥೈವ ಚ ।
ಅರ್ಚನಾದಿಕ್ರಿಯಾಕಾಲೇ ದೀಕ್ಷಿತೋ ನೈವ ದರ್ಶಯೇತ್ ॥೩೪॥

(ಪಟಲ. ೨೫)

ವೀರಾಗಮೋಕ್ತಗಳಾದ ಇತ್ಯಾದಿ ಶ್ಲೋಕಗಳು ವೀರಶೈವದ್ವಿಜರಿಗೆ ಶಿಖಾಸೂತ್ರಧಾರಣವನ್ನು ಬಲವಾಗಿ ಬೋಧಿಸುವುವಲ್ಲದೆ, ಶಿವದೀಕ್ಷಾಸಂಪನ್ನನು ಶಿವಪೂಜಾಸಮಯದಲ್ಲಿ ಕೇಶ (ಶಿಖಾ) ಹೀನನನ್ನು ನೋಡಬಾರದೆಂದು ಶಾಸನಮಾಡುವುವು. ಧರ್ಮಗ್ರಂಥಗಳಲ್ಲಿ ಕೇಶಶಬ್ದವು ಶಿಖಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿರುವುದು. ಈ ವಿಷಯವನ್ನು ಈ ಪುಸ್ತಕದ ೧೧೫ನೆಯ ಪುಟದಲ್ಲಿ ನೋಡಬೇಕು.

## ಪಾರಮೇಶ್ವರಾಗಮದಲ್ಲಿ—

ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ ।
ಲಿಂಗರುದ್ರಾಕ್ಷಭಸ್ಮಾಂಕಾ ಬ್ರಹ್ಮಕರ್ಮಸಮಾಶ್ರಿತಾಃ ॥೭॥

(ಪಟಲ. ೧೭)

ವೀರಶೈವಬ್ರಾಹ್ಮಣರು ಶಿಖಾ-ಸೂತ್ರ-ಲಿಂಗ-ರುದ್ರಾಕ್ಷ-ಭಸ್ಮಗಳನ್ನು ಧರಿಸಬೇಕೆಂದು ಪಾರಮೇಶ್ವರಾಗಮವು ಬೋಧಿಸುತ್ತದೆ.

## ಯಜುರ್ವೇದಾಂತರ್ಗತ ಶ್ರೀರುದ್ರದಲ್ಲಿ—

"ನಮೋ ಹರಿಕೇಶಾಯೋಪವೀತಿನೇ ಪುಷ್ಟಾನಾಂ ಪತಯೇ ನಮಃ" "ವಿಶಿಖಾಸಃ ಕಪರ್ದಿನಃ"

ಶ್ರೀರುದ್ರಪಠಿತಗಳಾಗಿರುವ ಈ ಮಂತ್ರಗಳು, ಶಿಖಾಸೂತ್ರಗಳು ಶಿವಲಾಂಛನಗಳಾಗಿರುವುವೆಂದು ಬೋಧಿಸುತ್ತವೆ.

## ಬ್ರಹ್ಮೋಪನಿಷತ್ತಿನಲ್ಲಿ—

ಕರ್ಮಣ್ಯಧಿಕೃತಾ ಯೇ ತು ವೈದಿಕೇ ಬ್ರಾಹ್ಮಣಾದಯಃ ।
ತೇಭಿರ್ಧಾರ್ಯಮಿದಂ ಸೂತ್ರಂ ಕ್ರಿಯಾಂಗಂ ತದ್ಧಿ ವೈ ಸ್ಮೃತಂ॥

ವೈದಿಕಕರ್ಮಾಧಿಕಾರವುಳ್ಳ ಬ್ರಾಹ್ಮಣರು ಕರ್ಮಾಂಗವಾದ ಸೂತ್ರವನ್ನು ಧರಿಸಬೇಕೆಂದು ಈ ಮಂತ್ರವು ಶಾಸನಮಾಡುತ್ತದೆ.

## ರುದ್ರಾಕ್ಷಜಾಬಾಲೋಪನಿಷತ್ತಿನಲ್ಲಿ—

ತದಕ್ಷಮುತ್ತಮಂ ವಿದ್ಯಾತ್ತದ್ಧಾರ್ಯಂ ಶಿವಪೂಜಕೈಃ ।
ಶಿಖಾಯಾಮೇಕರುದ್ರಾಕ್ಷಂ ತ್ರಿಶತಂ ಶಿರಸಾ ವಹೇತ್ ॥ (೧-೧೫)

ಶಿವಪೂಜಕರು ಶಿಖೆಯಲ್ಲಿ ಒಂದು ರುದ್ರಾಕ್ಷವನ್ನು ಧರಿಸಬೇಕೆಂದು ಈ ಮಂತ್ರವು ಬೋಧಿಸುತ್ತದೆ.

## ಶಿವಪುರಾಣ ವಾಯುವೀಯಸಂಹಿತೆಯಲ್ಲಿ—

ಸತ್ಯಂ ಸಂತೋಷ ಆಸ್ತಿಕ್ಯಮಹಿಂಸಾ ಸರ್ವಜಂತುಷು ।
ಹ್ರೀಶ್ರದ್ಧಾಽಧ್ಯಾಪನಂ ಯೋಗಃ ಸದಾಽಧ್ಯಯನಮೇವ ಚ ॥೭೫॥
ವ್ಯಾಖ್ಯಾನಂ ಬ್ರಹ್ಮಚರ್ಯಂ ಚ ಶ್ರವಣಂ ಚ ತಪಃ ಕ್ಷಮಾ ।
ಶೌಚಂ ಶಿಖೋಪವೀತಂಚಉಷ್ಣೀಷಂಚೋತ್ತರೀಯಕಂ॥೭೬॥
(ಉ. ಭಾಗ. ಅಧ್ಯಾಯ. ೧೨)

ಈ ಸಂಹಿತೆಯು ಶಿವಭಕ್ತದ್ವಿಜರ ವರ್ಣಧರ್ಮಗಳನ್ನು ಪ್ರತಿಪಾದಿಸುತ್ತಿರುವಾಗ, ಶಿವಭಕ್ತದ್ವಿಜರಿಗೆ ಶಿಖಾಸೂತ್ರಗಳಿರಬೇಕೆಂದು ಬೋಧಿಸುತ್ತದೆ.

## ಲಿಂಗಪುರಾಣದಲ್ಲಿ—

ಉತ್ಪನ್ನಸ್ತು ಶಿಖಾಯುಕ್ತಃ ಕುಮಾರಃ ಶ್ವೇತಲೋಹಿತಃ ।
ತಂ ದೃಷ್ಟ್ವಾ ಪುರುಷಂ ಶ್ರೀಮಾನ್ ಬ್ರಹ್ಮಾ ವೈ ವಿಶ್ವತೋ
ಮುಖಃ ॥
ಹೃದಿ ಕೃತ್ವಾ ಮಹಾತ್ಮಾನಂ ಬ್ರಹ್ಮರೂಪಿಣಮೀಶ್ವರಂ ।
ಸದ್ಯೋಜಾತಂ ತತೋ ಬ್ರಹ್ಮಾ ಧ್ಯಾನಯೋಗಪರೋಽಭವತ್ ॥
(ಅಧ್ಯಾಯ. ೧೧)

ಈ ಪುರಾಣವು ಸದ್ಯೋಜಾತಬ್ರಹ್ಮರೂಪ ಶಿವನಿಗೆ ಶಿಖೆಯನ್ನು ಬೋಧಿಸಿರುವುದರಿಂದ, ಶಿಖೆಯು ಶಿವಲಾಂಛನವೆಂದು ಸಿದ್ಧವಾಗುವುದು.

ಶ್ರೀಕರಭಾಷ್ಯದಲ್ಲಿ—

ನಿಯಮವಿಧಿಶ್ಚ ತಾಂತ್ರಿಕತಪ್ತಲಿಂಗಶೂಲಡಮರುಶಂಖ ಚಕ್ರಾಂಕನನಿಷೇಧಪೂರ್ವಕಶ್ರೌತಭಸ್ಮ ರುದ್ರಾಕ್ಷಲಿಂಗಧಾರಣ ಸ್ವೀಕಾರಾತ್ "ಹರಿಕೇಶಾಯೋಪವೀತಿನೇ—ರುದ್ರಶಿಖಾ" ಇತ್ಯಾದೌ ಭಸ್ಮರುದ್ರಾಕ್ಷಾದಿವಚ್ಛಿವಸ್ಯೈವ ಶಿಖಾಸೂತ್ರಶ್ರವಣಾತ್ ಶಿವಲಾಂಛನಮಿತಿಸಿದ್ಧಂ ||

"ಅಥಾತೋ ಬ್ರಹ್ಮಜಿಜ್ಞಾಸಾ" (೧—೧—೧) ಎಂಬ ಬ್ರಹ್ಮಸೂತ್ರದ ಭಾಷ್ಯದಲ್ಲಿ ವೀರಶೈವಭಾಷ್ಯಕಾರರಾದ ಶ್ರೀಪತಿಪಂಡಿತರು, ಶಿಖಾಸೂತ್ರಗಳು ಶಿವಲಾಂಛನಗಳಾಗಿರುವುದರಿಂದ ಅವುಗಳನ್ನು ಅವಶ್ಯವಾಗಿ ಧರಿಸಬೇಕೆಂದು ಮೇಲೆ ಉದಾಹರಿಸಿದ ವಾಕ್ಯಗಳಿಂದ ಸಿದ್ಧಾಂತಮಾಡಿದ್ದಾರೆ. ಮತ್ತು—

"ಸರ್ವತ್ರ ಪ್ರಸಿದ್ಧೋಪದೇಶಾತ್" (೧—೨—೧) ಎಂಬ ಬ್ರಹ್ಮಸೂತ್ರದ ಭಾಷ್ಯದಲ್ಲಿ—

ಶಿಖಾಯಾಮೇಕಮೇಕಾಸ್ಯಮಿತ್ಯಾದಿನಾ ತೇಷಾಂ ವಿಧ್ಯುಕ್ತ ಶಿಖಾಶೂನ್ಯತ್ವಾತ್ ರುದ್ರಾಕ್ಷಧಾರಣಂ............ನ ಸಂಭವತಿ ||

ವೀರಶೈವಮತದಲ್ಲಿರುವ ಶೂದ್ರ ಮತ್ತು ಸಂಕರಜಾತಿಯವರಿಗೆ ವಿಧ್ಯುಕ್ತವಾದ ಶಿಖೆಯಿಲ್ಲದಿರುವುದರಿಂದ, ಅವರಿಗೆ ಶಿಖೆಯಲ್ಲಿ ರುದ್ರಾಕ್ಷ ಧಾರಣವು ಸಂಭವಿಸುವುದಿಲ್ಲವೆಂದೂ, ವೈದಿಕರಾದ ವೀರಶೈವದ್ವಿಜರಿಗೆ ವಿಧ್ಯುಕ್ತಶಿಖೆಯಿರುವುದರಿಂದ ಅವರಿಗೆ ಶಿಖೆಯಲ್ಲಿ ರುದ್ರಾಕ್ಷಧಾರಣವು ಸಂಭವಿಸುವುದೆಂದೂ ಈ ಭಾಷ್ಯಪಂಕ್ತಿಗಳಿಂದ ಪ್ರತಿಪಾದಿಸಿದ್ದಾರೆ.

ಶ್ರೀಮದ್ದಂಡಶಿಖೋಪವೀತವಿಲಸತ್ಕಂಥಾಜಿನಾಲಂಕೃತಃ
ಕಾಷಾಯಾಂಬರಕುಂಡಿಕಾಪ್ರಣವಪಾತ್ರಚ್ಛತ್ರಮೌಂಜೀಧರಃ |

ವೇದಾಂತೋಭಯವಾಕ್ಯಪ್ರಬೋಧಿತಲಸಚ್ಛಿಖ್ರೀಭಸ್ಮಘುಂಟೀ
ಯುತಃ
ಏಕೋರಾಮಯತೀಂದ್ರಶೇಖರಶಿವಾಚಾರ್ಯಃ ಸದಾ ಪಾತು ನಃ ||

ಶ್ರೀಕರಭಾಷ್ಯದ ಆದಿಯಲ್ಲಿರುವ ಈ ಮಂಗಲಪದ್ಯದಿಂದ ಶ್ರೀ ಜಗದ್ಗುರು ಏಕೋರಾಮಶಿವಾಚಾರ್ಯರು ಶಿಖಾಸೂತ್ರಭೂಷಿತರಾಗಿದ್ದರೆಂದು ಸಿದ್ಧವಾಗುತ್ತದೆ.

ಸಿದ್ಧಾಂತಶಿಖಾಮಣಿಯಲ್ಲಿ—

ಶಿಖಾಯಾಮೇಕವೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ ।
ದ್ವಿತ್ರಿದ್ವಾದಶವಕ್ತ್ರಾಣಿ ಶಿರಸಿ ತ್ರೀಣಿ ಧಾರಯೇತ್ ||೧೦||
(ಪರಿಚ್ಛೇದ. ೭)

ವೀರಶೈವನು ಶಿಖೆಯಲ್ಲಿ ಒಂದು ಮುಖದ ಒಂದು ರುದ್ರಾಕ್ಷವನ್ನು ಧರಿಸಬೇಕೆಂದು, ವೀರಶೈವಮತಸ್ಥಾಪಕರಾದ ಶ್ರೀ ಜಗದ್ಗುರು ರೇಣುಕಾಚಾರ್ಯರು ಅಪ್ಪಣೆಕೊಡಿಸಿರುತ್ತಾರೆ.

ಕ್ರಿಯಾಸಾರದಲ್ಲಿ—

ಶಿಖಾಯಾಂ ಬಾಹುಮೂಲೇ ವಾ ಕಂಠದೇಶೇ ಹೃದಂಬುಜೇ ।
ಹೃದಯೇ ಶ್ಲಾಘ್ಯಮುದಿತಂ ಶಿವಲಿಂಗಸ್ಯ ಧಾರಣಂ ||೨೩||
(ಉಪದೇಶ. ೨೦)

ಈ ಶ್ಲೋಕವು ಶಿಖಾದಿಸ್ಥಾನಗಳಲ್ಲಿ ಶಿವಲಿಂಗವನ್ನು ಧರಿಸಿಕೊಳ್ಳುವುದು ಉತ್ತಮವೆಂದು ಬೋಧಿಸುವುದರಿಂದ, ವೀರಶೈವದ್ವಿಜರಿಗೆ ಶಿಖಾಧಾರಣವು ಸಿದ್ಧಿಸುತ್ತದೆ.

ಉಷ್ಣೀಷೀ ಕಂಚುಕೀ ನಗ್ನೋ ಮುಕ್ತಕೇಶೋ ಮಲಾವೃತಃ ।
ಅಪವಿತ್ರಕರೋಽಶುದ್ಧೋ ವಿಲಪನ್ನಜಪೇತ್ ಕ್ವಚಿತ್ ||೨೧೮||
(ಉಪದೇಶ. ೧೨)

ಜಪವಿಷಯವನ್ನು ಪ್ರತಿಪಾದಿಸುವ ಸಮಯದಲ್ಲಿ, ವೀರಶೈವನು ಶಿಖೆಯನ್ನು ಬಿಚ್ಚಿಕೊಂಡು ಜಪಮಾಡಬಾರದೆಂದು ಈ ಶ್ಲೋಕವು ಬೋಧಿಸುವುದರಿಂದ ಅರ್ಥಾತ್ ಶಿಖಾಧಾರಣವು ಸಿದ್ಧಿಸುತ್ತದೆ.

ತೃತೀಯೇ ವಾ ಚತುರ್ಥೇ ವಾ ಪ್ರಾತಃ ಸ್ನಾತ್ವಾ ಸಿತಾಂಬರಃ ।
ಶುಕ್ಲಭಾಸ್ವಚ್ಛೈವಸೂತ್ರಃ ಶುಕ್ಲಭಸ್ಮಾನುಲೇಪನಃ ॥೨೩॥

(ಉಪದೇಶ. ೬)

ವೀರಶೈವನು ಶುಭ್ರವಾದ ಶಿವಸೂತ್ರದಿಂದ ಯುಕ್ತನಾಗಿರಬೇಕೆಂದು ಈ ಶ್ಲೋಕವು ಬೋಧಿಸುತ್ತದೆ.

## ಗೌತಮಸ್ಮೃತಿಯಲ್ಲಿ—

ಮುಖೇ ಮಂತ್ರೋ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಂ ।
ಶಿಖಾರುದ್ರಾಕ್ಷಭಸ್ಮಾನಿ ಇತಿ ಬ್ರಾಹ್ಮಣಲಕ್ಷಣಂ ॥

ವೀರಶೈವಬ್ರಾಹ್ಮಣನು ಮಂತ್ರಯುಕ್ತವಾದ ಮುಖದಿಂದಲೂ, ಧ್ಯಾನಯುಕ್ತವಾದ ಹೃದಯದಿಂದಲೂ, ಶಿವಲಿಂಗಯುಕ್ತವಾದ ಮಸ್ತಕದಿಂದಲೂ, ಶಿಖಾ-ರುದ್ರಾಕ್ಷ-ಭಸ್ಮಗಳಿಂದಲೂ ಯುಕ್ತನಾಗಿರಬೇಕೆಂದು ಗೌತಮಸ್ಮೃತಿಯು ಬೋಧಿಸುತ್ತದೆ.

## ವೇದಾಂತಸಾರ ವೀರಶೈವಚಿಂತಾಮಣಿಯಲ್ಲಿ—

ವ್ರತಾಂತೇ ತು ಪುನಃ ಸಮ್ಯಕ್ ಶಿಖೀ ಭವತಿ ಸೋ ಗೃಹೀ ॥೩೮॥

(ಪ್ರಕರಣ. ೧೨)

ಇದರಿಂದ ವೀರಶೈವಗೃಹಸ್ಥಾಶ್ರಮಿಯು ಶಿಖಾಧಾರಿಯಾಗಿರಬೇಕೆಂದು ಸಿದ್ಧಿಸುತ್ತದೆ.

" ನಿರಾಭಾರವೀರಶೈವೋ ಬಹಿಶ್ಶಿಖಾಂ ಬಹಿಸ್ಸೂತ್ರಂಪರಿತ್ಯಜ್ಯ "

(ಪ್ರಕರಣ. ೮)

ನಿರಾಭಾರ ವೀರಶೈವನು (ವೀರಶೈವ ಸನ್ಯಾಸಿಯು) ಬಹಿಶ್ಶಿಖೆಯನ್ನೂ, ಬಹಿಸ್ಸೂತ್ರವನ್ನೂ ಬಿಡಬೇಕೆಂದು ಬೋಧಿಸುವುದರಿಂದ, ಉಳಿದ ಆಶ್ರಮಗಳಲ್ಲಿ ವೀರಶೈವದ್ವಿಜರಿಗೆ ಶಿಖಾಸೂತ್ರಧಾರಣವು ಸ್ವತಃ ಸಿದ್ಧಿಸುತ್ತದೆ.

ವೀರಶೈವಧರ್ಮಶಿರೋಮಣಿಯಲ್ಲಿ—

ಪ್ರಕ್ಷಾಲ್ಯ ಚರಣೌ ಹಸ್ತೌ ಸಪವಿತ್ರಕರದ್ವಯಃ ।
ಶ್ವೇತವಸ್ತ್ರಃ ಸೋಪವೀತಃ ಸುಸಂಯುತಶಿಖಂಡಕಃ ॥

ವೀರಶೈವದ್ವಿಜನು ಶಿವಪೂಜಾಸಮಯದಲ್ಲಿ ಕರಚರಣಗಳನ್ನು ತೊಳೆದುಕೊಂಡು, ಪವಿತ್ರ ಹಸ್ತಗಳುಳ್ಳವನಾಗಿಯೂ, ಶ್ವೇತವಸ್ತ್ರಧಾರಿಯಾಗಿಯೂ, ಸೂತ್ರಧಾರಿಯಾಗಿಯೂ, ಕಟ್ಟಲ್ಪಟ್ಟ ಶಿಖೆಯುಳ್ಳವನಾಗಿಯೂ ಇರಬೇಕೆಂದು ವೀರಶೈವಧರ್ಮಶಿರೋಮಣಿಯ ೩ ನೆಯ ಪರಿಚ್ಛೇದದ ೫೪ ನೆಯ ಶ್ಲೋಕದ ವ್ಯಾಖ್ಯಾನದಲ್ಲಿ ಹೇಳಲ್ಪಟ್ಟಿರುವುದರಿಂದ, ವೀರಶೈವದ್ವಿಜರಿಗೆ ಶಿಖಾಸೂತ್ರಗಳು ಅವಶ್ಯವಾಗಿರಬೇಕೆಂದು ಸಿದ್ಧವಾಗುತ್ತದೆ.

ವೀರಶೈವಸದಾಚಾರಸಂಗ್ರಹದಲ್ಲಿ—

ಶಿಖಾಸೂತ್ರಜಟಾಭಸ್ಮಶಿವಲಾಂಛನಲಾಂಛಿತಃ ॥೫೭॥

(ಪ್ರಕರಣ. ೮)

ವೀರಮಾಹೇಶ್ವರನು ಶಿಖಾಸೂತ್ರಗಳೆಂಬ ಶಿವಲಾಂಛನಗಳಿಂದ ಯುಕ್ತನಾಗಿರಬೇಕೆಂದು ಈ ಶ್ಲೋಕವು ಬೋಧಿಸುತ್ತದೆ.

ಗರ್ಭಾಧಾನಾದಿಚೌಲಾಂತಕರ್ಮಭಿಃ ಸಂಸ್ಕೃತಂ ಸುತಂ ।
ದೀಕ್ಷಯೇದುಪನೀತಂ ತಂ ಯಥಾಶಾಸ್ತ್ರಂ ಗುರೂತ್ತಮಃ ॥೧॥

(ಪ್ರಕರಣ. ೧೧)

ಗರ್ಭಾಧಾನಾದಿಚೌಲಾಂತಗಳಾದ ಕರ್ಮಗಳಿಂದ ಸಂಸ್ಕೃತನಾಗಿ ಉಪನಯನವನ್ನು ಹೊಂದಿದಂಥ ವೀರಶೈವದ್ವಿಜಬಾಲಕನಿಗೆ, ಗುರುವು ಧರ್ಮಶಾಸ್ತ್ರಪ್ರಕಾರವಾಗಿ ಶಿವದೀಕ್ಷೆಯನ್ನು ಕೊಡಬೇಕೆಂದು ಈ ಶ್ಲೋಕವು ಬೋಧಿಸುವುದರಿಂದ, ಜಾತಿಸಂಸ್ಕಾರರೂಪವಾದ ಉಪನಯನವಾದ ಬಳಿಕ, ಮತಸಂಸ್ಕಾರರೂಪವಾದ ದೀಕ್ಷೆಯನ್ನು ಮಾಡಬೇಕೆಂದು ಸಿದ್ಧವಾಗುವುದು.

**ಸಿಂಹಾಸನಾಧಿಪತಿಭಿಃ ಶಿಖಾಮುದ್ರಾದಿಸಂಯುತೈಃ ।**
**ಪಂಚಮುದ್ರಾನ್ವಿತೋ ಭೂತ್ವಾ ಗುರುಃ ಪಟ್ಟಾಭಿಷೇಚಯೇತ್ ॥೧೬॥**

(ಪ್ರಕರಣ. ೧೪)

ಸಿಂಹಾಸನಾಧಿಪತಿಗಳು ಶಿಖಾಮುದ್ರಾದಿಗಳಿಂದ ಯುಕ್ತರಾಗಿರಬೇಕೆಂದು ಈ ಶ್ಲೋಕವು ಬೋಧಿಸುತ್ತದೆ.

## ವೀರಶೈವಾಚಾರಪ್ರದೀಪಿಕೆಯಲ್ಲಿ—

**ಶಯ್ಯಾಸಂಸ್ತರಣಂ ಕೃತ್ವಾ ಕೇಶಾನ್ ಸಮ್ಮಾರ್ಜಯೇನ್ನಖೈಃ ।**
**ತೈಲಾಭ್ಯಂಗಕ್ರಿಯಾಶ್ಚಾಥ ಸ್ನಾನಕರ್ಮ ಯಥಾಶುಭಂ ॥೮॥**

(ಅಧ್ಯಾಯ. ೧೦)

ವೀರಶೈವಶಿಷ್ಯನು ತನ್ನ ಗುರುವಿನ ಕೇಶಗಳಿಗೆ (ಶಿಖೆಗೆ) ತೈಲವನ್ನು ಲೇಪಿಸಿ ಸ್ನಾನಮಾಡಿಸಬೇಕೆಂದು ಈ ಶ್ಲೋಕವು ಬೋಧಿಸುವುದರಿಂದ, ವೀರಶೈವಾಚಾರ್ಯನಿಗೆ ಶಿಖಾಧಾರಣವು ಸಿದ್ಧಿಸುವುದು.

**ಏಕಂ ಶಿಖಾಯಾಮೇಕಾಸ್ಯಂ ಧಾರಯೇತ್ ಸರ್ವಸಿದ್ಧಿದಂ ॥೯॥**

(ಅಧ್ಯಾಯ. ೧೮)

ವೀರಶೈವನು ಸರ್ವಸಿದ್ಧಿಗಳನ್ನು ಕೊಡತಕ್ಕ ಒಂದು ಮುಖದ ಒಂದು ರುದ್ರಾಕ್ಷವನ್ನು ಶಿಖೆಯಲ್ಲಿ ಧರಿಸಬೇಕೆಂದು, ಈ ಶ್ಲೋಕವು ಪ್ರತಿಪಾದಿಸುತ್ತದೆ.

ಉಷ್ಣೀಷೀ ಕಂಚುಕೀ ನಗ್ನೋ ಮುಕ್ತಕೇಶೋ ಭವೇದ್ಯದಿ।
ಸಿದ್ಧಿಹಾನಿರತಃ ಕುರ್ಯಾತ್‌ಪ್ರಯೋಗೇ ಯತ್ನಪೂರ್ವಕಂ॥೧೦೩॥
(ಅಧ್ಯಾಯ. ೩೨)

ಸಿದ್ಧಿಯ ಹಾನಿಯನ್ನು ಬಯಸುವವನು ತಲೆಗೆ ವಸ್ತ್ರವನ್ನು ಕಟ್ಟಿಕೊಂಡಾಗಲಿ, ಅಂಗಿಯನ್ನು ತೊಟ್ಟುಕೊಂಡಾಗಲಿ, ಶಿಖೆಯನ್ನು ಬಿಚ್ಚಿಕೊಂಡಾಗಲಿ ಜಪಿಸಬೇಕೆಂದು ಈ ಶ್ಲೋಕವು ಬೋಧಿಸುವುದರಿಂದ ಶಿಖಾಧಾರಣವು ಸಿದ್ಧಿಸುತ್ತದೆ.

## ವೀರಶೈವದೀಕ್ಷಾವಿಧಿಯಲ್ಲಿ —

"ಬದ್ಧಶಿಖಂ ಕುಮಾರಂ ಸ್ವದಕ್ಷಿಣಭಾಗೇ ಸಮುಪವೇಶ್ಯ ತನ್ಮುಖಂ ಸಮ್ಯಗೀಕ್ಷ್ಯ"

ತಂದೆಯು (ಯಜಮಾನನು) ಶಿಖೆಯನ್ನು ಕಟ್ಟಿಕೊಂಡ ಕುಮಾರನ ಮುಖವನ್ನು ಚನ್ನಾಗಿ ನೋಡಬೇಕೆಂದು ಮಂಟಪಪ್ರವೇಶ ವಿಧಿಯಲ್ಲುಕ್ತವಾಗಿರುವುದರಿಂದ, ಶಿಖೆಯನ್ನು ಧರಿಸಬೇಕೆಂದು ಸಿದ್ಧ ವಾಗುತ್ತದೆ.

ತಿಷ್ಠ ದೇವಿ ಶಿಖಾಬಂಧೇ ಚಾಮುಂಡೇಹ್ಯಪರಾಜಿತೇ ॥

ಆಚಾರ್ಯನು ಶಿವದೀಕ್ಷೆಯನ್ನು ಅನುಗ್ರಹಿಸುವ ಸಮಯ ದಲ್ಲಿ—'ಎಲೌ ದೇವಿಯೇ, ನನ್ನ ಶಿಖೆಯ ಗಂಟಿನಲ್ಲಿ ವಾಸವಾಗಿರು' ಎಂದು ಉಚ್ಚರಿಸುವುದರಿಂದ, ಗುರುವಿಗೆ ವಿಧ್ಯುಕ್ತಶಿಖಾಧಾರಣವು ಸಿದ್ಧವಾಗುತ್ತದೆ.

"ಓಂ ಸದಾಶಿವಾಯ ನಮಃ—ಇತಿ ಶಿಖಾಯಾಂ"

ಆಚಾರ್ಯನು ಈ ಮಂತ್ರವನ್ನುಚ್ಚರಿಸಿ, ಶಿಷ್ಯನ ಶಿಖೆಯಲ್ಲಿ ಓಂದು ಮುಖದ ರುದ್ರಾಕ್ಷವನ್ನು ಧರಿಸಬೇಕೆಂದು ದೀಕ್ಷಾವಿಧಿಯು ರುದ್ರಾಕ್ಷಧಾರಣವಿಧಿಯಲ್ಲಿ ಶಾಸನಮಾಡಿರುತ್ತದೆ.

## ವಿವೇಕಚಿಂತಾಮಣಿಯಲ್ಲಿ—

### " ಶಿಖೆಗೆ ಏಕಮುಖದ ಮಣಿಯೊಂದು "

ನಿಜಗುಣಶಿವಯೋಗಿಗಳು ವಿವೇಕಚಿಂತಾಮಣಿಯ ೨ ನೆಯ ಪ್ರಕರಣದಲ್ಲಿರುವ ರುದ್ರಾಕ್ಷಧಾರಣಕ್ರಮದಲ್ಲಿ ' ಶಿಖೆಗೆ ' ಒಂದು ಮುಖದ ಒಂದು ರುದ್ರಾಕ್ಷವನ್ನು ಧರಿಸಬೇಕೆಂದು ಪ್ರತಿಪಾದಿಸಿರುವುದರಿಂದ ಶಿಖಾಧಾರಣವು ಸಿದ್ಧಿಸುತ್ತದೆ.

## ರಾಜಶೇಖರವಿಲಾಸದಲ್ಲಿ—

ಕಡುಗಲಿ ಚಂಡಿಕೆಯಂ ತ ।
ನ್ನೆಡಗೈಯಿಂದಡಸಿ ಪಿಡಿದು ಸಾರ್ಚಿ ಕೊರಲಾ ॥
ಖಡುಗಮನೆ ಘುಡಿಘುಡಿಲನೆದೆ ।
ಯುಡುಗದೆ ಕೊರೆದರರೆ ಮಡಗಿದಂ ನಿಜಶಿರಮಂ ॥೨೯॥

(ಆಶ್ವಾಸ. ೧೪)

ಸತ್ಯೇಂದ್ರಚೋಳಮಹಾರಾಜನ ಮಂತ್ರಿಯಾಗಿ ವೀರಶೈವ ಭಕ್ತಾಗ್ರಗಣ್ಯನೆನಿಸಿಕೊಂಡಿದ್ದ ' ಪತಿನೋಹಿ ' ಎಂಬವನು, ತನ್ನ ಎಡಗೈಯಿಂದ ತನ್ನ ಚಂಡಿಕೆಯನ್ನು ಹಿಡಿದುಕೊಂಡು, ತನ್ನ ಶಿರವನ್ನು ಕಡಿದುಕೊಂಡನೆಂದು ಷಡಕ್ಷರಕವಿಯು ಹೇಳಿರುವುದರಿಂದ, ಲಿಂಗಾಂಗಿಗಳಿಗೆ ಶಿಖೆಯಿರಬೇಕೆಂದು ಸಿದ್ಧವಾಗುತ್ತದೆ.

ಇವೇ ಮೊದಲಾದ ಅನೇಕ ಪ್ರಾಮಾಣಿಕ ಗ್ರಂಥಗಳಲ್ಲಿ ಶಿಖಾಸೂತ್ರಧಾರಣವು ಉಕ್ತವಾಗಿರುವುದು. ವಾಚಕರ ಅವಗಾಹನೆಗಾಗಿ ಕೆಲವು ಗ್ರಂಥಗಳ ಪ್ರಮಾಣಗಳನ್ನು ಮಾತ್ರ ಇಲ್ಲಿ ಉದಾಹರಿಸಿದ್ದಾಗಿದೆ. ಈ ರೀತಿಯಾಗಿ ಅನೇಕ ಗ್ರಂಥಗಳಲ್ಲಿ ಈ ವಿಷಯವು ಉಕ್ತವಾಗಿದ್ದರೂ, ಮುಂಡಿತಮುಂಡರು (ಬೋಳುದಲೆ ಮಹಾಶಯರು) ದುರಭಿಮಾನದಿಂದ ಇವುಗಳನ್ನು ಪರಿಗಣಿಸದೆ, ಸಮಾಜದಲ್ಲಿ ಶೂದ್ರಧರ್ಮಗಳನ್ನು ಬೋಧಿ

ಸಲುದ್ಯುಕ್ತರಾಗಿರುವುದನ್ನು ನೋಡಿದರೆ, ಇವರ ಅವಿಚಾರತನಕ್ಕೆ ಬೆಲೆಯೇ ಇಲ್ಲವೆಂದು ಹೇಳಬಹುದಾಗಿದೆ. ಅಸ್ತು!

ಈ ಮೇಲೆ ನಾವು ಉದಾಹರಿಸಿರುವ ಪ್ರಮಾಣಗಳು ಮುದ್ರಿತಗಳಾಗಿ ಸರ್ವತ್ರ ಪ್ರಚಾರದಲ್ಲಿದ್ದು ಸರ್ವರ ಕರಕಮಲಗಳಲ್ಲಿ ನಲಿದಾಡುವ ಗ್ರಂಥಗಳೊಳಗಿನವಿರುತ್ತವೆ. ಈ ರೀತಿಯಾಗಿರುವ ಗ್ರಂಥಗಳಲ್ಲಿ ಈ ಮುಂಡಿತಮುಂಡರು ತಮ್ಮ ಅಮಂಗಲಪಕ್ಷವನ್ನು ಸಾಧಿಸುವುದಕ್ಕಾಗಿ ಒಂದು ಪ್ರಮಾಣವನ್ನಾದರೂ ತೋರಿಸಬಲ್ಲರೋ? ವೀರಶೈವಸನ್ಯಾಸಿಗಳ ವಿಷಯದಲ್ಲಿಯೂ, ವೀರಶೈವಶೂದ್ರರ ವಿಷಯದಲ್ಲಿಯೂ ಇರತಕ್ಕ ಶ್ಲೋಕಗಳನ್ನು ವೀರಶೈವದ್ವಿಜರಿಗೆ ಸಂಬಂಧಿಸಿ ನುಡಿಯುತ್ತಿರುವುದು ಮಹಾಪಾಪಕರವಾದ ಕಾರ್ಯವಾಗಿದೆ. ಆದುದರಿಂದ ಮುಂಡನಾಭಿಮಾನಿಗಳಾದ ಮುಂಡಿತಮುಂಡರು ಇನ್ನುಮುಂದೆ ಯಾರಿಗೆ ಶಿಖಾಸೂತ್ರಗಳಿರಬೇಕು, ಯಾರಿಗೆ ಇರಬಾರದೆಂಬ ಧರ್ಮಶಾಸ್ತ್ರರಹಸ್ಯವನ್ನು ತಿಳಿದುಕೊಂಡು ಪರಶಿವನ ಕೃಪೆಗೆ ಪಾತ್ರರಾಗಬೇಕು. ಮುಗ್ಧ ಜನರನ್ನು ವಂಚಿಸುವುದಕ್ಕಾಗಿ ವಂಚಕರಿಂದ ಕಲ್ಪಿಸಲ್ಪಟ್ಟ ಅಮಂಗಲಶ್ಲೋಕಗಳನ್ನು ಶಿವಾಗಮಶ್ಲೋಕಗಳೆಂದು ಬರೆದು, ಇಹದಲ್ಲಿಯೂ ಪರದಲ್ಲಿಯೂ ಶಿವನ ವ್ಯಾಕೋಪಕ್ಕೆ ಗುರಿಯಾಗಬಾರದೆಂದು ಅತ್ಯಂತ ಪ್ರೇಮಭಾವದಿಂದ ಸೂಚಿಸುತ್ತೇವೆ. ವಾಚಕಮಹಾಶಯರು ಈ ಗ್ರಂಥವನ್ನೆಲ್ಲಾ ಸಂಪೂರ್ಣವಾಗಿ ಓದಿನೋಡಿ, ನಿಜವಾದ ವೈದಿಕಮಾರ್ಗವನ್ನು ಅನುಸರಿಸಿ, ಜಗದೀಶ್ವರನ ಕೃಪೆಗೆ ಪಾತ್ರರಾಗಬೇಕೆಂದು ಕೋರುತ್ತೇವೆ.

ಬಿ. ಗುರುಸಿದ್ಧಶಾಸ್ತ್ರೀ.



ನಾಗನೂರು ಬೃಹನ್ಮಠಾಧ್ಯಕ್ಷರಾದ
ಪಂಡಿತ ಶ್ರೀಕಾಶೀನಾಥಶಾಸ್ತ್ರಿಗಳವರು

ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು.

# ಶಿಖಾಸೂತ್ರಸಿದ್ಧಾಂತದರ್ಪಣ.

**ಶಿಖಾಭೂಷಂ ಶಿಖಾವಾಸಂ ಶಿಖಾಶೂನ್ಯಪ್ರಶಾಸಕಂ ।**
**ಸುರಸಂಘಶಿಖಾರತ್ನಂ ಶಿಖಿನೇತ್ರಂ ಶಿವಂ ಭಜೇ ॥**

ಶಿಖಾಸೂತ್ರಗಳನ್ನು ಧರಿಸಕೂಡದೆಂದು ದುರಾಗ್ರಹದಿಂದ ಸಾಧಿಸುವುದರ ಮೂಲಕ, ಕೇವಲ ಶೂದ್ರಧರ್ಮಗಳನ್ನು ಬೋಧಿಸಲು ದ್ಯುಕ್ತನಾಗಿ 'ಶಿಖಾಸೂತ್ರವಿಮರ್ಶ' ವೆಂಬ ಅಮಂಗಲ ಪುಸ್ತಕವನ್ನು ಬಕದಿರುವ ಕಲಿಗಣನಾಥಶಾಸ್ತ್ರಿಯೆಂಬಾತನು ತನ್ನ ಪುಸ್ತಕದ ಆದಿ ಯಲ್ಲಿ—

ನಮಾಮಿ ಸಕಲಾಧಾರಮನಾಧಾರಂ ಮಹೇಶ್ವರಂ ।
ಶಿಖಾದೂರಂ ಜಟಾಧಾರಂ ಸಾರವೀರಮಠಪ್ರಭುಂ ॥

ಎಂದು ಮಂಗಲಶ್ಲೋಕವನ್ನು ಬರೆದಿರುತ್ತಾನೆ. ಶಿವತತ್ತ್ವಜ್ಞಾನವಿಲ್ಲದೆ ಬರೆದಿರುವ ಈತನ ಈ ಮಂಗಲಶ್ಲೋಕವು ಅಮಂಗಲಶ್ಲೋಕ ವಾಗಿ ಪರಿಣಮಿಸಿದೆ. ಈತನು ತನ್ನ ಮಂಗಲಶ್ಲೋಕದಲ್ಲಿ ಶಿವನಿಗೆ 'ಶಿಖಾದೂರಂ' ಎಂಬ ಅಮಂಗಲವಿಶೇಷಣವನ್ನು ಕೊಟ್ಟಿರುವುದು ಕೇವಲ ಮಂದತನವು. ಏಕೆಂದರೆ—ಅಣುರೇಣುತೃಣಕಾಷ್ಠಾದಿಗಳಲ್ಲಿ ತುಂಬಿಕೊಂಡಿರುವ ಶಿವನು ಯಾವುದಕ್ಕೂ ದೂರನಾಗಿಲ್ಲ. ಈ ವಿಷಯ ದಲ್ಲಿ "ತಸ್ಮಾತ್ ಸರ್ವಗತಃ ಶಿವಃ" "ವಿಭುಂ ಸರ್ವಗತಂ" ಇತ್ಯಾದಿ ಶ್ವೇತಾಶ್ವತರಕಠವಲ್ಲೀಶ್ರುತಿವಾಕ್ಯಗಳೇ ಬಲವಾದ ಸಾಕ್ಷಿಗ ಳಾಗಿವೆ.

**ಶಿಖಾಯಾಂ ಬಾಹುಮೂಲೇ ವಾ ಕಂಠದೇಶೇ ಹೃದಂಬುಜೇ ।**
**ಹೃದಯೇ ಶ್ಲಾಘ್ಯಮುದಿತಂ ಶಿವಲಿಂಗಸ್ಯ ಧಾರಣಂ ॥೨೩॥**

ಎಂದು ಕ್ರಿಯಾಸಾರದ ೨೦ ನೆಯ ಉಪದೇಶದಲ್ಲಿ ಶಿಖೆಯೊಳಗೆ ಲಿಂಗ ಧಾರಣವು ಹೇಳಲ್ಪಟ್ಟಿರುವುದರಿಂದ, ಶಿವನು ಶಿಖಾದೂರನಾಗಿರದೆ ಇಷ್ಟ ಲಿಂಗರೂಪದಿಂದ ವಿಧ್ಯುಕ್ತ ಶಿಖೆಯಲ್ಲಿರುವವನೂ, ಚಂದ್ರನನ್ನು ತನ್ನ ಶಿಖೆಯಲ್ಲಿ ಧರಿಸಿದವನಾದುದರಿಂದ ಶಿಖೆಯುಳ್ಳವನೂ ಆಗಿದ್ದಾನೆ. ಅಲ್ಲದೆ ಮಹಾನ್ಯಾಸಗ್ರಂಥದಲ್ಲಿ ಶಿವನಿಗೆ 'ಶಿಖಿನೇ ನಮಃ' ಎಂದು ಹೇಳಲ್ಪಟ್ಟಿರುವುದರಿಂದಲೂ, 'ಹೇ ಚಂದ್ರಚೂಡ ಮದನಾಂತಕ ಶೂಲಪಾಣೇ' ಇತ್ಯಾದಿ ಶಿವಸ್ತುತಿಗಳಲ್ಲಿ ಶಿವನಿಗೆ ಶಿಖಾಶಬ್ದ ಪರ್ಯಾಯನಾಮವಾದ ಚೂಡಾಶಬ್ದವು ಪ್ರಯೋಗಿಸಲ್ಪಟ್ಟಿರುವುದರಿಂದಲೂ, ಶಿವನು ಶಿಖಾಭೂಷಿಯೆಂಬುದು ಚಿಕ್ಕಚಿಕ್ಕ ಬಾಲಕರಿಗೂ ಸಹ ತಿಳಿಯುವಂತಿದೆ. 'ಪ್ರಥಮಚುಂಬನೇ ದಂತಭಂಗಃ' ಎಂಬಂತೆ ಈ ಘನಪಂಡಿತನ ಪಾಂಡಿತ್ಯವು ಈತನ ಮಂಗಲಶ್ಲೋಕದಲ್ಲಿಯೇ ಹೊರಬಿದ್ದಿರುತ್ತದೆ. ಸಾಧಾರಣವಾದ ಒಂದು ಶ್ಲೋಕವನ್ನು ಬರೆಯಲು ಸಹ ಶಕ್ತಿಯಿಲ್ಲದ ಈತನು ಬರೆದಿರುವ ಪುಸ್ತಕದ ಯೋಗ್ಯತೆಯು ಎಷ್ಟರಮಟ್ಟಿಗಿರಬಹುದೆಂಬುದನ್ನು ಕುಶಲಮತಿಗಳಾದ ವಾಚಕರೇ ಕಂಡುಹಿಡಿಯಬಹುದಾಗಿದೆ. ಈತನು ತನ್ನ ಮಂಗಲಶ್ಲೋಕದಲ್ಲಿ ಶಿವನಿಗೆ 'ಸಕಲಾಧಾರಂ' ಎಂಬ ವಿಶೇಷಣವನ್ನು ಕೊಟ್ಟು, ಪುನಃ 'ಶಿಖಾದೂರಂ' ಎಂಬ ವಿಶೇಷಣವನ್ನು ಕೊಟ್ಟಿರುವುದನ್ನು ನೋಡಿದರೆ, ಈತನ ಬುದ್ಧಿಯು ಮೇರುಪರ್ವತದಷ್ಟು ಗಡುತರವಿರಬಹುದೆಂದು ತೋರಿಬರುತ್ತದೆ. ಸಕಲಕ್ಕೂ ಆಧಾರನಾದ ಶಿವನು ಶಿಖೆಗೆ ಹೇಗೆ ದೂರನಾಗುವನು ? ಎಂಬೀ ವಿಷಯವು ಈತನಿಗೆ ಹೊಳೆಯದಿರುವುದು ಮಂದಬುದ್ಧಿಯ ಪ್ರಭಾವವೆಂದೇ ಹೇಳಬೇಕಾಗಿದೆ. ಶಿವನ ವಿಷಯದಲ್ಲಿ ಈ ಘನಪಂಡಿತನು ಕೊಟ್ಟಿರುವ ವಿಶೇಷಣಗಳು, ಪಂಚಪಾಂಡವರು ಮಂಚದ ಕಾಲಿನಂತೆ ಮೂವರೆಂದು ಎರಡು ಬೆರಳುಗಳನ್ನು ತೋರಿಸಿ ಒಂದು ಎಂದು ನುಡಿಯುವ ಹುಚ್ಚನ ಮಾತಿನಂತಿವೆ. ಅಸ್ತು !

ಈತನು ತನ್ನ ಪುಸ್ತಕದ ಆರಂಭದಲ್ಲಿ—

> ವಿಶುದ್ಧಾಃ ಪ್ರಾಕೃತಾಶ್ಚೇತಿ ದ್ವಿವಿಧಾ ಮಾನುಷಾಃ ಸ್ಮೃತಾಃ |
> ಶಿವಸಂಸ್ಕಾರಿಣಃ ಶುದ್ಧಾಃ ಪ್ರಾಕೃತಾ ಇತರೇ ಮತಾಃ ||

ಎಂಬ ಸಿದ್ಧಾಂತಶಿಖಾಮಣಿಯ ಶ್ಲೋಕವನ್ನುದಾಹರಿಸಿ 'ಪ್ರಾಕೃತಾಃ' ಎಂಬುದಕ್ಕೆ 'ಪ್ರಕೃತೇರಿಮೇ ಪ್ರಾಕೃತಾಃ' ಎಂದು ವಿಗ್ರಹಮಾಡಿ, ಆಣವಾದಿಮಲತ್ರಯಸ್ವರೂಪವಾದ ಪ್ರಕೃತಿಯ ಸಂಬಂಧವುಳ್ಳವರೇ ಪ್ರಾಕೃತರೆಂದು ಅರ್ಥಮಾಡಿದ್ದಾನೆ. ಅಹಾ! ಏನು ಪಾಂಡಿತ್ಯವಿದು? ಈ ಪ್ರಕಾಂಡಪಂಡಿತನ ಪಾಂಡಿತ್ಯದ ಪ್ರಭಾವವನ್ನು ಪಂಡಿತಮಂಡಲಿಯು ಕಂಡು ಬೆರಗಾಗಿರಬಹುದು. ಪಾಪ! ಈ ಮುಂಡನವಾದಿಗೆ ತತ್ತ್ವಶಾಸ್ತ್ರದ ಪರಿಚಯವೆಲ್ಲಿ? ತತ್ತ್ವಶಾಸ್ತ್ರದಲ್ಲಿ ಬಾಲಕನಾಗಿರುವ ಈತನಿಗೆ ಶಾಸ್ತ್ರಾನುಸಾರವಾಗಿ ಪ್ರಕೃತಿಯ ನಿಜಸ್ವರೂಪವನ್ನು ಬೋಧಿಸೋಣ! ಮುಂಡನವಾದಿಯೇ ಕೇಳು; ಪ್ರಕೃತಿಯು ತ್ರಿಮಲಗಳ ಸ್ವರೂಪವಲ್ಲ; ಅದು ತನ್ನ ಕಾರ್ಯರೂಪಗಳಾದ ೨೩ ತತ್ತ್ವಗಳನ್ನೊಳಕೊಂಡು ಸ್ಥೂಲದೇಹವೆನಿಸಿ ಕಾರ್ಮಿಕಮಲಸ್ವರೂಪವಾಗಿರುವುದೇ ಹೊರತು ತ್ರಿಮಲಗಳ ಸ್ವರೂಪವಾಗಿಲ್ಲ. ಈ ವಿಷಯದಲ್ಲಿ—

> ಪರಮಾವರಣಂ ಮಲ ಇಹ ಸೂಕ್ಷ್ಮಂ ಮಾಯಾದಿಕಂಚುಕಂ ಸ್ಥೂಲಂ |
> ಬಾಹ್ಯಂ ವಿಗ್ರಹರೂಪಂ ಕೋಶತ್ರಯವೇಷ್ಟಿತೋಹ್ಯಾತ್ಮಾ ||

ಎಂಬ ಪರಮಾರ್ಥಸಾರದ ಶ್ಲೋಕವು ಪ್ರಮಾಣವಾಗಿರುತ್ತದೆ.

ಈ ಶ್ಲೋಕಕ್ಕೆ ಯೋಗರಾಜಾಚಾರ್ಯರು—

ಚೈತನ್ಯಸ್ಯ ಸ್ವಸ್ವರೂಪಾಪಹಸ್ತನಸತತತ್ವಾ ಅಖ್ಯಾತಿರೇವ ಆಣವೋ ಮಲಃ | ಅಂತರಃ ಸ್ವರ್ಣಸ್ಯ ಕಾಲಿಕೇವ ಪರಂ ಅಂತರಂಗಂ ಆವರಣಂ ಛಾದನಂ ತಾದಾತ್ಮ್ಯೇನ ಸ್ಥಿತತ್ವಾತ್ ಮಾಯಾದಿವಿದ್ಯಾಂತಂ ಕಂಚುಕಷಟ್ಕಂ ಸೂಕ್ಷ್ಮಂ ಆತ್ಮನಃ ಆವರಣಂ

ತಂಡುಲಸ್ಯ ಕಂಬುಕಮಿವ ಆವರಣಂ ಪೃಷ್ಠಪಾತಿತ್ವೇನ ಆಸ್ತೇಯೇನ ಭೇದಮಯಿಮಾ ಜ್ಞಾತೃಕರ್ತೃತ್ವಾದಿಪ್ರಥಾ ಪ್ರಥತೇ ಇತಿ ಏಷ ಮಾಯೀಯೋ ಮಲಃ । ಏತದಪೇಕ್ಷಯಾ ಬಾಹ್ಯಂ ತುಷಸ್ಥಾನೀಯಂ ಪ್ರಾಧಾನಿಕಂ ಶರೀರಸತ್ತಾಲಕ್ಷಣಂ ಆವರಣಂ ಸ್ಥೂಲಂ ತ್ವಙ್ಮಾಂಸಾದಿರೂಪತ್ವಾತ್ ಏಷ ತೃತೀಯಃ ಕಾರ್ಮೋ ಮಲಃ । ಯೇನ ಪ್ರಮಾತಾ ಶುಭಾಶುಭಕರ್ಮಪ್ರಚಯಭಾಜನಂ ಭವತಿ । ಏವಮನೇನ ಪರಮಸೂಕ್ಷ್ಮಸ್ಥೂಲರೂಪೇಣ ಕೋಶತ್ರಯೇಣ ವೇಷ್ಟಿತಃ ವಿಕಸ್ವರೋಪಿ ಘಟಾಕಾಶವತ್ ಸಂಕುಚಿತೀಕೃತಃ ಆತ್ಮಾ ಇತಿ ಅಣುರಿತಿ ಪಶುರಿತ್ಯುಚ್ಯತೇ ॥

ಎಂದು ವ್ಯಾಖ್ಯಾನಮಾಡಿರುವರು. ಈ ವ್ಯಾಖ್ಯಾನದಲ್ಲಿ ಪ್ರಕೃತಿಯು (ಪ್ರಧಾನವು) ತ್ರಿಮಲಗಳ ಸ್ವರೂಪವಲ್ಲವೆನ್ನುವುದು ಬಾಲಕರಿಗೂ ಸಹ ತಿಳಿಯುವಂತಿದೆ. ಇರಲಿ; ಶ್ರೀ ರೇಣುಕಭಗವತ್ಪಾದರು ಸಿದ್ಧಾಂತಶಿಖಾಮಣಿಯಲ್ಲಿ "ಶಿವಸಂಸ್ಕಾರಿಣಃ ಶುದ್ಧಾಃ ಪ್ರಾಕೃತಾ ಇತರೇ ಮತಾಃ" ಎಂದು ಅಪ್ಪಣೆಕೊಡಿಸಿರುವುದರಿಂದ 'ಪ್ರಾಕೃತಾಃ' ಎಂಬುದಕ್ಕೆ ಶಿವಸಂಸ್ಕಾರರಹಿತರೆಂದು ಅರ್ಥವಾಗುತ್ತದೆ. ಈ ಶಬ್ದಕ್ಕೆ ಗುರುಬಾಲಪ್ರಬೋಧಿಕಾಕಾರರು "ಪ್ರಕೃತೌ ಯಥಾಜಾತಭಾವೇ ವರ್ತಮಾನಃ ಇತಿ ಪ್ರಾಕೃತಃ" ಎಂದು ವಿಗ್ರಹಮಾಡಿರುವರು. ಈ ವಿಗ್ರಹವು ರೇಣುಕಭಗವತ್ಪಾದರ ಅಭಿಪ್ರಾಯವನ್ನನುಸರಿಸಿರುವುದು. ಈ ರಹಸ್ಯವನ್ನು ತಿಳಿಯದೆ ಮತಸ್ಥಾಪನಾಚಾರ್ಯರ ವಚನಕ್ಕೆ ವಿರೋಧವಾಗಿ ಅಪಾರ್ಥವನ್ನು ಕಲ್ಪಿಸುವುದು ಸ್ವಸಿದ್ಧಾಂತಜ್ಞಾನಶೂನ್ಯತೆಯ ಹೆಗ್ಗುರುತಾಗಿದೆ. ಸಕಲಪ್ರಮಾತೃವೆನಿಸುವ ಜೀವನಿಗೆ ಮೂರು ಮಲಗಳುಂಟು. ಆ ಮೂರು ಮಲಗಳು ಶಿವಸಂಸ್ಕಾರದಿಂದ ಲಯವಾಗುತ್ತವೆ. "ಪ್ರಕೃತೇರಿಮೇ ಪ್ರಾಕೃತಾಃ" ಎಂದು ವಿಗ್ರಹಮಾಡಿದರೆ ಕೇವಲ ಕಾರ್ಮಿಕಮಲವುಳ್ಳವರೇ ಪ್ರಾಕೃತರಾಗುವರು. ಇವರು ಕೇವಲ ಕ್ರಿಯಾದೀಕ್ಷೆಯಿಂದಲೇ ಶುದ್ಧರಾಗಬೇಕಾಗುವುದು. ಅಂದಮೇಲೆ ಮನುವೇಧಾ

ದೀಕ್ಷೆಗಳು ವ್ಯರ್ಥಗಳಾಗಬೇಕಾಗುವುವು. ಪ್ರಕೃತಿಯಂತೂ ಮಲತ್ರಯ ಸ್ವರೂಪವಾಗಿರದೆ ಕೇವಲ ಕಾರ್ಮಿಕಮಲಸ್ವರೂಪವಾಗಿರುವುದು. ಈತನು ತೋರಿಸಿದ ವಿಗ್ರಹದಿಂದ ಮಲತ್ರಯವುಳ್ಳವರು ಪ್ರಾಕೃತರೆಂದು ಅರ್ಥವೇ ಆಗುವುದಿಲ್ಲ. ಪ್ರಕೃತಿಯು ತನ್ನ ಕಾರ್ಯರೂಪಗಳಾದ ೨೩ ತತ್ತ್ವಗಳನ್ನೊಳಕೊಂಡು ದೇಹರೂಪವಾದ ಕಾರ್ಮಿಕಮಲಸ್ವರೂಪವಾಗಿದ್ದರೂ, ಮಾಯಿಯಾಣವಮಲಗಳ ಸ್ವರೂಪವಾಗಿಲ್ಲ. ಆ ಮಾಯಿಯಾಣವಮಲಗಳು ಕಾರ್ಮಿಕಮಲಕ್ಕೆ ಕಾರಣಗಳಾಗಿವೆ. ಮೂರು ಮಲಗಳುಳ್ಳವರು ಪ್ರಾಕೃತರೆಂದು ಹೇಳಬೇಕಾದರೆ ಗುರುಬಾಲಪ್ರಬೋಧಿಕಾಕಾರರ ವಿಗ್ರಹವನ್ನೇ ಅಂಗೀಕರಿಸಬೇಕು. ಪ್ರಾಕೃತಶಬ್ದಕುಕ್ಷಿನಿಕ್ಷಿಪ್ತವಾದ ಪ್ರಕೃತಿಯು ಷಟ್‌ತ್ರಿಂಶತ್ತತ್ತ್ವಘಟಕವಾದ ತ್ರಿಗುಣಾತ್ಮಕಪ್ರಕೃತಿಯೆಂದು ರೇಣುಕಭಗವತ್ಪಾದರ ತಾತ್ಪರ್ಯವಿಲ್ಲ. ಸಾಮಾನ್ಯವಾಗಿ ಶಿವಸಂಸ್ಕಾರಶೂನ್ಯರೆಲ್ಲರೂ ಪ್ರಾಕೃತರೆಂಬಲ್ಲಿ ಅವರ ತಾತ್ಪರ್ಯವಿದೆ. ಶಿವಸಂಸ್ಕಾರಶೂನ್ಯರಿಗೆ ತ್ರಿಮಲಗಳು ಇದ್ದೇಇರುವುವು. ತ್ರಿಮಲಗಳುಳ್ಳವರೆಂಬರ್ಥವು ಪ್ರಾಕೃತಶಬ್ದದಿಂದ ಹೊರಡಬೇಕಾದರೆ ಗುರುಬಾಲಪ್ರಬೋಧಿಕಾಕಾರರು ವಿಗ್ರಹಮಾಡಿದಂತೆ ಮಾಡದಿದ್ದರೆ ಗತಿಯೇ ಇಲ್ಲ. ಅಸ್ತು ! ಇಲ್ಲಿಯವರೆಗೆ ನಾವು ವೀರಶೈವಸಿದ್ಧಾಂತಕ್ಕನುಸಾರವಾಗಿ ಪ್ರತಿಪಾದಿಸಿದ ಪ್ರಾಕೃತಶಬ್ದದ ರಹಸ್ಯವನ್ನು ಈತನು ಚನ್ನಾಗಿತಿಳಿದುಕೊಂಡು ಧನ್ಯಜೀವಿಯಾಗಲಿ. ಸಾಧಾರಣವಾಗಿ ಪ್ರಾಕೃತಶಬ್ದಜ್ಞಾನವಿಲ್ಲದ ಈ ಮುಂಡಿತಮುಂಡನಿಗೆ ಅಪಾರವಾದ ವೀರಶೈವತತ್ತ್ವಶಾಸ್ತ್ರದಲ್ಲಿ ಜ್ಞಾನವು ಎಷ್ಟರಮಟ್ಟಿಗಿದ್ದಿರಬಹುದೆಂಬ ವಿಷಯವನ್ನು ವಾಚಕರೇ ತಿಳಿದುಕೊಳ್ಳಬಹುದು. ಇರಲಿ ;

ಇದಾದಮೇಲೆ ಈ ಮುಂಡಿತಮುಂಡನು—

"ಮಲತ್ರಯವು 'ಚಿದ್ವತ್ತಿಚ್ಛಕ್ತಿಸಂಕೋಚಾನ್ಮಲಾವೃತಃ ಸಂಸಾರೀ' ಎಂಬೀ ಸೂತ್ರದಂತೆ ಚಿದಾತ್ಮನಾದ ಪರಮಾತ್ಮನ ಅಸಂಕುಚಿತಗಳಾದ ಇಚ್ಛಾಜ್ಞಾನಕ್ರಿಯಾ

ಶಕ್ತಿಗಳ ಸಂಕೋಚದಿಂದುತ್ಪನ್ನವಾಗಿ ಚಿದಾತ್ಮನನ್ನು ಆವರಿಸಿಕೊಳ್ಳುವುದು, ಅದರಿಂದ ಚಿದಾತ್ಮನು ಸಂಸಾರಿಯೆಂದು ವ್ಯವಹರಿಸಲ್ಪಡುವನು"

ಎಂದು ಬರೆದಿರುವನು. ಹೀಗೆ ಬರೆದಿರುವುದು ಕೇವಲ ಮಂದತನವು. ಏಕೆಂದರೆ—ನಿತ್ಯನಿರ್ಮಲನೂ ಚಿದಾತ್ಮನೂ ಆದ ಪರಮಾತ್ಮನನ್ನು ಮಲತ್ರಯವು ಎಂದಾದರೂ ಆವರಿಸುವುದುಂಟೇ? "ಶ್ರೀನಾಥಂ ನೌಮಿ ಶಾಂತಂ ತ್ರಿಗುಣಮಲಮಹಂ" "ಶಿವಃಸ್ವಚ್ಛಪ್ರಕಾಶಃ" ಎಂದು ಸ್ವಪ್ರಭಾನಂದಶಿವಾಚಾರ್ಯರೂ, "ನಿತ್ಯಶುದ್ಧಬುದ್ಧಮುಕ್ತ ಸ್ವಭಾವಃ" ಎಂದು ಶಂಕರಾಚಾರ್ಯರೂ, "ತಮಸಃ ಪರಸ್ತಾತ್" "ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಂ" ಇವೇ ಮೊದಲಾದ ಅನಂತಶ್ರುತಿಗಳೂ ಪರಮಾತ್ಮನು ಮಲಗಳಿಂದ ಆವರಣವಿಲ್ಲದೆ ಸ್ವಚ್ಛಪ್ರಕಾಶನಾಗಿರುವನೆಂದು ಸಾರುತ್ತಿರಲು, ಅವನಿಗೆ ಮೂರು ಮಲಗಳ ಸಂಬಂಧವನ್ನು ಹೇಳುವುದು ಮಹಾಪಾಪವಲ್ಲವೆ?

ಸ್ವಾಂತರ್ಲೀನಚರಾಚರಾತ್ ಪರಮೇಶ್ವರಾತ್ ಕಾಷ್ಠಯೋಗೇನ ವಹ್ನೇರ್ವಿಸ್ಫುಲಿಂಗಾವಿರ್ಭಾವವತ್ ತದಿಚ್ಛಾಶಕ್ತಿವಶಾತ್ ವಿಭಕ್ತಃಸನ್ ಉಕ್ತಲಕ್ಷಣಮಾಯಾಶಕ್ತೌ ಪ್ರತಿಬಿಂಬಗತ್ಯಾ ಪ್ರವಿಷ್ಟೋ ಯಃ ಪ್ರಕಾಶಃ ಸ ಪುರುಷತತ್ತ್ವಂ ಭವತಿ। ಅಸ್ಯಸ್ವತಂತ್ರಸ್ವಪ್ರಕಾಶಮಹೇಶ್ವರಾದ್ವಿಚ್ಛಿನ್ನತ್ವೇನ ಮಾಯಾಕ್ರಾಂತತ್ವಾತ್ ನಾಹಮೀಶ್ವರ ಇತ್ಯಾತ್ಮನ್ಯನಾತ್ಮತಾಜ್ಞಪ್ತಿರಾವಿರ್ಭವತಿ । ತಥೈವಾನಾತ್ಮನಿ ದೇಹಾದಾವಾತ್ಮತಾಜ್ಞಪ್ತಿಶ್ಚ ಏತದ್ದ್ವಯಮಾಣವಂ । ತತಏವ ಶುಭಾಶುಭವಾಸನಾರೂಷಿತ ಕಾರ್ಮಮಲಂ । ಅನ್ಯೋನ್ಯಾಭಾವಲಕ್ಷಣಮಾಯಿಕಮಲಂ ಚ ಪ್ರಾಪ್ತಂ ಭವತಿ । ಏವಂವಿಧಮಲತ್ರಯಶೃಂಖಲಿತತ್ವಾದೇವ ಸಂಸಾರೀತ್ಯುಚ್ಯತೇ ॥

ಎಂಬೀ ಶಿವಾದ್ವೈತಮಂಜರಿಯ ಪಂಕ್ತಿಗಳಿಂದ ಮಲತ್ರಯ ಶೃಂಖಲಿತನು ಚಿದಾತ್ಮನಲ್ಲವೆಂದೂ, ಕಾಷ್ಠಯೋಗದಿಂದ ವಿಭಕ್ತಗಳಾದ ವಿಸ್ಫುಲಿಂಗಗಳಂತೆ ಪರಮೇಶ್ವರನ ಇಚ್ಛಾಶಕ್ತಿಯಿಂದ ವಿಭಕ್ತವಾದ ಪ್ರಕಾಶವು (ಶುದ್ಧಶಿವಾಂಶರೂಪನಾದ ಆತ್ಮನು) ಮಲತ್ರಯಶೃಂಖಲಿತ ನಾಗಿರುವನೆಂದೂ ಸ್ಪಷ್ಟವಾಗುತ್ತದೆ.

**ಯಸ್ಯೋರ್ಮಿಬುದ್ಬುದಾಭಾಸಃ ಷಟ್‌ತ್ರಿಂಶತ್ತತ್ತ್ವಸಂಚಯಃ ।**
**ನಿರ್ಮಲಂ ಶಿವನಾಮಾನಂ ತಂ ವಂದೇ ಚಿನ್ಮಹೋದಧಿಂ ॥**

ಎಂಬ ಸಿದ್ಧಾಂತಶಿಖಾಮಣಿಯ ಶ್ಲೋಕದಲ್ಲಿರುವ '**ನಿರ್ಮಲಂ**' ಎಂಬ ಪದಕ್ಕೆ ಮರಿತೋಂಟದಾರ್ಯರು "**ಮಲತ್ರಯರಹಿತಂ**" ಎಂದು ಅರ್ಥಮಾಡಿರುವರು. ಶಿವನಾಮಕವಾದಚಿತ್ಸಮುದ್ರಕ್ಕೆ "**ನಿರ್ಮಲಂ**" ಎಂದು ವಿಶೇಷಣವನ್ನು ಕೊಟ್ಟಿರುವುದರಿಂದ ಪರಮಾತ್ಮನು ನಿತ್ಯ ನಿರ್ಮಲನೆಂದು ಸ್ಪಷ್ಟವಾಗುತ್ತದೆ. ಹೀಗಿದ್ದರೂ ಚಿದಾತ್ಮನನ್ನು (ಚಿತ್‌ಸ್ವರೂಪನಾದ ಶಿವನನ್ನು) ಮಲತ್ರಯವು ಆವರಿಸಿಕೊಳ್ಳುವು ದೆಂದು ಹೇಳಿರುವುದು ಅತ್ಯಂತ ಪಾಪಕರವಿಷಯವಾಗಿದೆ. ಶಿವಶಾಸ್ತ್ರದ ಗಂಧವನ್ನೂ ಸಹ ಅರಿಯದ ಈ ವಿಕಟಪಂಡಿತನು ಪರಶಿವತತ್ತ್ವ ವನ್ನು ತಿಳಿಯದೆ ಮನಸ್ಸಿಗೆ ಬಂದಹಾಗೆ ಬರೆದು ಅವನ ಅವಕೃಪೆಗೆ ತಾನು ಭಾಗಿಯಾಗಿರುವನಲ್ಲದೆ ತನ್ನ ಅಮಂಗಲಪುಸ್ತಕವನ್ನೋದಿ ದವರನ್ನೂ ಕೂಡ ಭಾಗಿಗಳನ್ನಾಗಿ ಮಾಡಿರುವನು. ಈತನ ಈ ತರಹದ ಸಿದ್ಧಾಂತವಿರುದ್ಧವಾದ ಬರವಣಿಗೆಗೆ ಶತಶಃ ಧಿಕ್ಕಾರ ವಿರಲಿ. ಅಸ್ತು! ಆತ್ಮಸ್ವರೂಪವೇನೆಂದರೆ—ಕಾಷ್ಠಯೋಗದಿಂದ ವಿಭ ಕ್ತಗಳಾದ ಅಗ್ನಿಯ ಕಿಡಿಗಳಂತೆ ಮಹೇಶ್ವರನಿಂದ ವಿಭಕ್ತವಾದ ಪ್ರಕಾ ಶವೇ ಶಿವಾಂಶರೂಪನಾದ ಆತ್ಮನು. ಇವನು ಯಾವುದೊಂದೂ ಉಪಾ ಧಿಯಿಲ್ಲದವನಾದುದರಿಂದ ಸೂರ್ಯನ ಪ್ರಕಾಶವು ಸೂರ್ಯನಿಗೆ ಅಭಿನ್ನ

ವಾಗಿರುವಂತೆ ಶಿವನಿಗೆ ಅಭಿನ್ನನಾಗಿರುವನು. ಇವನೇ ಶಿವನಿಗೆ ಅಂಗ ವೆನಿಸುವನು. ಈ ವಿಷಯದಲ್ಲಿ—

ಆತ್ಮಾಯಂ ಕೇವಲಃ ಶುದ್ಧಃ ಶಿವಸ್ಯಾಂಶಸ್ಸದಾಮಲಃ ।
ನಿತ್ಯೋ ನಿರಂಜನಶ್ಯಾಂತಸ್ತಸ್ಮಾದಾತ್ಮಾ ಸ್ವಯಂ ಶಿವಃ ॥
ಸ್ವಶಕ್ತಿಕ್ಷೋಭಮಾತ್ರೇಣ ಸ್ಥಲಂ ತದ್ದ್ವಿವಿಧಂ ಭವೇತ್ ।
ಏಕಂ ಲಿಂಗಸ್ಥಲಂ ಪ್ರೋಕ್ತಮನ್ಯದಂಗಸ್ಥಲಂ ಭವೇತ್ ॥

ಎಂಬ ಅನುಭವಸೂತ್ರದ ವಾಕ್ಯಗಳೇ ಪ್ರಮಾಣಗಳಾಗಿವೆ.

ಆತ್ಮನು ಶಿವಾಂಶವೆಂಬ ವಿಷಯವನ್ನು "ಯಥಾ ಸುದೀಪ್ತಾತ್ ಪಾವಕಾತ್ ವಿಸ್ಫುಲಿಂಗಾಃ" ಎಂದು ಶ್ರುತಿಯೂ, "ಅಂಶೋ ನಾನಾವ್ಯಪದೇಶಾತ್" ಎಂದು ಬ್ರಹ್ಮಸೂತ್ರವೂ, "ಮಮೈವಾಂಶೋ ಜೀವಲೋಕೋ ಜೀವಭೂತಸ್ಸನಾತನಃ" ಎಂದು ಭಗವದ್ಗೀತೆಯೂ, "ತದಂಶೋ ಜೀವನಾಮಕಃ" ಎಂದು ಸಿದ್ಧಾಂತಶಿಖಾಮಣಿಯೂ ಘಂಟಾಘೋಷವಾಗಿ ಬೋಧಿಸುತ್ತಿರುವುವು. "ಶಿವಾಂಶಾ ಬ್ರಹ್ಮವಿಷ್ಣ್ವಾದ್ಯಾ ಅಂಶೀದೇವಶ್ಶಿವಃ ಸ್ಮೃತಃ" "ಅಮೃತಸ್ಯ ಲಿಂಗಸ್ಯ ಪುತ್ರಾಃ ಲಿಂಗಾಂಶಭೂತಾಃ" "ವಿಸ್ಫುಲಿಂಗಸಮೂಹರೂಪದಾವಾಗ್ನಿಜ್ವಾಲಾವದನೇಕ ಕೋಟ್ಯಂತರ ಜೀವಶಬ್ದಿತಾಂಶರೂಪತ್ವೇನ" ಇತ್ಯಾದಿಕ್ರಿಯಾಸಾರವಾಕ್ಯಗಳಿಂದ ಶುದ್ಧಜೀವರು ಶಿವಾಂಶರೆಂಬುದು ಸ್ಪಷ್ಟವಾಗಿದೆ. ಅಲ್ಲದೆ ಇದೇ ಗ್ರಂಥದಲ್ಲಿ—"ಆವಿರ್ಭೂತಶಕ್ತೇರಪಗತಕೋರಕಭಾವಾತ್ ಕುಸುಮಾದೇವ ಗಂಧೋಪಲಬ್ಧೇರ್ವಾಯುಸಂಪರ್ಕಾತ್ ವಿಸ್ತೃತಾವಯವಾತ್ ಪುಷ್ಪಗಂಧವದಂಶಾ ನಿಸ್ಸರಂತಿ ತದ್ವತ್" ಮೊಗ್ಗೆಯಲ್ಲಿ ವಿಕಸನೋನ್ಮುಖವಾದ ಶಕ್ತಿಯ ಆವಿರ್ಭಾವವಾಗಲು ಗಂಧದ ಉಪಲಬ್ಧಿಯಾಗುವುದರಿಂದ ವಾಯುಸಂಪರ್ಕದಿಂದ ವಿಭಕ್ತಗಳಾಗಿ ಪುಷ್ಪದ ಗಂಧವಿಶಿಷ್ಟಾಂಶಗಳು ಹೊರಡುವಂತೆ, ಆವಿರ್ಭೂತವಾದ ಶಕ್ತಿಯುಳ್ಳ ಶಿವನಿಂದ ಶಿವನ ಅಂಶ

ರೂಪಚೇತನಾಚೇತನವಸ್ತುಗಳು ಪ್ರಕಟಗಳಾಗುತ್ತವೆ, ಎಂದು ಹೇಳಲ್ಪಟ್ಟಿದೆ. ಹೀಗೆ ವೀರಶೈವಾಚಾರ್ಯರು ಆತ್ಮಸ್ವರೂಪವನ್ನು ನಿರೂಪಿಸಿದ್ದರೂ, ಇದನ್ನು ಕಣ್ದೆರೆದು ನೋಡದೆ ಮಲತ್ರಯವು ಚಿದಾತ್ಮನಾದ ಪರಮಾತ್ಮನನ್ನೇ ಆವರಿಸಿಕೊಳ್ಳುವುದೆಂದು ಹೇಳಿರುವುದು ಮಹಾದೋಷವಲ್ಲವೆ? "ಚಿದ್ವತ್ತಚ್ಛಕ್ತಿಸಂಕೋಚಾನ್ಮಲಾವೃತಸ್ಸಂಸಾರೀ" ಎಂಬ ಸೂತ್ರವನ್ನು ಅನುಸರಿಸಿ ಚಿದಾತ್ಮನಾದ ಪರಮಾತ್ಮನನ್ನು ಮಲತ್ರಯವು ಆವರಿಸಿಕೊಳ್ಳುವುದಾಗಿ ಹೇಳಿರುವೆನೆಂದು ಈತನು ಅನ್ನಬಹುದು. ಹಾಗಾದರೆ ಈತನು ಈ ಸೂತ್ರಾರ್ಥದ ಗಂಧವನ್ನೇ ಆಘ್ರಾಣಿಸಿಲ್ಲವೆಂದು ಹೇಳಬೇಕಾಗುತ್ತದೆ. "ಚಿದ್ವತ್" ಎಂಬ ಪದಕ್ಕೆ ಈತನು ಯಾವ ಅರ್ಥವನ್ನು ತಿಳಿದುಕೊಂಡಿರುವನೋ ಆ ಅರ್ಥವನ್ನು ತನ್ನ ಪುಸ್ತಕದಲ್ಲಿಯಾದರೂ ಬರೆದಿಲ್ಲ; ಪಾಪ! ನಿಜಾರ್ಥವು ತಿಳಿದರಲ್ಲವೇ ಬರೆಯುವುದು? ಅಸ್ತು! ಈ ಸೂತ್ರಾರ್ಥವನ್ನು ಈತನ ತಿಳಿವಳಿಕೆಗಾಗಿ ವಿವರಿಸುತ್ತೇವೆ. ಚಿತ್ಸ್ವರೂಪನಾದ ಪರಮೇಶ್ವರನು ತನ್ನ ಸ್ವಾತಂತ್ರ್ಯಶಕ್ತಿಯಿಂದ ಕುಸೂಲಸದೃಶವಾದ ತನ್ನ ಪರಾಹಂತಾಮಯಚಿಚ್ಛಕ್ತಿಯಲ್ಲಿ ತುಂಬಿಕೊಂಡ ನವಣೆಯ ಧಾನ್ಯಗಳಂತಿರುವ ಶಿವಾಂಶಗಳು ಆ ಚಿಚ್ಛಕ್ತಿಯಿಂದ ಹೊರಹೊರಡಲು ಆಗ ಆ ಅಂಶಗಳಿಗೆ ಭಿನ್ನನಾಗುವನು. ಅಂದರೆ ಚಿದಾತ್ಮನಾದ ಪರಮೇಶ್ವರನು ಎಲ್ಲಾ ಅಂಶಗಳ ಸಮಷ್ಟಿರೂಪವಾದ ಚಿಚ್ಛಕ್ತಿಗೆ ನಾನೆಂಬುವ ಅಭೇದವ್ಯಾಪ್ತಿಯನ್ನು ಬಿಟ್ಟು ಅಂಶರೂಪದಿಂದ ವಿಭಕ್ತನಾಗಿ ಆತ್ಮನೆನಿಸಿ ಭೇದವ್ಯಾಪ್ತಿಯನ್ನು (ಭೇದಬುದ್ಧಿರೂಪವಾದ ಮಾಯೆಯನ್ನು) ಹೇಗೆ ಅವಲಂಬಿಸುವನೋ, ಹಾಗೆಯೇ ಚಿದಾತ್ಮನ ಇಚ್ಛಾದಿಶಕ್ತಿಗಳೂ ಸಂಕೋಚವನ್ನು ಹೊಂದಿ ಮಲಸ್ವರೂಪಗಳಾಗುವುವು. ಚಿದಾತ್ಮನಿಂದ ವಿಭಕ್ತವಾಗಿ ಮಾಯಾಲಂಬನವನ್ನು ಮಾಡಿದ ಶಿವಾಂಶವು ಮಲತ್ರಯಾವೃತವಾಗಿ ಸಂಸಾರಿಯೆನಿಸುವುದೆಂದು ಈ ಸೂತ್ರದ ಅರ್ಥವಾಗುವುದು. ಹೀಗೆ

ನಿಜವಾದ ಅರ್ಥವನ್ನು ಮಾಡದೆ, ಈ ಘನಪಂಡಿತನಂತೆ ಚಿದಾತ್ಮನಾದ ಪರಮಾತ್ಮನಿಗೆ ಮಲಾವರಣವನ್ನು ಹೇಳಿದರೆ ಈಮೊದಲು ಉದಾಹರಿಸಿದ ಸ್ವಪ್ರಭಾನಂದಶಿವಾಚಾರ್ಯರೇ ಮೊದಲಾದ ಪ್ರಾಚೀನಾಚಾರ್ಯರ ಅಭಿಪ್ರಾಯಕ್ಕೆ ವಿರುದ್ಧವಾಗುವುದು.

ಆದಿತಃ ಪರಿಶುದ್ಧತ್ವಾನ್ಮಲತ್ರಯವಿಯೋಗತಃ ।
ಶಿವ ಇತ್ಯುಚ್ಯತೇ ಶಂಭುಶ್ಚಿದಾನಂದಘನಃಪ್ರಭುಃ ॥

ಎಂದು ರೇಣುಕಭಗವತ್ಪಾದರೂ, "ಆದಿತಃ ಕದಾಪಿ ಮಲತ್ರಯವಿಯೋಗತಃ ಅಣವಾದಿಮಲತ್ರಯಸಂಬಂಧಾಭಾವೇನ ಪರಿಶುದ್ಧತ್ವಾತ್" ಎಂದು ಟೀಕಾಕಾರರಾದ ಮರಿತೋಂಟದಾರ್ಯರೂ ಚಿದಾತ್ಮನಿಗೆ ಮಲತ್ರಯಸಂಬಂಧವಿಲ್ಲದಿರುವುದರಿಂದ ನಿರ್ಮಲನಾದ ಮತ್ತು ಚಿದಾನಂದಘನನಾದ ಶಂಭುವೇ ಶಿವನೆಂದು ಸಾರಿದ್ದಾರೆ

ನಚಾಸ್ತಿ ದೇಹಸಂಬಂಧೋ ನಿರ್ದೇಹಸ್ಯ ಸ್ವಭಾವತಃ ।
ಅಜ್ಞಾನಕರ್ಮಯೋಗೇನ ದೇಹೀ ಭವತಿ ಭುಕ್ತಯೇ ॥

ಎಂಬ ಸಿದ್ಧಾಂತಶಿಖಾಮಣಿಶ್ಲೋಕದ ವ್ಯಾಖ್ಯಾನದಲ್ಲಿ ಮರಿತೋಂಟದಾರ್ಯರು "ದೇಹೀ ಭವತಿ" ಎಂಬುದಕ್ಕೆ "ಘೃತಕಾಠಿನ್ಯನ್ಯಾಯೇನ ಅಂಶತಃ ಶರೀರೀ ಭವತಿ ತಸ್ಮಾದಂಶೀಭೂತಸ್ಯಾಜ್ಞಾನಾದಿಮಲಸಂಬಂಧಾತ್ ನೃಪಇವಾಹಂ ಶಿವ ಇತಿ ಜ್ಞಾನಂ ನಾಸ್ತಿ" ಎಂದು ಚಿದಾತ್ಮನಾದ ಪರಮಾತ್ಮನಿಂದ ವಿಭಕ್ತವಾದ ಅಂಶಕ್ಕೇನೇ ಮಲಸಂಬಂಧವನ್ನು ಹೇಳಿರುವರಲ್ಲದೆ ಈ ಘನಪಂಡಿತನಂತೆ ಚಿದಾತ್ಮನಿಗೆ ಹೇಳಿಲ್ಲ. ಅನಾದಿಕಾಲದಿಂದ ಇಲ್ಲಿಯವರೆಗೆ ಯಾವ ವೀರಶೈವಶಾಸ್ತ್ರಜ್ಞರೂ ಚಿದಾತ್ಮನಾದ ಪರಮಾತ್ಮನಿಗೆ ಮಲತ್ರಯವನ್ನು ಹೇಳದಿದ್ದಾಗ್ಯೂ ಈತನು ಮಾತ್ರ ವಿಕಟಪಂಡಿತನಂತೆ ಹೇಳಿರುವುದು ಸಿದ್ಧಾಂತಶಾಸ್ತ್ರಜ್ಞಾನಶೂನ್ಯತೆಯ ಹೆಗ್ಗುರುತಾಗಿದೆ.

ಈತನು ತನ್ನ ಪುಸ್ತಕದ ೨ ನೆಯ ಪುಟದಲ್ಲಿ—

"ಈ ಪ್ರಕಾರ ಚಿದಾತ್ಮನಾದ ಪರಮೇಶ್ವರನ ಇಚ್ಛಾಜ್ಞಾನಕ್ರಿಯಾಶಕ್ತಿಗಳು ಸಂಕುಚಿತಗಳಾಗಲು ಚಿದಾತ್ಮನು ಅಪೂರ್ಣತ್ವಕಿಂಚಿಜ್ಜ್ಞತ್ವ ಕಿಂಚಿತ್ಕರ್ತೃತ್ವಾದಿ ವಿಷಯಕಪ್ರತೀತಿಯುಳ್ಳವನಾಗುವನು."

ಎಂದು ಬರೆದಿದ್ದಾನೆ. ಹೀಗೆ ಬರೆದಿರುವುದನ್ನು ನೋಡಿದರೆ ನಗೆ ಬರುತ್ತದೆ. ಮುಂಡಿಯೇ! ಚಿದಾತ್ಮನಾದ ಪರಮೇಶ್ವರನು ನಾನು ಅಪೂರ್ಣನು, ನಾನು ಕಿಂಚಿದ್ಜ್ಞನು, ನಾನು ಕಿಂಚಿತ್ಕರ್ತೃವು ಎಂಬ ಪ್ರತೀತಿಯುಳ್ಳವನಾಗುವನೋ? ಪರಮೇಶ್ವರನು ಅಪೂರ್ಣನೂ, ಕಿಂಚಿದ್ಜ್ಞನೂ, ಕಿಂಚಿತ್ಕರ್ತೃವೂ ಎಂದರೆ ಅವನಲ್ಲಿ 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಿಂದ ಹೇಳಲ್ಪಡುವ ಚರಾಚರಾತ್ಮಕಜಗಜ್ಜನ್ಮಾದಿಜನಕತ್ವಲಕ್ಷಣವು ಎಂದೂ ಸಂಗತವಾಗಲಾರದು. ಘಟಜ್ಞಾನವಿಲ್ಲದವನು ಘಟವನ್ನು ಮಾಡದಿರುವಂತೆ ಚರಾಚರಾತ್ಮಕವಾದ ಸಕಲಜಗತ್ತಿನ ಜ್ಞಾನವಿಲ್ಲದ ಪರಮೇಶ್ವರನು ಜಗತ್ತನ್ನು ಮಾಡಲಾರನಷ್ಟೆ! ಚಿದಾತ್ಮನಾದ ಪರಮೇಶ್ವರನು ಕಿಂಚಿದ್ಜ್ಞರೂ ಅಸ್ವತಂತ್ರರೂ ಕಿಂಚಿತ್ಕರ್ತೃಗಳೂ ಆದ ಜೀವರಿಗೆ ಪ್ರೇರಕನಾಗಿ ಕ್ರೀಡಿಸುತ್ತಾನೆಂಬಲ್ಲಿ—

ಅಸ್ವತಂತ್ರಾಶ್ಚ ಕಿಂಚಿದ್ಜ್ಞಾಃ ಕಿಂಚಿತ್ಕರ್ತೃತ್ವಹೇತವಃ ।
ಲೀಲಾಭಾಜನತಾಂ ಪ್ರಾಪ್ತಾಃ ಶಿವಸ್ಯ ಪರಮಾತ್ಮನಃ ॥

ಎಂಬ ಸಿದ್ಧಾಂತಶಿಖಾಮಣಿಯ ಶ್ಲೋಕವು ಪ್ರಮಾಣವಾಗಿದೆ. ದಾವಾನಲದಿಂದಾವಿರ್ಭವಿಸಿದ ವಿಸ್ಫುಲಿಂಗಗಳಲ್ಲಿರುವ ಪಾಕಸಾಧನತ್ವಾಭಾವ, ಶೀತನಿವರ್ತಕತ್ವಾಭಾವ, ಆರ್ದ್ರಕಾಷ್ಠದಾಹಕತ್ವಾಭಾವ ಮೊದಲಾದ ಧರ್ಮಗಳನ್ನು ದಾವಾನಲದಲ್ಲಿ ಹೇಳುವ ಅಪ್ರಗಲ್ಭನಂತೆ, ಚಿದ್ರೂಪ ಪರಮೇಶ್ವರನಿಂದಾವಿರ್ಭವಿಸಿ ಚಿತ್ಕಣಗಳೆನಿಸುವ ಜೀವರ ಅಪೂರ್ಣತ್ವ ಕಿಂಚಿದ್ಜ್ಞತ್ವಾದಿಧರ್ಮಗಳನ್ನು ಚಿದ್ರೂಪನಾದ ಪರಮೇಶ್ವರನಲ್ಲಿ ಹೇಳುವ ಈತನ ಬುದ್ಧಿಯು ಎಷ್ಟು ಗಡುತರವಿರಬಹುದೆನ್ನುವುದನ್ನು ವಾಚಕರೇ ಕಂಡುಹಿಡಿಯಬೇಕು. ಚಿದ್ರೂಪನಾದ ಪರಮೇಶ್ವರನು

ಚಿತ್ಕಣಗಳೆನಿಸುವ ಜೀವರನ್ನು ಆವಿರ್ಭಾವಗೊಳಿಸುವನೆಂಬ ವಿಷಯ ದಲ್ಲಿ—"ವಹ್ನೇರ್ವಿಸ್ಫುಲಿಂಗಾನಿವ ಸ್ವತಾದಾತ್ಮ್ಯಪನ್ನಾನ್ ಚಿತ್ಕಣಾನ್ ತತ್ತತ್ಕರ್ಮಾನುಸಾರೇಣ ಸೃಜತ್ಯವತಿ ಸಂಹರತಿ ತಿರಯತೇ ಅನುಗೃಹ್ಣಾತಿ" ಎಂಬ ಮರಿತೋಂಟದಾರ್ಯರ ವಾಕ್ಯ ಗಳು ಪ್ರಮಾಣಗಳಾಗಿವೆ. ಅಗ್ನಿತ್ವೇನ ಅಗ್ನಿವಿಸ್ಫುಲಿಂಗಗಳಿಗೆ ಅಭೇದ ವಿದ್ದರೂ ಅಗ್ನಿಯ ಹಾಗೂ ಕಣಗಳ ಅಸಾಧಾರಣಧರ್ಮಗಳಿಂದ ಅಗ್ನಿ ಕಣಗಳಿಗೆ ವಾಸ್ತವಭೇದವನ್ನೊಪ್ಪಲೇಬೇಕು. ಇಲ್ಲದಿದ್ದರೆ ಅಗ್ನಿಯಿಂ ದಾಗುವ ಪಾಕಾದಿಕಾರ್ಯಗಳು ಅಗ್ನಿಕಿಡಿಗಳಿಂದಾದರೂ ಆಗಬೇಕಾಗು ವುವು. ಅದರಂತೆ ಚೈತನ್ಯಸಾಮಾನ್ಯಧರ್ಮದಿಂದ ಶಿವಜೀವರಿಗೆ ಅಭೇದ ವಿದ್ದರೂ ಸರ್ವಜ್ಞತ್ವ ಕಿಂಚಿದ್ಜ್ಞತ್ವಾದಿಧರ್ಮಗಳಿಂದ ಪಾರಮಾರ್ಥಿಕ ಭೇದವನ್ನೊಪ್ಪಲೇಬೇಕು. ಜೀವನ ಅಪೂರ್ಣತ್ವ ಕಿಂಚಿದ್ಜ್ಞತ್ವ ಕಿಂಚಿತ್ಕರ್ತೃತ್ವಶಕ್ತಿಗಳು ಲಿಂಗಾಂಗಸಾಮರಸ್ಯಾನುಭವದಿಂದ ವಿಕಸಿತ ಗಳಾಗಲು ಜೀವನು ಶಿವನೇ ಆಗುವನು. ಈ ರೀತಿಯಾಗಿ ಬರೆಯುವು ದನ್ನು ಬಿಟ್ಟು—

"ಆ ಇಚ್ಛಾಜ್ಞಾನಕ್ರಿಯಾಶಕ್ತಿಗಳು ವಿಕಾಸವಾಗಲಾಗಿ 'ಸ್ವಶಕ್ತಿವಿಕಾಸೇಕು ಶಿವ ಏವ ಭವತಿ' ಎಂಬ ಪ್ರತ್ಯಭಿಜ್ಞಾಹೃದಯದ ವಚನದಂತೆ ಪರಿಪೂರ್ಣತ್ವ ಸರ್ವಜ್ಞತ್ವಸರ್ವಕರ್ತೃತ್ವಾದಿಗಳುಳ್ಳ ಶಿವನೇ ಆಗುವನು."

ಎಂದು ಬರೆದಿರುವುದನ್ನು ನೋಡಿದರೆ ಸೋಜಿಗವೆನಿಸುತ್ತದೆ. ಏಕೆಂ ದರೆ—ಶಿವನಲ್ಲಿರುವ ಇಚ್ಛಾಜ್ಞಾನಕ್ರಿಯಾಶಕ್ತಿಗಳು ಮೊದಲೇ ವಿಕಾ ಸಾವಸ್ಥೆಯಲ್ಲಿರುವುದರಿಂದ ಅವುಗಳಿಗೆ ಪುನಃ ವಿಕಾಸವು ಬೇಕಾಗಿಲ್ಲ. ಜೀವನ ಅಪೂರ್ಣತ್ವ ಕಿಂಚಿದ್ಜ್ಞತ್ವ ಕಿಂಚಿತ್ಕರ್ತೃತ್ವ ಶಕ್ತಿಗಳಿಗೆ ಮಾತ್ರ ವಿಕಾಸವು ಬೇಕು. ಇವು ವಿಕಾಸವನ್ನು ಹೊಂದಿ ಶಿವನ ಇಚ್ಛಾಜ್ಞಾನಕ್ರಿಯಾಶಕ್ತಿಗಳ ಸ್ವರೂಪವಾಗಲು ಆಗ ಜೀವನು ಪರಿ ಪೂರ್ಣತ್ವ ಸರ್ವಜ್ಞತ್ವ ಸರ್ವಕರ್ತೃತ್ವಗಳುಳ್ಳ ಶಿವನೇ ಆಗುವನು.

ಇದೇ ವೀರಶೈವಸಿದ್ಧಾಂತದ ರಹಸ್ಯವು. ಈ ರಹಸ್ಯವನ್ನರಿಯದೆ ಈತನು ಮೊದಲು ಇಚ್ಛಾಜ್ಞಾನಕ್ರಿಯಾಶಕ್ತಿಗಳು ಸಂಕುಚಿತಗಳಾಗಿ ಅಪೂರ್ಣತ್ವ ಕಿಂಚಿದ್‌ಜ್ಞತ್ವ ಕಿಂಚಿತ್ಕರ್ತೃತ್ವವುಳ್ಳವುಗಳಾಗಿರುವುವೆಂದು ಬರೆದು ಪುನಃ 'ಇಚ್ಛಾಜ್ಞಾನಕ್ರಿಯಾಶಕ್ತಿಗಳು ವಿಕಾಸವಾಗಲಾಗಿ' ಎಂದು ಬರೆದಿರುವುದು ಪೂರ್ವಾಪರಪರಿಜ್ಞಾನವಿಲ್ಲದೆ ನುಡಿಯುತ್ತಿರುವ ಹುಚ್ಚನ ವರ್ತನದಂತಿದೆ. ಪರಮೇಶ್ವರನ ಇಚ್ಛಾಜ್ಞಾನಕ್ರಿಯಾಶಕ್ತಿಗಳು ಸಂಕುಚಿತಗಳಾಗಿ ಅಪೂರ್ಣತ್ವ ಕಿಂಚಿದ್‌ಜ್ಞತ್ವ ಕಿಂಚಿತ್ಕರ್ತೃತ್ವರೂಪದಿಂದ ಪರಿಣತಗಳಾಗುವುವೆಂಬ ಅಭಿಪ್ರಾಯವು ಪ್ರತ್ಯಭಿಜ್ಞಾಹೃದಯದಲ್ಲಿ ಸ್ಪಷ್ಟವಾಗಿರುವುದರಿಂದ ಈತನು ಈ ರಹಸ್ಯವಿಷಯವನ್ನು ತತ್ತ್ವಶಾಸ್ತ್ರಜ್ಞರಾದ ಗುರುಗಳನ್ನಾಶ್ರಯಿಸಿ ಅವರ ಸೇವೆಯನ್ನು ಮಾಡಿ ಚನ್ನಾಗಿ ತಿಳಿದುಕೊಂಡು ಧನ್ಯಾತ್ಮನಾಗಲೆಂದು ಪ್ರೇಮಭಾವದಿಂದ ಸೂಚಿಸುತ್ತೇವೆ.

ಇನ್ನು ಈತನು ಕೆಲವು ಪುಟಗಳಲ್ಲಿ ವೀರಶೈವರ ಬಗ್ಗೆ ಕೆಲವು ಶ್ಲೋಕಗಳನ್ನು ಉದಾಹರಿಸಿದ್ದಾನೆ. ಈ ಬಗ್ಗೆ ವಿವಾದಾಂಶವಿಲ್ಲದ್ದರಿಂದ ಆ ವಿಷಯವನ್ನು ಹಾಗೆಯೇ ಬಿಟ್ಟಿದ್ದೇವೆ. ಮುಂದೆ ಈತನು ೧೧ನೆಯ ಪುಟದಲ್ಲಿ ಜಾತಿಯ ವಿಷಯವನ್ನೆತ್ತಿಕೊಂಡು "ಬ್ರಾಹ್ಮಣೋಸ್ಯ ಮುಖಮಾಸೀತ್" ಎಂಬೀ ಜನ್ಮತಃ ಜಾತಿಗಳನ್ನು ಸಿದ್ಧಾಂತಗೊಳಿಸುವ ಶ್ರುತಿವಾಕ್ಯವನ್ನುದಾಹರಿಸಿ ಗಣವಂಶೀಯರಾದ ವೀರಮಾಹೇಶ್ವರರಲ್ಲಿ ವಂಶದಿಂದ ಬ್ರಾಹ್ಮಣ್ಯವನ್ನೊಪ್ಪಿಕೊಂಡಿದ್ದಾನೆ. ಅಲ್ಲದೆ ತನ್ನ ಪುಸ್ತಕದ ಪ್ರಥಮಪುಟದಲ್ಲಿ—

"ಮಾನುಷಪದವಾಚ್ಯರಾದ ಬ್ರಾಹ್ಮಣಾದಿಗಳಲ್ಲಿ ವಿಶುದ್ಧರು ಪ್ರಾಕೃತರು ಎಂದು ವಿಭಾಗವುಂಟು"

ಎಂದು ಬರೆದಿದ್ದಾನೆ. ಬ್ರಾಹ್ಮಣಾದಿಯೆಂದರೆ—ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂದರ್ಥವು. ಇವರಲ್ಲಿ ವಿಶುದ್ಧರು ಎಂದರೆ ಅಪ್ರಾ

ಕೃತಬ್ರಾಹ್ಮಣ, ಅಪ್ರಾಕೃತಕ್ಷತ್ರಿಯ, ಅಪ್ರಾಕೃತವೈಶ್ಯ, ಅಪ್ರಾಕೃತ ಶೂದ್ರ ಎಂದೂ, ಪ್ರಾಕೃತರು ಎಂದರೆ—ಪ್ರಾಕೃತಬ್ರಾಹ್ಮಣ, ಪ್ರಾಕೃತಕ್ಷತ್ರಿಯ, ಪ್ರಾಕೃತವೈಶ್ಯ, ಪ್ರಾಕೃತಶೂದ್ರ ಎಂದೂ ಅರ್ಥವು. ಈ ಪ್ರಕಾರವಾಗಿ ಈತನು ಜನ್ಮದಿಂದ ಜಾತಿಭೇದವನ್ನೊಪ್ಪಿದ್ದರೂ ಪುನಃ "ರುದ್ರೇಣಾತ್ತಮಶ್ನಂತಿ" ಇತ್ಯಾದಿ ಶ್ರುತಿವಾಕ್ಯಗಳನ್ನು ಭಕ್ತ್ಯಭಿನ್ನಕ್ರಿಯೆಯಿಂದ ಬ್ರಾಹ್ಮಣ್ಯವನ್ನೊಪ್ಪುವವುಗಳನ್ನಾಗಿ ತಿಳಿದದ್ದು ಆಶ್ಚರ್ಯವು. ಈ ಮಂತ್ರವು ಯಾರು ರುದ್ರಪ್ರಸಾದ ರುದ್ರಪಾದೋದಕಗಳನ್ನು ಸೇವಿಸುವರೋ ಅವರೇ ಬ್ರಾಹ್ಮಣರೆಂದು ಹೇಳುವುದಿಲ್ಲ; ಆದರೆ "ತಸ್ಮಾದ್ಬ್ರಾಹ್ಮಣಾಃ ಪ್ರಶಾಂತಮನಸೋ ವಿದ್ವಾಂಸಃ" ತಸ್ಮಾತ್ ಪ್ರಸಾದಪಾದೋದಕಗಳ ಸೇವನೆಯಿಂದ, ಬ್ರಾಹ್ಮಣರು ಶಾಂತಮನಸ್ಕರೂ, ತತ್ತ್ವಜ್ಞಾನಿಗಳೂ ಆಗುತ್ತಾರೆಂದು ಹೇಳುವುದು. ಹೀಗಿದ್ದರೂ ಈ ಶ್ರುತಿವಾಕ್ಯಗಳನ್ನು ಭಕ್ತ್ಯಭಿನ್ನಕ್ರಿಯೆಯಿಂದ ಬ್ರಾಹ್ಮಣ್ಯಪರಗಳನ್ನಾಗಿ ಮಾಡಿಕೊಂಡಿರುವುದು ಕೇವಲ ಮಂದತನವು. "ಯೇ ರುದ್ರಪಿಂಡಸಂಜಾತಾಃ" ಎಂಬ ಶ್ಲೋಕವಾದರೂ ಈ ಮುಂಡಿಯ ಅಭಿಪ್ರಾಯದಂತೆ ಕೇವಲ ಜ್ಞಾನದಿಂದ ಬ್ರಾಹ್ಮಣ್ಯವನ್ನು ಪ್ರತಿಪಾದಿಸುವುದಿಲ್ಲ. ಆದರೆ "ಯಥಾ ಕಾಷ್ಠಮಯೋ ಹಸ್ತೀ ಯಥಾ ಚರ್ಮಮಯೋ ಮೃಗಃ" ಇತ್ಯಾದಿ ಮನುಸ್ಮೃತಿವಚನದಂತೆ ಯಾವ ಬ್ರಾಹ್ಮಣರು ವೇದಾಧ್ಯಯನ ಪೂರ್ವಕ ರುದ್ರನನ್ನು ತಿಳಿಯುತ್ತಾರೋ ಅವರೇ ಬ್ರಾಹ್ಮಣರೆಂದೂ, ವೇದಾಧ್ಯಯನಾದಿ ಬ್ರಾಹ್ಮಣ ಕರ್ಮಗಳನ್ನು ಬಿಟ್ಟವರು ನಾಮಮಾತ್ರ ಬ್ರಾಹ್ಮಣರೆಂದೂ ಆ ಶ್ಲೋಕಾಭಿಪ್ರಾಯವಿರುತ್ತದೆ. ಕಾಷ್ಠಮಯವಾದ ಗಜದಲ್ಲಿ ಗಜವೆಂಬ ವ್ಯವಹಾರವಿದ್ದರೂ ಗಜದ ಕರ್ತವ್ಯವಿಲ್ಲದಿರುವುದರಿಂದ ಅದು ನಾಮಮಾತ್ರಗಜವೆನಿಸುವಂತೆ, ಜನ್ಮತಃ ಬ್ರಾಹ್ಮಣನಾದವನು ತನ್ನ ಕರ್ತವ್ಯಕರ್ಮಗಳನ್ನು ಬಿಟ್ಟರೆ ನಾಮಮಾತ್ರ ಬ್ರಾಹ್ಮಣನಾಗುವನು. ಆದುದರಿಂದ ಆ ಶ್ಲೋಕವು

ಈತನ ಅಭಿಪ್ರಾಯಕ್ಕನುಸಾರವಾಗಿರುವುದಿಲ್ಲ. ಇರುವುದೆಂದರೆ, ಜನ್ಮದಿಂದ ಜಾತಿಯನ್ನು ಬೋಧಿಸುವ "ಬ್ರಾಹ್ಮಣೋऽಸ್ಯ ಮುಖಮಾಸೀತ್" ಎಂಬ ಶ್ರುತಿವಾಕ್ಯಕ್ಕೇನೇ ವಿರೋಧವಾಗುವದು. ಸ್ವತಃ ಪ್ರಮಾಣವಾದ ಶ್ರುತಿವಾಕ್ಯಕ್ಕೆ ಅನುಕೂಲವಾಗಿಯೇ ಇತರ ವಾಕ್ಯಗಳಿಗೆ ಅರ್ಥಮಾಡಬೇಕು. ಶ್ರುತೀತರವಾಕ್ಯಗಳಿಗೆ ಸ್ವತಃ ಪ್ರಾಮಾಣ್ಯವಿಲ್ಲ. ಅಸ್ತು! ಈ ಮುಂಡಿಯು ೧೧ ನೆಯ ಪುಟದಲ್ಲಿ—

"ಅಪ್ರಾಕೃತ ಬ್ರಾಹ್ಮಣರಾದ ವೀರಶೈವಾಶ್ರಮಿಗಳು ಯಜ್ಞಾದಿಪ್ರಾಕೃತ ಕರ್ಮಕಾಂಡವನ್ನು ದಾಟಿ ಕೇವಲ ಭಕ್ತಿಜ್ಞಾನಕಾಂಡದಲ್ಲಿ ನಿಷ್ಠರಾಗಿರುವುದರಿಂದ ಇವರಿಗೆ ಪ್ರಾಕೃತ ಬ್ರಾಹ್ಮಣರಂತೆ ಕರ್ಮಾಂಗಭೂತಗಳಾದ ಶಿಖಾಸೂತ್ರ (ಜುಟ್ಟು ಜನಿವಾರ) ಗಳ ಅವಶ್ಯಕತೆಯಿಲ್ಲ"

ಎಂದು ಬರೆದಿರುತ್ತಾನೆ. ಈತನ ಈ ಅಮಂಗಲ ಬರವಣಿಗೆಯು ವೀರಶೈವ ಧರ್ಮಶಾಸ್ತ್ರಕ್ಕೆ ವಿರುದ್ಧವೋ ಅವಿರುದ್ಧವೋ ಎಂಬುದನ್ನು ವಿಮರ್ಶಿಸೋಣ! ಸಮಗ್ರವೇದಗಳಿಗೆ ಪ್ರಾಮಾಣ್ಯವನ್ನೊಪ್ಪುವ ವೀರಶೈವರು ಕರ್ಮಕಾಂಡಕ್ಕೆ ಅಪ್ರಾಮಾಣ್ಯವನ್ನು ಹೇಳದೆ ಜ್ಞಾನಕಾಂಡಕ್ಕೆ ಮುಖ್ಯತ್ವವನ್ನು ಹೇಳುವರು.

ನಕ್ವಚಿದ್ವೇದಭಾಗಸ್ಯ ವೇದಮಾತ್ರಾಪ್ರಮಾಣತಾಂ ।
ಕಿಂತು ವಚ್ಮಿ ಕರ್ಮಕಾಂಡಾದ್ ಜ್ಞಾನಕಾಂಡಸ್ಯ ಮುಖ್ಯತಾಂ ॥

ಎಂದು ಶ್ರೀ ನೀಲಕಂಠಶಿವಾಚಾರ್ಯರು ಕ್ರಿಯಾಸಾರದ ೨ ನೆಯ ಉಪದೇಶದಲ್ಲಿ ಹೇಳಿರುವುದರಿಂದಲೂ,

ವೇದಸಿದ್ಧಾಂತಯೋರೈಕ್ಯಮೇಕಾರ್ಥಪ್ರತಿಪಾದನಾತ್ ॥

ಎಂದು ರೇಣುಕಭಗವತ್ಪಾದರೂ ಸಹ ಸಿದ್ಧಾಂತವೆನಿಸಿದ ಕಾಮಿಕಾದಿ-ದಿವ್ಯಾಗಮಗಳಿಗೂ ವೇದಗಳಿಗೂ ಅಭೇದವನ್ನೊಪ್ಪಿರುವುದರಿಂದಲೂ ಕರ್ಮಕಾಂಡವು ವೀರಶೈವರಿಗೆ ಪ್ರಮಾಣವಾಗುವುದರಿಂದ ತದ್ವಿಹಿತಾಗ್ನಿಷ್ಟೋಮಾದಿಪಶುಕರ್ಮಗಳನ್ನಾದರೂ ಏಕೆ ಆಚರಿಸಬಾರದೆಂಬ

ಶಂಕೆಯು ಉತ್ಪನ್ನವಾಗಬಹುದು. ಹಾಗೆ ಆಚರಿಸಲಿಕ್ಕೆ ಬರುವುದಿಲ್ಲ. ಏಕೆಂದರೆ— ಲೋಕದಲ್ಲಿರುವವರೆಲ್ಲರೂ ತಮ್ಮ ತಮ್ಮ ವರ್ಣಾಶ್ರಮ ಗಳಿಗುಚಿತಗಳಾದ ಕರ್ಮಗಳನ್ನಾಚರಿಸುತ್ತಾರಲ್ಲದೆ, ವೇದವಿಹಿತಗಳಾದ ಸಮಸ್ತ ಕರ್ಮಗಳನ್ನು ಯಾರೂ ಆಚರಿಸುವದಿಲ್ಲ. ಸ್ಮಾರ್ತಾದಿಗಳು ರಾಜಸೂಯಯಾಗಪ್ರತಿಪಾದಕ ವೇದಭಾಗಕ್ಕೆ ಪ್ರಾಮಾಣ್ಯ ವನ್ನೊಪ್ಪಿದರೂ ಅವರು ಅದನ್ನು ಹೇಗೆ ಆಚರಿಸುವದಿಲ್ಲವೋ, ಬ್ರಹ್ಮಚಾರಿಯ ಅಸಾಧಾರಣ ಧರ್ಮಗಳನ್ನು ಗೃಹಸ್ಥನೂ, ಗೃಹ ಸ್ಥನ ಅಸಾಧಾರಣ ಧರ್ಮಗಳನ್ನು ಬ್ರಹ್ಮಚಾರಿಯೂ, ಸನ್ಯಾಸಿಯ ಅಸಾಧಾರಣ ಧರ್ಮಗಳನ್ನು ಇತರಾಶ್ರಮಿಗಳೂ ಹೇಗೆ ಆಚರಿಸುವುದಿ ಲ್ಲವೋ, ಹಾಗೆಯೇ ಚತುರ್ವಿಧಶಿವವರ್ಣಾಶ್ರಮಗಳುಳ್ಳ ವೀರಶೈವರಾ ದರೂ ಅಗ್ನಿಷ್ಟೋಮಾದಿಪ್ರತಿಪಾದಕಕರ್ಮಕಾಂಡಕ್ಕೆ ಪ್ರಾಮಾಣ್ಯವ ನ್ನೊಪ್ಪಿದರೂ ಅವುಗಳನ್ನು ಆಚರಿಸುವುದಿಲ್ಲ. "ನಿಷ್ಕಾಮಸಮನು ಷ್ಠಾನಾತ್ ಪತಿಧರ್ಮತ್ವಮಪ್ಯಯೇತ್" ಎಂದು ಕ್ರಿಯಾಸಾರದ ೧ನೆಯ ಉಪದೇಶದಲ್ಲುಕ್ತವಾಗಿರುವುದರಿಂದ ನಿಷ್ಕಾಮಬುದ್ಧಿಯಿಂದ ಅವುಗಳನ್ನು ಆಚರಿಸಿದರೂ ಆಚರಿಸಬಹುದು. ಆದರೆ ವೀರಶೈವರು ಅವುಗಳ ಆಚರಣೆಯಿಂದ ತಮಗೆ ಯಾವ ಪ್ರಯೋಜನವೂ ಇಲ್ಲವೆಂದು ಬಿಟ್ಟಿರುವರು.

ಕರ್ಮಣ್ಯಧಿಕೃತಾ ಯೇ ತು ವೈದಿಕೇ ಬ್ರಾಹ್ಮಣಾದಯಃ ।
ತೇಭಿರ್ಧಾರ್ಯಮಿದಂ ಸೂತ್ರಂ ಕ್ರಿಯಾಂಗಂ ತದ್ಧಿ ವೈ ಸ್ಮೃತಂ ॥

ಎಂಬ ಬ್ರಹ್ಮೋಪನಿಷತ್ತಿನ ವಚನದಂತೆ ವೀರಶೈವಬ್ರಾಹ್ಮಣಾದಿಗಳಿಗೆ ಸರ್ವವೈದಿಕಕರ್ಮಾಧಿಕಾರವಿರುವುದರಿಂದ ಅವರು ಕರ್ಮಾಂಗವಾದ ಸೂತ್ರವನ್ನು ಅವಶ್ಯವಾಗಿ ಧರಿಸಬೇಕು. ಬಹಿಸ್ಸೂತ್ರವು ಕ್ರಿಯಾಂಗ ವಾಗಿರುವಂತೆ ಬಹಿಶ್ಶಿಖೆಯೂ ಕೂಡ ಕ್ರಿಯಾಂಗವಾಗಿರುವುದರಿಂದ ಅದನ್ನಾದರೂ ಧರಿಸಲೇಬೇಕು. ಈ ಮಂತ್ರಾರ್ಥವೇನೆಂದರೆ—

ಯೇ ಬ್ರಾಹ್ಮಣಾದಯಃ—ಯಾವ ವೀರಶೈವಬ್ರಾಹ್ಮಣಾದಿಗಳು, ವೈದಿಕೇ—ವೇದವಿಹಿತವಾದ, ಕರ್ಮಣಿ—ಕರ್ಮದಲ್ಲಿ, (ಶಿವಪೂಜಾದಿ ಕರ್ಮದಲ್ಲಿ) ಅಧಿಕೃತಾಃ—ಅಧಿಕರಿಸಲ್ಪಟ್ಟಿರುವರೋ, (ಅಧಿಕಾರ ಸಂಪನ್ನರಾಗಿರುವರೋ), ತೇಭಿಃ—ಅವರಿಂದ, ಇದಂಸೂತ್ರಂ— ಈ ಬಹಿಸ್ಸೂತ್ರವು, ಧಾರ್ಯಂ—ಧರಿಸಲು ಯೋಗ್ಯವು; ತತ್— ಆ ಬಹಿಸ್ಸೂತ್ರವು, ಕ್ರಿಯಾಂಗಂ—ವೇದವಿಹಿತಗಳಾದ ಸಮಸ್ತಕರ್ಮಗಳಿಗೂ ಅಂಗವು, ಎಂದು ಸ್ಮೃತಂ—ಹೇಳಲ್ಪಡುವುದು.

ಎಂಬೀ ಬ್ರಹ್ಮೋಪನಿಷತ್ತಿನ ವಾಕ್ಯವನ್ನು ಈತನು ತನ್ನ ಗ್ರಂಥದಲ್ಲಿ ಬರೆಯದೆ ಬಿಟ್ಟಿರುವುದು ಗ್ರಂಥದ್ರೋಹವಲ್ಲವೇ? ಈ ಮುಂಡಿಯು ಪದೇಪದೇ ಅಪ್ರಾಕೃತರಾದ ವೀರಶೈವರು ಪ್ರಾಕೃತ ಜುಟ್ಟು ಜನಿವಾರಗಳನ್ನು ಧರಿಸುವದಿಲ್ಲವೆಂದು ತನ್ನ ಪುಸ್ತಕದಲ್ಲಿ ಅಂದಿರುವನು. ಈತನ ಮಾತು ಸತ್ಯವು. ಷಡಧ್ವಶುದ್ಧಿಯನ್ನು ಹೊಂದಿ ಸಂಸ್ಕೃತರಾದ ವೀರಶೈವದ್ವಿಜರು ಪ್ರಾಕೃತ (ಸಂಸ್ಕೃತವಲ್ಲದ) ಅಶುದ್ಧವಾದ ಶಿಖೆಯನ್ನೂ ಹಾಗೂ ಶೈವವಲ್ಲದ (ಶಿವಸಂಸ್ಕಾರವಿಲ್ಲದ) ಸೂತ್ರವನ್ನೂ ಎಂದೂ ಧರಿಸುವುದಿಲ್ಲ. ಆದರೆ ಉಪನಯನ ಕಾಲದಲ್ಲಿ "ಯಜ್ಞೋಪವೀತಂ ಪರಮಂ ಪವಿತ್ರಂ" ಎಂಬ ಮಂತ್ರದಿಂದ ಸಂಸ್ಕೃತವಾದ ತಂತುಸಮೂಹವನ್ನೇ ಸೂತ್ರವನ್ನಾಗಿಯೂ, ಮಸ್ತಕದ ಪೂರ್ವಾದಿದಿಕ್ಕುಗಳಲ್ಲಿರುವ ಕೂದಲುಗಳನ್ನು ವಪನವಿಧ್ಯುಕ್ತಮಂತ್ರಗಳಿಂದ ಬೋಳಿಸಿ ಮಧ್ಯದಲ್ಲುಳಿದ ಮಂತ್ರಸಂಸ್ಕೃತವಾದ ಕೂದಲುಗಳ ಸಮೂಹವನ್ನೇ ಶಿಖೆಯನ್ನಾಗಿಯೂ ಧರಿಸುವರು.

ಕ್ರಿಯಾಸಾರಕಾರರು ೧೯ನೆಯ ಉಪದೇಶದಲ್ಲಿ—

**"ಪ್ರಾಣಿಮಂತ್ರಂ ಪವಿತ್ರಂ" ಇತಿ ಲಿಂಗವಿಶೇಷಾತ್ ಪಾಣಿಧಾರಣಂ ವಿಧೀಯತೆ, ಪಾಣೌ ಮನನಾತ್ ತ್ರಾಯತೇತಿ ರಕ್ಷತೀ ಪಾಣಿಮಂತ್ರಂ ಪವಿತ್ರಮಿತ್ಯನೇನ "ಯಜ್ಞೋಪ**

ವೀತಂ ಪರಮಂ ಪವಿತ್ರಂ" ಇತಿವತ್ ಶೌಚಾಚಮನಾದ್ಯಪಾಪಿ ತ್ರ್ಯಸಮಯೇ ಪವಿತ್ರತ್ವವಿಧಾನಾದ್ಯಜ್ಞೋಪವೀತವತ್ಸರ್ವದಾ ಧಾರ್ಯಂ" ಎಂದು ಯಜ್ಞೋಪವೀತಧಾರಣವನ್ನು ಹೇಳಿದ್ದಾರೆ. ಯಜ್ಞೋಪವೀತಮಂತ್ರದಿಂದ ಹೇಗೆ ಯಜ್ಞೋಪವೀತಧಾರಣವೋ ಹಾಗೆ "ನಿಧನಪತಯೇನಮಃ ಇತ್ಯಾರಭ್ಯ ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" ಇತ್ಯಂತಮಂತ್ರದಿಂದ ಹಸ್ತದಲ್ಲಿ ಇಷ್ಟಲಿಂಗಧಾರಣವು ವಿಧಿಸಲ್ಪಡುತ್ತದೆ. ಯಜ್ಞೋಪವೀತಕ್ಕೆ ಪವಿತ್ರವೆಂಬ ವಿಶೇಷಣವಿರುವಂತೆ, ಲಿಂಗಕ್ಕೂ ಪವಿತ್ರವೆಂಬ ವಿಶೇಷಣವಿರುವುದರಿಂದ ಯಜ್ಞೋಪವೀತವು ಹೇಗೆ ಶುಚ್ಯಶುಚಿ ಕಾಲಗಳಲ್ಲಿ ಧರಿಸಲು ಯೋಗ್ಯವೋ, ಹಾಗೆ ಇಷ್ಟಲಿಂಗವೂ ಕೂಡ ಶುಚ್ಯಶುಚಿ ಮೊದಲಾದ ಎಲ್ಲಾ ಕಾಲಗಳಲ್ಲಿಯೂ ಧರಿಸಲು ಯೋಗ್ಯವೆಂದು ಹೇಳಿದ ನೀಲಕಂಠಶಿವಾಚಾರ್ಯರು ಯಜ್ಞೋಪವೀತಮಂತ್ರಕ್ಕೆ ಲಿಂಗಧಾರಣಪರವಾದ ಅರ್ಥವನ್ನು ಮಾಡಲಿಲ್ಲವೆಂದು ಸ್ಪಷ್ಟವಾಗುವುದು. ಈ ಮಂತ್ರಕ್ಕೆ ಲಿಂಗಧಾರಣದಲ್ಲಿ ವಿನಿಯೋಗವಿದ್ದರೆ ಅವಶ್ಯವಾಗಿ ಅವರು ಲಿಂಗಧಾರಣಪರವಾದ ಅರ್ಥವನ್ನು ಮಾಡಿಯೇ ಮಾಡುತ್ತಿದ್ದರು. ಹಾಗೆ ಅರ್ಥವನ್ನು ಮಾಡದೆ ಅದರ ಸಾದೃಶ್ಯವನ್ನು ಲಿಂಗಧಾರಣಕ್ಕೆ ಕೊಟ್ಟಿರುವುದರಿಂದ ಯಜ್ಞೋಪವೀತಧಾರಣವು ಸ್ವತಸ್ಸಿದ್ಧವಾಗುವುದು.

ಯಜ್ಞೋಪವೀತಂ ಪರಮಂ ಪವಿತ್ರಂ । ಪ್ರಜಾಪತೇರ್ಯತ್ಸಹಜಂ ಪುರಸ್ತಾತ್ ॥ ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ । ಯಜ್ಞೋಪವೀತಂ ಬಲಮಸ್ತು ತೇಜಃ ॥

ಎಂಬೀ ಮಂತ್ರವು ಲಿಂಗಧಾರಣಬೋಧಕವಾಗಿರುವುದೆಂದು ಈತನು ಪೂರ್ವಾಪರ ಪರಿಜ್ಞಾನವಿಲ್ಲದೆ ಬರೆದಿರುವನು. ಏಕೆಂದರೆ—ಈ ವಾಕ್ಯದ ಮುಂದಣ ವಾಕ್ಯವೇ "ಸಶಿಖಂ ವಪನಂ ಕೃತ್ವಾ ಬಹಿ

ಸ್ಸೂತ್ರಂ ತ್ಯಜೇದ್ಬುಧಃ" ಎಂದಿರುವುದು. ಈ ವಾಕ್ಯದಲ್ಲಿರುವ ಬಹಿಸ್ಸೂತ್ರವು ಹಿಂದಣವಾಕ್ಯದಲ್ಲಿ ಹೇಳಲ್ಪಟ್ಟಿದೆ. "ಯತ್ತದೋರ್ನಿತ್ಯ ಸಂಬಂಧಾತ್" ಎಂಬ ನಿಯಮಕ್ಕನುಸಾರವಾಗಿ ಹಿಂದಣ ವಾಕ್ಯದಲ್ಲಿರುವ "ಯತ್" ಪದದಿಂದ ಮುಂದಿನ ವಾಕ್ಯದಲ್ಲಿ "ತತ್ ಬಹಿಸ್ಸೂತ್ರಂ" ಎಂಬ ವಿಶೇಷಣವನ್ನು ಸೇರಿಸಿಕೊಳ್ಳಬೇಕಾಗುವುದು. ಹಿಂದಿನ ಮಂತ್ರದಲ್ಲಿರುವ ಯಜ್ಞೋಪವೀತಶಬ್ದಕ್ಕೆ ಈ ಮುಂಡಿಯ ಅಭಿಪ್ರಾಯದಂತೆ ಇಷ್ಟಲಿಂಗವೆಂದು ಅರ್ಥಮಾಡಿದರೆ ಮುಂದಿನ "ಸಶಿಖಂ ವಪನಂ ಕೃತ್ವಾ ಬಹಿಸ್ಸೂತ್ರಂ ತ್ಯಜೇದ್ಬುಧಃ" ಎಂಬೀ ಮಂತ್ರದಿಂದ ವೀರಶೈವಮತದ ಎಲ್ಲಾ ಆಶ್ರಮದವರೂ ತಲೆಬೋಳಿಸಿಕೊಂಡು ಇಷ್ಟಲಿಂಗವನ್ನು ಬಿಟ್ಟುಬಿಡಬೇಕಾಗುವ ಪ್ರಸಂಗವು ಬರುವುದು. ಆದುದರಿಂದ "ಯಜ್ಞೋಪವೀತಂ ಪರಮಂ ಪವಿತ್ರಂ" ಎಂಬೀ ಮಂತ್ರವು ಇಷ್ಟಲಿಂಗಧಾರಣವನ್ನು ವಿಧಿಸದೆ ತಂತುಮಯ ಯಜ್ಞೋಪವೀತಧಾರಣವನ್ನು ವಿಧಿಸುತ್ತದೆಂಬುದೇ ಸಿದ್ಧಾಂತವು.

ಕ್ರಿಯಾಸಾರದಲ್ಲಿ ಶ್ರೀಮನ್ನೀಲಕಂಠಶಿವಾಚಾರ್ಯರು ಶುಚ್ಯಶುಚಿಕಾಲಗಳಲ್ಲಿಯೂ ಇಷ್ಟಲಿಂಗವು ಧರಿಸಲು ಯೋಗ್ಯವಾಗಿರುವುದೆಂಬ ವಿಷಯದಲ್ಲಿ ವಾದಿಗೆ ಸಮ್ಮತವಾದ ಯಜ್ಞೋಪವೀತವನ್ನೇ ದೃಷ್ಟಾಂತವನ್ನಾಗಿ ತೆಗೆದುಕೊಂಡಿರುವರು. "ಇಷ್ಟಲಿಂಗಂ ಸರ್ವದಾ ಧರ್ತುಂ ಯೋಗ್ಯಂ ಪವಿತ್ರತ್ವಾತ್ ಯಜ್ಞೋಪವೀತವತ್" ಹೀಗಲ್ಲವೇ ಅವರ ಅಭಿಪ್ರಾಯವು? ಶ್ರೀನೀಲಕಂಠಶಿವಾಚಾರ್ಯರು ತಮಗೆ ಸಮ್ಮತವಾಗದ ಯಜ್ಞೋಪವೀತವನ್ನು ದೃಷ್ಟಾಂತವನ್ನಾಗಿ ಹೇಗೆ ತೆಗೆದುಕೊಂಡಾರು? ಇವರು ಪರೀಕ್ಷಕರಲ್ಲವೇ? "ಲೌಕಿಕಪರೀಕ್ಷಕಾಣಾಂ ಯಸ್ಮಿನ್ನರ್ಥೇ ಬುದ್ಧಿಸಾಮ್ಯಂ ಸ ದೃಷ್ಟಾಂತಃ" ಎಂಬ ನ್ಯಾಯಸೂತ್ರದಂತೆ ಲೌಕಿಕರಿಗೂ ಶಾಸ್ತ್ರಜ್ಞರಿಗೂ ಯಾವ ಅರ್ಥದಲ್ಲಿ ಬುದ್ಧಿಯು ಸಮಾನವಾಗಿದೆಯೋ ಅದು ದೃಷ್ಟಾಂತವಷ್ಟೆ! ಸದಾ ವಾದಿ

ಪ್ರತಿವಾದಿಗಳಿಂದ ಧರಿಸಲರ್ಹತೆಯೆಂಬ ಸಾಧ್ಯವು ಸಪಕ್ಷರೂಪವಾದ ದೃಷ್ಟಾಂತವೆನಿಸಿದ ಯಜ್ಞೋಪವೀತದಲ್ಲಿ ಮೊದಲೇ ಸಿದ್ಧವಾಗಿರಬೇಕಲ್ಲವೇ? ಇಲ್ಲಿ ವಾದಿಗಳು ವೀರಶೈವೇತರರು, ಪ್ರತಿವಾದಿಗಳು ವೀರಶೈವರಾದ ಶ್ರೀ ನೀಲಕಂಠಶಿವಾಚಾರ್ಯರು. ಇವರಿಂದ ಧರಿಸಲರ್ಹತೆಯೆಂಬ ಸಾಧ್ಯನಿಶ್ಚಯವು ಮೊದಲೇ ಇರಬೇಕಲ್ಲವೆ? "ನಿಶ್ಚಿತಸಾಧ್ಯವಾನ್ ಸಪಕ್ಷಃ" ಎಂಬಂತೆ ನಿಶ್ಚಯಿಸಲ್ಪಟ್ಟಸಾಧ್ಯವುಳ್ಳದ್ದೇ ಸಪಕ್ಷವೆನಿಸುವದಷ್ಟೆ? ಸಪಕ್ಷರೂಪವಾದ ಯಜ್ಞೋಪವೀತದಲ್ಲಿ ಪ್ರತಿವಾದಿಗಳೆನಿಸಿದ ನೀಲಕಂಠಶಿವಾಚಾರ್ಯರಿಗೆ ತಮ್ಮಿಂದಲೂ ಧರಿಸಲರ್ಹತೆಯಿಲ್ಲದಿದ್ದರೆ ಯಜ್ಞೋಪವೀತವು ಸಪಕ್ಷವೆನಿಸದೆ "ನಿಶ್ಚಿತಸಾಧ್ಯಾಭಾವವಾನ್ ವಿಪಕ್ಷಃ" ಎಂಬಂತೆ ವಿಪಕ್ಷವಾಗಬೇಕಲ್ಲವೆ? ಹೀಗೆ ವಿಪಕ್ಷವೆನಿಸಿದ ಯಜ್ಞೋಪವೀತವನ್ನು ಸಪಕ್ಷವನ್ನಾಗಿ ಏಕೆ ಉದಾಹರಿಸುತ್ತಿದ್ದರು? ಆದುದರಿಂದ ಯಜ್ಞೋಪವೀತವು ತಮ್ಮಿಂದಲೂ ಧರಿಸಲರ್ಹತೆಯೆಂಬ ಸಾಧ್ಯದ ನಿಶ್ಚಯಕ್ಕೆ ವಿಷಯವೇ ಆಗಿರುವುದೆಂದು ಸ್ಪಷ್ಟವಾಗುತ್ತದೆ. ಇನ್ನು ಸಪಕ್ಷದಲ್ಲಿ ಹೇಗೋ ಹಾಗೆ ಪವಿತ್ರತ್ವವು ಪಕ್ಷದಲ್ಲಿ ಶ್ರುತಿವಿಹಿತವಾಗಿಯೇ ಇರುವುದರಿಂದ ಹೇತ್ವಸಿದ್ಧ್ಯಾದಿದೋಷಗಳಿಲ್ಲವೆಂಬುದನ್ನು "ಪವಿತ್ರತ್ವವಿಧಾನಾತ್" ಎಂಬುದರಿಂದ ಸೂಚಿಸಿರುವರು. "ಪರ್ವತೋ ವಹ್ನಿಮಾನ್ ಧೂಮಾತ್ ಮಹಾನಸವತ್" ಎಂಬ ಪರಾರ್ಥಾನುಮಾನದಲ್ಲಿ ಮಹಾನಸವೆಂಬ ಸಪಕ್ಷದಲ್ಲಿ ಸಾಧ್ಯವೆನಿಸಿದ ವಹ್ನಿಯು ವಾದಿಪ್ರತಿವಾದಿಗಳಿಬ್ಬರಿಗೂ ಸಮ್ಮತವಾಗಿರುವಂತೆ "ಇಷ್ಟಂ ಸದಾ ಧಾರ್ಯಂ ಪವಿತ್ರತ್ವಾತ್ ಯಜ್ಞೋಪವೀತವತ್" ಎಂಬಲ್ಲಿಯೂ ಕೂಡ ವೀರಶೈವೇತರ ವೀರಶೈವರಿಬ್ಬರಿಗೂ ಸಪಕ್ಷವೆನಿಸುವ ಯಜ್ಞೋಪವೀತದಲ್ಲಿ ಸದಾ ಧಾರಣಾರ್ಹತೆ ಎಂಬ ಸಾಧ್ಯವು ಸಮ್ಮತವಾಗಿರಲೇಬೇಕೆಂಬುದು ತರ್ಕಸಂಗ್ರಹವನ್ನೋದುವ ಬಾಲಕರಿಗೂ ಸಹ ತಿಳಿಯುವಂತಿದೆ. ಅಸ್ತು!

ಈತನು ತನ್ನ ಪುಸ್ತಕದ ೧೧ನೆಯ ಪುಟದಲ್ಲಿ—

"ಯಜ್ಞಾದಿಸ್ವಾಕೃತಕರ್ಮಕಾಂಡವನ್ನು ದಾಟಿ ಕೇವಲ ಭಕ್ತಿಜ್ಞಾನಕಾಂಡದಲ್ಲಿ ನಿಷ್ಠರಾಗಿರುವುದರಿಂದ ಇವರಿಗೆ ಪ್ರಾಕೃತಬ್ರಾಹ್ಮಣರಂತೆ ಕರ್ಮಾಂಗಭೂತಗಳಾದ ಶಿಖಾಸೂತ್ರ (ಜುಟ್ಟು ಜನಿವಾರ)ಗಳ ಅವಶ್ಯಕತೆಯಿಲ್ಲ"

ಎಂದು ಬರೆದಿರುತ್ತಾನೆ. ಯಾವ ಕರ್ಮಕಾಂಡವನ್ನು ವೀರಶೈವರು ದಾಟಿರುವರೆಂದು ಈತನು ಹೇಳಿರುವನೋ ಅದೇ ಕಾಂಡದಲ್ಲಿಯೇ ಜ್ಞಾನಕಾಂಡೀಯಧರ್ಮಗಳು ಪ್ರತಿಪಾದಿಸಲ್ಪಟ್ಟಿರುವುವು; ಜ್ಞಾನಕಾಂಡದಲ್ಲಿ ಕರ್ಮಕಾಂಡೀಯ ಧರ್ಮಗಳು ಹೇಳಲ್ಪಟ್ಟಿರುವವು; ಎಂದಮೇಲೆ ವೀರಶೈವರು ಯಾವ ಕಾಂಡವನ್ನು ದಾಟಿದಂತಾಯಿತು? "ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ" "ಯುಜೇವಾಂ ಬ್ರಹ್ಮಪೂರ್ವ್ಯಂ ನಮೋಭಿರ್ವಿಶ್ಲೋಕಾಯಂತಿ" ಎಂಬಿವೇ ಮೊದಲಾದ ಋಗ್ವೇದ ಯಜುರ್ವೇದ ಮಂತ್ರಗಳು ಕರ್ಮಕಾಂಡದಲ್ಲಿ ಪಠಿತಗಳಾಗಿದ್ದು ಈ ಮಂತ್ರಗಳಿಗೆ ಆಚಾರ್ಯರು ಲಿಂಗಧಾರಣರೂಪವಾದ ಅರ್ಥವನ್ನು ಮಾಡಿರುವುದರಿಂದ ವೀರಶೈವರು ಕರ್ಮಕಾಂಡವನ್ನು ದಾಟಿದವರೆನ್ನುವುದು ಮಂದತನವಲ್ಲವೆ?

"ಕಾಂಡದ್ವಯಸ್ಯಾಪ್ಯುಭಯಾರ್ಥಪ್ರತಿಪಾದಕತ್ವೇನ ನಿಯಮಾಭಾವಾಚ್ಚ" ಎಂಬ ಕ್ರಿಯಾಸಾರದ ಪಂಕ್ತಿಯು ಈತನ ದೃಷ್ಟಿಗೆ ಬಿದ್ದಿರುವಂತೆ ತೋರಲಿಲ್ಲ ಬಿದ್ದಿದ್ದರೆ ವೀರಶೈವರು ಕರ್ಮಕಾಂಡವನ್ನು ದಾಟಿದವರೆಂದು ಎಂದೂ ಬರೆಯುತ್ತಿದ್ದಿಲ್ಲ. ವೀರಶೈವರು ಈತನು ಹೇಳುವಂತೆ ಕರ್ಮಕಾಂಡವನ್ನು ದಾಟಿದವರಾದರೆ ಇವರಿಗೆ ಶೈವಾಗ್ನಿಸಂಸ್ಕಾರವು ಸಂಭವಿಸಲಾರದು. ಅಗ್ನ್ಯಾವಾಹನಾದಿಮಂತ್ರಗಳೂ, ಗಣಪತ್ಯಾವಾಹನಾದಿಮಂತ್ರಗಳೂ ಪೂರ್ವಕಾಂಡದಲ್ಲಿ ಪಠಿತಗಳಾಗಿವೆ. ಶಿವದೀಕ್ಷಾಂಗಭೂತಗಳಾದ ಗಣಪತಿಪೂಜಾ ಹೋಮಾದಿ

ಕರ್ಮಗಳನ್ನು ವೀರಶೈವರು ಅವಶ್ಯವಾಗಿ ಆಚರಿಸಲೇ ಬೇಕು "ಅವಿಘ್ನಾರ್ಥಂತು ಯಜನಂ ಗಣೇಶಸ್ಯ ಪುರೋ ಭವೇತ್" ಎಂಬ ಪೌಷ್ಕರಾಗಮದಲ್ಲಿ ಹೇಳಲ್ಪಟ್ಟಿರುವುದರಿಂದ ಸರ್ವಕರ್ಮಾರಂಭದಲ್ಲಿ ವಿಘ್ನನಾಶಕನಾದ ಗಣಪತಿಯ ಪೂಜೆಯನ್ನು ಮಾಡುವುದಕ್ಕಾಗಿ ಅವನ ಆವಾಹನವನ್ನು ವೀರಶೈವರು ಮಾಡಬೇಕಾಗುವುದು. ಕರ್ಮಕಾಂಡವನ್ನೇ ದಾಟಿ ಮುಂದಕ್ಕೆ ಬಂದ ವೀರಶೈವರು ಗಣಪತಿಯ ಆವಾಹನದ "ಗಣಾನಾಂ ತ್ವಾ ಗಣಪತಿಂ ಹವಾಮಹೆ" ಎಂಬ ಮಂತ್ರವನ್ನು ತರುವುದಕ್ಕೆ ಹಿಂದಕ್ಕೋಡಬೇಕೇ? ಶಿವದೀಕ್ಷಾ ಸಮಯದಲ್ಲಿ ಕುಂಡಮಂಡಲಿಕಾದಿಗಳು ರಚಿಸಲ್ಪಡಬೇಕೆಂಬ ವಿಷಯವು ಸಿದ್ಧಾಂತಶಿಖಾಮಣಿ ಮೊದಲಾದ ಗ್ರಂಥಗಳಲ್ಲುಕ್ತವಾಗಿರುವುದರಿಂದ ಬ್ರಹ್ಮಕಾಂಡದಲ್ಲಿ ನಿರತರಾದ ವೀರಶೈವರು ಕರ್ಮಕಾಂಡವನ್ನು ದಾಟಿದವರೆಂದು ಹೇಳುವುದೂ ವೀರಶೈವರಿಗೆ ಕರ್ಮಾಂಗಭೂತಗಳಾದ ಶಿಖಾ ಸೂತ್ರಗಳ ಅವಶ್ಯಕತೆಯಿಲ್ಲವೆನ್ನುವುದೂ ಮಂದತನವು. ಶಿಖಾ ಯಜ್ಞೋಪವೀತಗಳನ್ನೂ ಸರ್ವ ಕರ್ಮಗಳನ್ನೂ ಬಿಟ್ಟು "ಅಯಂ ಕೌಪೀನಂ ದಂಡಮಾಚ್ಛಾದನಂ ಚ ಸ್ವಶರೀರೋಪಭೋಗಾರ್ಥಾಯ ಲೋಕಸ್ಯೋಪಕರಣಾರ್ಥಾಯ ಚ ಪ್ರವ್ರಜೇತ್" ಎಂಬ ಪರಮ ಹಂಸೋಪನಿಷದುಕ್ತಿಯಂತೆ ಶಿಖಾಯಜ್ಞೋಪವೀತಗಳ ತ್ಯಾಗವು ಸನ್ಯಾಸಿಗಳಾದ ವೀರಶೈವರಿಗಲ್ಲದೆ ಎಲ್ಲ ವೀರಶೈವರಿಗೂ ಅಲ್ಲ. ಈ ವಾಕ್ಯಾನುಸಾರವಾಗಿ "ಸಶಿಖಂ ವಪನಂ ಕೃತ್ವಾ ಬಹಿಸ್ಸೂತ್ರಂ ತ್ಯಜೇದ್ಬುಧಃ" ಎಂಬ ಬ್ರಹ್ಮೋಪನಿಷತ್ತಿನ ವಾಕ್ಯಕ್ಕೂ ಸನ್ಯಾಸಿಯ ಪರವಾಗಿ ಅರ್ಥಮಾಡಬೇಕಲ್ಲದೆ, ಇತರಾಶ್ರಮಿಗಳ ಪರವಾಗಿ ಅರ್ಥ ಮಾಡುವುದು ಅಸಂಗತವು. ಪರಮಹಂಸೋಪನಿಷತ್ತಿನಲ್ಲಿ ಸ್ವಪುತ್ರ ಕಲತ್ರಬಂಧು ಮೊದಲಾದವರನ್ನು ಬಿಟ್ಟು ತನ್ನ ಶರೀರವನ್ನು ಹೆಣದಂತೆ ಕಂಡು ಪರಮವಿರಾಗಿಯಾದ ತತ್ತ್ವಜ್ಞಾನಿಗೆ ಜ್ಞಾನಶಿಖಾ

ಜ್ಞಾನಯಜ್ಞೋಪವೀತಗಳು ಹೇಳಲ್ಪಟ್ಟಿರುವವಲ್ಲದೆ, ಸನ್ಯಾಸಿಗಳಲ್ಲದ ಎಲ್ಲಾ ವೀರಶೈವರಿಗೂ ಹೇಳಲ್ಪಟ್ಟಿಲ್ಲವೆಂದು ಸ್ಪಷ್ಟವಾಗಿದ್ದರೂ, ಪುತ್ರ ಕಲತ್ರಾದಿವಿಶಿಷ್ಟರಾಗಿರುವ ಸಕಲವೀರಶೈವರಿಗೂ ಜ್ಞಾನಶಿಖಾದಿಗಳನ್ನು ಹೇಳುವುದು ಮೂಢತನವಲ್ಲದೆ ಬೇರೆಯಲ್ಲ. ಆದುದರಿಂದ ವೀರಶೈವರಿಗೆ ಜ್ಞಾನಶಿಖಾಜ್ಞಾನಸೂತ್ರಗಳುಂಟೆಂದು ಈತನು ತನ್ನ ಪುಸ್ತಕದ ೨೨ ನೆಯ ಪುಟದಲ್ಲಿ "ಅಗ್ನೇರಿವ ಶಿಖಾ" ಇತ್ಯಾದಿ ಬ್ರಹ್ಮೋಪನಿಷತ್ತಿನ ಮಂತ್ರಗಳನ್ನು ಬರೆದಿರುವುದು ಉನ್ಮತ್ತರಿಗೆ ಸಾಧುವಲ್ಲದೆ ಬೇರೆಯಲ್ಲ. ಈತನು "ಅಗ್ನೇರಿವ" "ಶಿಖಾ ಜ್ಞಾನ ಮಯೀ" ಎಂಬೆರಡು ಮಂತ್ರಗಳನ್ನು ಯಾವ ಬ್ರಹ್ಮೋಪನಿಷತ್ತಿನಿಂದ ತೆಗೆದುಕೊಂಡಿರುವನೋ ಅವೆರಡರ ಮಧ್ಯದಲ್ಲಿಯೇ—

ಕರ್ಮಣ್ಯಧಿಕೃತಾ ಯೇ ತು ವೈದಿಕೇ ಬ್ರಾಹ್ಮಣಾದಯಃ ।
ತೇಭಿರ್ಧಾರ್ಯಮಿದಂ ಸೂತ್ರಂ ಕ್ರಿಯಾಂಗಂ ತದ್ಧಿವೈ ಸ್ಮೃತಂ॥

ಎಂಬ ಮಂತ್ರವು ಗುಡ್ಡದಂತೆ ಕುಳಿತಿರಲು ಅದನ್ನು ಜಿಗಿದುಹೋಗಿ ಮನಬಂದಂತೆ ಬರೆದಿರುವ ಈತನ ಎದೆಗಾರಿಕೆಗೆ ಬೆಲೆಯೇ? ಆದುದ ರಿಂದ ವೀರಶೈವದ್ವಿಜರಿಗೆ ಶಿಖಾಸೂತ್ರಗಳಿರಬೇಕೆಂಬುದೇ ಘಂಟಾಘೋ ಷವಾದ ಸಿದ್ಧಾಂತವು.

ಈ ಮುಂಡಿಯು ತನ್ನ ಪುಸ್ತಕದ ೧೧ ನೆಯ ಪುಟದಲ್ಲಿ—

"ವೀರಶೈವಮಹಾದೀಕ್ಷಾಂ ಪ್ರಪನ್ನಃ ಶ್ರುತಿಕೋವಿದಃ | ನೋ ಧಾರಯೇ ತ್ಕುಟುಂಬೀ ಸನ್ ಶಿಖಾಂ ಪ್ರಾಕೃತವಿಪ್ರವತ್ ॥ ಯೇ ಶಿಖಾಸೂತ್ರ ಸಂಯುಕ್ತಾ" ಇತ್ಯಾದಿವೀರಾದಿಶಿವಾಗಮವಚನಗಳು ಶಿವದೀಕ್ಷಾಸಂಸ್ಕಾರಘಟಿತರಾದ ವೀರಶೈವರು ಪ್ರಾಕೃತ ಬ್ರಾಹ್ಮಣಾದಿಗಳ ಹಾಗೆ ಶಿಖಾಸೂತ್ರ (ಜುಟ್ಟು-ಜನಿವಾರ) ಗಳನ್ನು ಧರಿಸ ಕೂಡದೆಂದು ಬಲವಾಗಿ ಶಾಸನಮಾಡುತ್ತವೆ."

ಎಂದು ಬರೆದಿದ್ದಾನೆ. ಇವು ವೀರಾದಿಶಿವಾಗಮವಚನಗಳಂತೆ ! ೧॥ ಶ್ಲೋಕಕ್ಕೆ ವೀರಾದಿಶಿವಾಗಮವಚನಗಳೆಂದು ಬರೆಯಬೇಕಾದರೆ,

ಈ ಮುಂಡಿಯ ಧೂರ್ತತನಕ್ಕೂ, ವಂಚಕತನಕ್ಕೂ ಬೆಲೆಯೇ ಇಲ್ಲ ವೆಂದು ಹೇಳಬೇಕಾಗಿದೆ. ಆಹಾ! ಸುಳ್ಳೇ ನೀನೇ ಧನ್ಯ! ಧನ್ಯ!! ಈತ ನನ್ನು ಆಶ್ರಯಿಸಿದ ನಿನ್ನ ಪುಣ್ಯಕ್ಕೆ ಎಣೆಯಿಲ್ಲ. ಅಸ್ತು! ಈ ಶ್ಲೋಕವ್ವ ವೀರಾಗಮದಲ್ಲಿ ಪಾತಾಳಗಡೆಯನ್ನು ಹಾಕಿ ಹುಡುಕಿದರೂ ಸಿಗುವಂತಿಲ್ಲ ಇಂಥ ಅಮಂಗಲಶ್ಲೋಕವು ಆ ಶಿವಾಗಮದಲ್ಲಿದ್ದೀತೆ? ಇದು ಯಾವನೋ ಒಬ್ಬ ಶೂದ್ರನಿಂದ ರಚಿಸಲ್ಪಟ್ಟದ್ದಂತೆ ತೋರುತ್ತದೆ ಆದುದರಿಂದ ಈತನು ಸುಳ್ಳುಹೇಳಿ ವೀರಾಗಮದಲ್ಲಿಯ ಶ್ಲೋಕವೆಂದು ಬರೆಯುವುದಕ್ಕಿಂತಲೂ "ಸುಳ್ಳಾಗಮ" ದಲ್ಲಿಯ ಶ್ಲೋಕವೆಂದು ಬರೆ ದಿದ್ದರೆ ಈತನಿಗೆ ಬಹು ಭೂಷಣವಿತ್ತು. ಮುಂಡಿಯೇ! ವೀರಾಗಮವ್ವ ಮದ್ರಾಸ್ ಗೌರ್ನಮೆಂಟ್ ಓರಿಯಂಟಲ್ ಲೈಬ್ರರಿಯಲ್ಲಿ ದೊರೆಯು ತ್ತದೆ. ದುಡ್ಡು ಖರ್ಚುಮಾಡಿ ಬರೆಯಿಸಿ ತರಿಸಿಕೊಂಡು ಸಂಪೂರ್ಣ ವಾಗಿ ಓದಿನೋಡಿ ಸುಳ್ಳುವಿಷಯಗಳನ್ನು ಬರೆಯುವುದರಿಂದ ದೂರ ನಾಗು. ಅಂದರೆ ಪರಮೇಶ್ವರನು ಮೆಚ್ಚುವನು. ಅಸತ್ಯಮಾರ್ಗವನ್ನು ಹಿಡಿದದ್ದಾದರೆ ಅವನ ಕೃಪೆಯು ಎಂದೂ ಆಗುವದಿಲ್ಲವೆನ್ನುವುದನ್ನು ಪೂರ್ಣವಾಗಿ ನಂಬು. ವೀರಾಗಮವು ಕೇವಲ ಶಿಖಾಸೂತ್ರಧಾರಣವನ್ನೇ ಬೋಧಿಸುತ್ತದೆ. ಆ ಆಗಮದಲ್ಲಿ ಶಿಖಾಸೂತ್ರಗಳನ್ನು ಪ್ರತಿಪಾದಿಸುತ್ತಿ ರುವ ಶ್ಲೋಕಗಳು ಈ ಕೆಳಗೆ ಉದಾಹರಿಸಲ್ಪಟ್ಟಿವೆ. ಅವುಗಳನ್ನು ಚನ್ನಾಗಿ ನೋಡಿ ಭ್ರಾಂತಿಯಿಂದ ದೂರನಾಗು.

ಶಿಖಾ ಸೂತ್ರಂ ಜಟಾ ಭಸ್ಮ ದಂಡಾಧಾರೌ ಕಮಂಡಲುಃ ।
ಆಸನಂ ಧ್ಯಾನಭವನಮೇವಂ ಜಂಗಮಲಕ್ಷಣಂ ॥೯॥

(ವೀರಾಗಮ. ಪಟಲ. ೯)

ಜಟಾ ಯಜ್ಞೋಪವೀತಂ ಚ ಕೌಪೀನಂ ಚ ಕಮಂಡಲುಃ ॥೪॥

(ವೀರಾಗಮ. ಪಟಲ. ೧೨)

ಶಿಖಾಯಾಂ ಧಾರಯೇನ್ನಿತ್ಯಂ ತಸ್ಯ ಪುಣ್ಯಫಲಂ ಶೃಣು ॥೩೦॥

(ವೀರಾಗಮ. ಪಟಲ. ೧೪)

ಅಕ್ಷಮಾಲಾ ತಥಾ ಲಿಂಗಂ ಬ್ರಹ್ಮಸೂತ್ರಂ ಚ ಕಂಬಲಂ ।
ಏತೈರ್ವಿರಾಜಿತೋ ಕಶ್ಚಿತ್ತದೇತಜ್ಜಂಗಮಸ್ಥಲಂ ॥೨॥
(ವೀರಾಗಮ. ಪಟಲ. ೨೨)

ಅಂಗಹೀನಂ ಚಾಧಿಕಾಂಗಂ ಕೇಶಹೀನಂ ತಥೈವ ಚ ।
ಅರ್ಚನಾದಿಕ್ರಿಯಾಕಾಲೇ ದೀಕ್ಷಿತೋ ನೈವ ದರ್ಶಯೇತ್ ॥೩೪॥
(ವೀರಾಗಮ. ಪಟಲ. ೨೫)

ಇತ್ಯಾದಿಶ್ಲೋಕಗಳು ಶಿಖಾಸೂತ್ರಧಾರಣವನ್ನು ಬಲವಾಗಿ ಬೋಧಿಸುವವಲ್ಲದೆ, ದೀಕ್ಷಿತನು ಕೇಶಹೀನನಾದ ಮುಂಡಿಯನ್ನು (ಬೋಳದಲೆಯವನನ್ನು) ಶಿವಪೂಜಾಕಾಲದಲ್ಲಿ ನೋಡಬಾರದೆಂದು ಶಾಸನಮಾಡುವುವು. ಮುಂಡಿಯೇ! ಇವುಗಳನ್ನೆಲ್ಲಾ ಚನ್ನಾಗಿ ನೋಡಿ ಧನ್ಯನಾಗು.

ಈತನು ತನ್ನ ಪುಸ್ತಕದ ೧೩ನೆಯ ಪುಟದಲ್ಲಿ—

"ಕರ್ಮಾಂಗಭೂತವಾದ ಶಿಖೆಯು ಬ್ರಾಹ್ಮಣ್ಯದಲ್ಲಿ ಮುಖ್ಯ ಚಿಹ್ನವೆಂದೂ, ಶಿಖೆಯಿಲ್ಲದವರಲ್ಲಿ ಬ್ರಾಹ್ಮಣ್ಯವು ಸಿದ್ಧಿಸುವುದಿಲ್ಲವೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. ಇದಕ್ಕುತ್ತರವೇನು?"

ಎಂದು ಬರೆದ ಪ್ರಶ್ನವು ಸಾಧುವಾಗಿದ್ದು, ಉತ್ತರವು ಮಾತ್ರ ಅಸಮಂಜಸವಾಗಿರುವದು. ಶಿಖೆಯು ಅಪ್ರಾಕೃತಬ್ರಾಹ್ಮಣಾದಿತ್ರಿವರ್ಣದವರಲ್ಲಿ ಮುಖ್ಯಚಿಹ್ನವಾಗಿರುವುದೆಂದು ಶಿಖಾವಾದಿಗಳು ಹೇಳುವರಲ್ಲದೆ, ಪ್ರಾಕೃತಬ್ರಾಹ್ಮಣಾದಿಗಳಲ್ಲಿ ಮುಖ್ಯಚಿಹ್ನವೆಂದು ಹೇಳುವುದಿಲ್ಲ. ಪ್ರಾಕೃತಬ್ರಾಹ್ಮಣಾದಿಗಳಿಗೆ ಶಿಖೆಯು ಇರಲಿ ಅಥವಾ ಇಲ್ಲದಿರಲಿ, ಆ ವಿಚಾರದಿಂದ ಶಿಖಾವಾದಿಗಳಿಗೇನೂ ಪ್ರಯೋಜನವಿಲ್ಲ. ವೀರಶೈವರೆಲ್ಲರೂ ಬೋಳದಲೆಯವರಾಗಿರಬೇಕೆಂದು ಹೇಳುವ ಕೆಲಜನ ಮೂಢರ ಮೌಢ್ಯನಿರಸನಕ್ಕಾಗಿ ವೀರಶೈವದ್ವಿಜರಿಗೆ ಶಿಖೆಯು ಅವಶ್ಯವಾಗಿರ

ಬೇಕೆಂದು ಹೇಳುವರು. ದ್ವಿಜತ್ವದ್ಯೋತಕವಾದ ಯಜ್ಞೋಪವೀ
ಧಾರಣವೂ ಹಾಗೂ ಇಷ್ಟಲಿಂಗಧಾರಣವೂ "ಶ್ರೌತಾನಾಮುಪನಯ
ಕಾಲೇ ಧಾರಣಂ" ಎಂಬ ಲಿಂಗೋಪಪತ್ತಿನ ವಾಕ್ಯದಂತೆಯೂ
"ದ್ವಿಜತ್ವ ಚಿಹ್ನಾರ್ಥಂ" ಎಂಬ ದೀಕ್ಷಾವಿಧಿಯ ವಾಕ್ಯದಂತೆಯ
ವೀರಶೈವದ್ವಿಜರಿಗೆ ಉಕ್ತವಾಗಿರುವುದರಿಂದ ಇವರು ಶಿಖಾಸೂತ್ರಗಳನ್ನು
ಧರಿಸಲೇಬೇಕು. ಬ್ರಾಹ್ಮಣ್ಯಾದಿಗಳನ್ನು ಕಂಡುಹಿಡಿಯಬೇಕಾದರೆ ಮುಖ್ಯ
ವಾಗಿ ಶಿಖಾಸೂತ್ರಧಾರಣವು ಬೇಕೇಬೇಕು. ಹಾಗಾದರೆ ಪ್ರಾಕ್ತ
ಸನ್ಯಾಸಿಗಳಲ್ಲಿ ಶಿಖೆಯಿಲ್ಲದಿದ್ದರೂ ಅವರಲ್ಲಿ ಬ್ರಾಹ್ಮಣ್ಯವು ಕಂಡುಬ
ವದಲ್ಲ? ಎಂಬ ಶಂಕೆಗೆ ಅವಕಾಶವೇ ಇಲ್ಲ. ಏಕೆಂದರೆ— ಅವರ
ಜನ್ಮಸಿದ್ಧವಾದ ಬ್ರಾಹ್ಮಣ್ಯವಿದ್ದರೂ ನಿತ್ಯನೈಮಿತ್ತಿಕಾದಿವೈದಿ
ಕರ್ಮಾಧಿಕಾರಯೋಗ್ಯವಾದ ಬ್ರಾಹ್ಮಣ್ಯವಿರುವುದಿಲ್ಲ. ಅಧಿಕಾರಾರ್ಹವಾ
ಈ ಬ್ರಾಹ್ಮಣ್ಯವು ಶಿಖಾಸೂತ್ರಧಾರಣಸಹಿತವಾದುದು. ಸನ್ಯಾಸಗ್ರಹ
ಸಮಯದಲ್ಲಿ "ಸಶಿಖಂ ವಪನಂ ಕೃತ್ವಾ ಬಹಿಸ್ಸೂತ್ರಂ ತ್ಯಜೇದ್ಬುಧಃ"
ಎಂದು ಶ್ರುತಿಯು ಶಿಖಾಸೂತ್ರತ್ಯಾಗವನ್ನು ಬೋಧಿಸುವುದರಿಂದ ಹ
ದಿನ ಮೂರು ಆಶ್ರಮಗಳಲ್ಲಿ ಶಿಖಾಸೂತ್ರಗಳಿರಲೇಬೇಕೆಂದು ಸಿದ್ಧವಾಗು
ವುದರಿಂದಲೂ, ಇದು ಶಿಷ್ಟಸಮ್ಮತವಾದುದರಿಂದಲೂ ಮನುವೂ ಕೂ
"ಅಥವಾಸ್ಯಾಚ್ಛಿಖಾಜಟಃ" ಎಂಬುದರಿಂದ ಮುಂಡನಾದಿಗಳ ವಿ
ಯದಲ್ಲಿ ಅಸ್ವಾರಸ್ಯವನ್ನು ತೋರಿಸಿ ಶಿಖೆಯಲ್ಲಿಯೇ ಸ್ವಾಭಿಪ್ರಾಯವನ್ನು
ದೃಢಗೊಳಿಸಿರುವುದರಿಂದಲೂ ವೈದಿಕಕರ್ಮಾರ್ಹವಾದ ಬ್ರಾಹ್ಮಣ್ಯ
ಶಿಖಾಸೂತ್ರಗಳನ್ನವಲಂಬಿಸಿರುವುದೆನ್ನುವುದೇ ಶಾಸ್ತ್ರಸಿದ್ಧಾಂತವು
ವಸಿಷ್ಠಾದಿಗಳಲ್ಲಿ ಶಿಖೆಯಿಲ್ಲದಿದ್ದರೂ ಅವರು ಲೋಕದಲ್ಲಿ ಬ್ರಾಹ್ಮಣ
ರೆಂದು ಪ್ರಸಿದ್ಧರಾದರೆಂದು ಈ ಮುಂಡಿಯು ಬರೆದಿರುತ್ತಾನೆ. ಈತನು
ಹೀಗೆ ತಿಳಿದುಕೊಂಡಿರುವುದು ತಪ್ಪಾಗಿದೆ. ಏಕೆಂದರೆ—ವಸಿಷ್ಠಾದಿಗಳಿಗೆ
ಉಪನಯನಕಾಲದಲ್ಲಿ ಶಿಖಾಧಾರಣವಿತ್ತು. ಬ್ರಹ್ಮಚರ್ಯಗಾರ್ಹಸ್ಥ

ಗಳಲ್ಲಿಯೂ ಇತ್ತು. ವಾನಪ್ರಸ್ಥಾಶ್ರಮದಲ್ಲಿ ತದುಚಿತವಾದ ಜಟಾಧಾರಣವು ಪ್ರಾಪ್ತವಾಯಿತು. ಶಿಖಾಧಾರಣಪೂರ್ವಕವಾದ ವಪನವಿಧಿಯಿಲ್ಲದೆ ಎಲ್ಲಿಯಾದರೂ ಉಪನಯನವಾಗುವುದೇನಪ್ಪಾ ಮುಂಡಿಯೇ! ಈತನು ತನ್ನ ಜನ್ಮದಲ್ಲಿ ಉಪನಯನಕರ್ಮವನ್ನು ನೋಡಿದ್ದಂತೆ ಕಾಣಲಿಲ್ಲ. ನೋಡಿದ್ದರೆ ಹೀಗೆಂದಿಗೂ ಬರೆಯುತ್ತಿದ್ದಿಲ್ಲ. ಇನ್ನಾದರೂ ಈತನು ಉಪನಯನಕರ್ಮವನ್ನು ಪ್ರತ್ಯಕ್ಷವಾಗಿ ನೋಡಿ ಶಿಖೆಯು ಬ್ರಾಹ್ಮಣ್ಯದಲ್ಲಿ ಮುಖ್ಯಚಿಹ್ನವೆನ್ನುವುದೇ ವೈದಿಕಸಿದ್ಧಾಂತವೆಂದು ನಂಬಿ ಧನ್ಯನಾಗಲಿ.

ಈ ಮುಂಡಿಯು ತನ್ನ ಪುಸ್ತಕದ ೧೪ನೆಯ ಪುಟದಲ್ಲಿ—ಜ್ಞಾನಶಿಖಾಜ್ಞಾನಯಜ್ಞೋಪವೀತಗಳಿಂದ ಬ್ರಾಹ್ಮಣ್ಯವನ್ನು ಅಂಗೀಕರಿಸುವುದು ಶೈವಾದಿಮತಾಂತರದವರಿಗೆ ಸಮ್ಮತವಾಗಿದೆಯೋ? ಎಂದು ಪ್ರಶ್ನಮಾಡಿಕೊಂಡು, ಶೈವಾದಿಪ್ರಾಕೃತಮತಗಳಲ್ಲಿ ಬ್ರಹ್ಮ-ಕ್ಷತ್ರ-ವೈಶ್ಯ-ಶೂದ್ರಗಳೆಂದು ಚತುರ್ವರ್ಣಗಳಿರುವವೆಂದೂ, ಅವುಗಳಲ್ಲಿ ಬ್ರಾಹ್ಮಣಾದಿ ಚತುರ್ವರ್ಣಗಳು ಬ್ರಹ್ಮಚರ್ಯಾದಿಚತುರಾಶ್ರಮಗಳಿಂದ ಕೂಡಿವೆಯೆಂದೂ, ಆ ಚತುರಾಶ್ರಮಗಳಲ್ಲಿ ಚತುರ್ಥಾಶ್ರಮಿಗಳು (ಸನ್ಯಾಸಾಶ್ರಮಿಗಳು) "ಅಸೌ ಸ್ವಪುತ್ರಾ" ಎಂಬ ಪರಮಹಂಸೋಪನಿಷದುಕ್ತಿಯಂತೆ ಕರ್ಮಾಂಗಭೂತಗಳಾದ ಶಿಖಾಸೂತ್ರಗಳನ್ನು ತ್ಯಜಿಸುವರೆಂದೂ, ಆದರೂ ಅವರಲ್ಲಿ ಬ್ರಾಹ್ಮಣ್ಯವು ಅವ್ಯಾಹತವಾಗಿರುವುದೆಂದೂ ಬರೆದು, ಈ ಬಗ್ಗೆ "ಸನ್ಯಸ್ತಂ" ಎಂಬ ಶ್ಲೋಕವನ್ನುದಾಹರಿಸಿ, ಶಂಕರಾಚಾರ್ಯರ ದೃಷ್ಟಾಂತವನ್ನು ತೆಗೆದುಕೊಂಡು, ಅವರಲ್ಲಿ ಕೇವಲ ಜ್ಞಾನಬ್ರಾಹ್ಮಣ್ಯವನ್ನೇ ಅಂಗೀಕಾರಮಾಡಬೇಕಾಗುವದೆಂದು ಹೇಳಿ, ಜ್ಞಾನಬ್ರಾಹ್ಮಣ್ಯದಲ್ಲಿ ಜ್ಞಾನಶಿಖಾ, ಜ್ಞಾನಯಜ್ಞೋಪವೀತಗಳೇ ಮುಖ್ಯವಾಗಿರುವುವೆಂಬಲ್ಲಿ "ಶಾಂತಮಚಲಂ" ಎಂಬ ಪರಮಹಂಸೋಪನಿಷದ್ವಾಕ್ಯವನ್ನು ಬರೆದು ಜ್ಞಾನಶಿಖಾಜ್ಞಾನ

ಯಜ್ಞೋಪವೀತಗಳಿಂದ ಬ್ರಾಹ್ಮಣ್ಯವನ್ನು ಸ್ವೀಕಾರಮಾಡುವ್ವ
ಶೈವಾದಿಮತದವರಿಗೂ ಸಮ್ಮತವಾಗಿದೆ ಎಂದು ಉತ್ತರವನ್ನು ಬರೆದಿ
ತ್ತಾನೆ. ಇನ್ನು ಧರ್ಮಶಾಸ್ತ್ರವಿರುದ್ಧವಾದ ಈತನ ಅಮಂಗಲವಿಚಾ
ಸರಣಿಯನ್ನು ವಿಮರ್ಶಿಸುವಾ!

ಶಂಕರಾಚಾರ್ಯರ ದೃಷ್ಟಾಂತವನ್ನು ತೆಗೆದುಕೊಂಡ ಈ ಘ
ಪಂಡಿತನು ತನ್ನ ಉತ್ತರದಲ್ಲಿ ಸ್ಮಾರ್ತಾದಿಮತಾಂತರದವರೆಂದು ಬ
ಯದೆ ಶೈವಾದಿಮತಾಂತರದವರೆಂದು ಬರೆದಿರುವದನ್ನು ನೋಡಿ
ಈತನಿಗೆ ಶೈವ ಮತ್ತು ಸ್ಮಾರ್ತಮತಗಳ ಸ್ವರೂಪವೇ ಗೊತ್ತಿಲ್ಲವೇ
ಸ್ಪಷ್ಟವಾಗುತ್ತದೆ. ಇರಲಿ: ಪ್ರಾಕೃತಮತಗಳಲ್ಲಿ ಬ್ರಾಹ್ಮಣಾದಿಚತುವ
ರ್ಣಗಳೂ ಬ್ರಹ್ಮಚರ್ಯಾದಿಚತುರಾಶ್ರಮಗಳೂ ಉಂಟೆಂದು ಹೇಳು
ಈತನು ಅಪ್ರಾಕೃತ (ವೀರಶೈವ) ಮತದಲ್ಲಿ ಬ್ರಾಹ್ಮಣಾದಿಚತುರ್ವ
ಗಳೂ ಬ್ರಹ್ಮಚರ್ಯಾದಿಚತುರಾಶ್ರಮಗಳೂ ಇಲ್ಲವೆಂದು ಹೇಳುವ
ಮೂಢತನವಲ್ಲವೇ? ಈತನು ಮೊದಲು ತನ್ನ ಪುಸ್ತಕದಲ್ಲಿ ನಾ
ವರ್ಣಗಳ ವಿಷಯವನ್ನು ತಾನೇ ಒಪ್ಪಿಕೊಂಡು ಪುನಃ ವೀರಶೈವ
ಗೆಲ್ಲಾ ಒಂದೇ ಒಂದು ವರ್ಣವೆಂದು ಬರೆಯಬೇಕಾದರೆ ಈತನನ್ನ
ಆಗಾಗ್ಗೆ ಯಾವುದೋ ಒಂದು ಗ್ರಹವು ಸೋಂಕಿ ಮೊದಲು ನುಡಿದಿರು
ನುಡಿಗಳನ್ನು ಮರೆಯಿಸಿ ಮನಸ್ಸಿಗೆ ಬಂದಹಾಗೆ ನುಡಿಸಹತ್ತಿರುವ
ಕಂಡುಬರುವದರಿಂದ ಆ ಗ್ರಹವನ್ನು ಉಚ್ಚಾಟನಗೊಳಿಸುವುದಕ್ಕಾ
ವರ್ಣಾಶ್ರಮವಿಷಯವನ್ನು ವಿವರಿಸೋಣ!

ಶ್ರೀಜಗದ್ಗುರುರೇಣುಕಾಚಾರ್ಯರು ಸಿದ್ಧಾಂತಶಿಖಾಮಣಿಯಲ್ಲಿ—

ವರ್ಣಾಶ್ರಮಾದಿಧರ್ಮಾಣಾಂ ವ್ಯವಸ್ಥಾ ಹಿ ದ್ವಿಧಾ ಮತಾ।
ಏಕಾ ಶಿವೇನ ನಿರ್ದಿಷ್ಟಾ ಬ್ರಹ್ಮಣಾ ಕಥಿತಾ ಪರಾ ॥೬

(ಪರಿಚ್ಛೇದ. ೧

ಸ್ವಮಾರ್ಗಾಚಾರನಿರತಾಃ ಸಜಾತೀಯಾ ದ್ವಿಜಾಸ್ತು ಯೇ ।
ತೇಷಾಂ ಗೃಹೇಷು ಭುಂಜೀತ ನೇತರೇಷಾಂ ಕದಾಚನ ॥೩೯॥
ಸ್ವಮಾರ್ಗಾಚಾರವರ್ತಿಭ್ಯಃ ಸ್ವಜಾತಿಭ್ಯಃ ಸದಾ ವ್ರತೀ ।
ದದ್ಯಾತ್ತೇಭ್ಯಃ ಸಮಾದದ್ಯಾತ್ ಕನ್ಯಾಂ ಕುಲಸಮುದ್ಭವಾಂ ॥೪೯॥
(ಪರಿಚ್ಛೇದ ೯)

ಎಂದು ಅಪ್ಪಣೆಕೊಡಿಸಿರುವರು. ಅಂದರೆ ವರ್ಣಾಶ್ರಮಧರ್ಮಗಳು ಶಿವ ಮತ್ತು ಬ್ರಹ್ಮ ಈ ಉಭಯರಿಂದ ನಿರ್ಮಿತಗಳಾಗಿದ್ದು ಎರಡು ಪ್ರಕಾರ ವಾಗಿರುವುವೆಂದೂ, ವೀರಶೈವಸಜಾತೀಯ ದ್ವಿಜರು ಸಜಾತೀಯ ದ್ವಿಜ ರಲ್ಲಿಯೇ ಭೋಜನಮಾಡಬೇಕೆಂದೂ, ಉಳಿದವರಲ್ಲಿ ಮಾಡಬಾರದೆಂದೂ, ವೀರಶೈವಮತದಲ್ಲಿರುವ ತಮ್ಮ ತಮ್ಮ ಜಾತಿಯವರು ತಮ್ಮ ತಮ್ಮ ಜಾತಿಯಲ್ಲಿಯೇ ಶರೀರಸಂಬಂಧವನ್ನು ಮಾಡಬೇಕೆಂದೂ ಚತುರ್ವಿಧ ವರ್ಣಾಶ್ರಮಗಳ ಹಾಗೂ ಜಾತಿಗಳ ವಿಷಯವನ್ನು ಸ್ಪಷ್ಟವಾಗಿ ಶಾಸನಗೊಳಿಸಿರುತ್ತಾರೆ. ಶಂಕರಸಂಹಿತೆಯ ೮೬ನೆಯ ಅಧ್ಯಾಯದಲ್ಲಿ—

ಅಧ್ಯಾಪನಂಚಾಧ್ಯಯನಂ ದಾನಂ ಯಜನಯಾಜನೇ ॥೬೦॥
ಪ್ರತಿಗ್ರಹೋ ಬ್ರಾಹ್ಮಣಾನಾಂ ಷಟ್ಕರ್ಮಾಣಿ ಪ್ರಚಕ್ಷತೇ ।
ದಾನಮಧ್ಯಯನಂ ಯಜ್ಞಸ್ತ್ರೀಣಿ ರಾಜನ್ಯವೈಶ್ಯಯೋಃ ॥೬೨॥
ಶಸ್ತ್ರಾಜೀವೋ ಮಹೀರಕ್ಷಾಪ್ಯಪಲಾಯನಮಾಹವೇ ।
ಕ್ಷತ್ರಿಯಾಣಾಮಯಂ ಧರ್ಮಃ ಸ್ವಧರ್ಮಸ್ಯಾನುಯಾಯಿನಾಂ ॥೬೩॥

ಕೃಷಿವಾಣಿಜ್ಯಗೋರಕ್ಷಾಧರ್ಮೋsಯಂ ಸಹಜೋ ವಿಶಾಂ ।
ಶೂದ್ರಾಣಾಂ ದ್ವಿಜಶುಶ್ರೂಷಾರತಾನಾಂ ಕಾಮ್ಯಕರ್ಮಚ ॥೬೪॥

ವರ್ಣಾಶ್ರಮಸದಾಚಾರಾಶ್ಶಿವೇನ ಕಥಿತಾಃ ಪುರಾ ।
ಯೇ ತಾನುಲ್ಲಂಘ್ಯ ವರ್ತಂತೇ ಶಿವಸ್ಯಾಜ್ಞಾಪಲಾಪಿನಃ ॥೬೭॥
ಶಿವೋಕ್ತಾಂ ಜಾತಿಮರ್ಯಾದಾಂ ಯೋsತೀತ್ಯ ಭುವಿ ವರ್ತತೇ ।
ಸ ಚಂಡಾಲ ಇತಿ ಜ್ಞೇಯಃ ಸರ್ವಕರ್ಮಬಹಿಷ್ಕೃತಃ ॥೮೦॥

ಅಂದರೆ ವೀರಶೈವಬ್ರಾಹ್ಮಣರಿಗೆ ಯಜನ-ಯಾಜನ-ಅಧ್ಯಯ
ಅಧ್ಯಾಪನ-ದಾನ-ಪ್ರತಿಗ್ರಹಣಗಳೆಂಬ ಆರು ಕರ್ಮಗಳಿರಬೇಕೆಂದೂ
ವೀರಶೈವಕ್ಷತ್ರಿಯರಿಗೂ ವೀರಶೈವವೈಶ್ಯರಿಗೂ ಅಧ್ಯಯನ-ದಾನ-ಯ
ನಗಳೆಂಬ ಮೂರು ಕರ್ಮಗಳಿರಬೇಕೆಂದೂ, ವೀರಶೈವಕ್ಷತ್ರಿಯ
ಯುದ್ಧದಲ್ಲಿ ಸೋತು ಓಡಿಹೋಗದೆ ಶಸ್ತ್ರದಿಂದ ಜೀವಿಸುತ್ತ ಭೂ
ಯನ್ನಾಳಬೇಕೆಂದೂ, ವೀರಶೈವವೈಶ್ಯರು ಕೃಷಿ-ವಾಣಿಜ್ಯ-ಗೋರಕ್ಷ
ಮೊದಲಾದ ಕಾರ್ಯಗಳಲ್ಲಿ ನಿರತರಾಗಿರಬೇಕೆಂದೂ, ವೀರಶೈ
ಶೂದ್ರರು ವೀರಶೈವದ್ವಿಜರ ಸೇವೆಯಲ್ಲಿ ಆಸಕ್ತರಾಗಿರಬೇಕೆಂದೂ
ಶಿವನಿಂದ ಹೇಳಲ್ಪಟ್ಟ ವರ್ಣಾಶ್ರಮಧರ್ಮಗಳನ್ನು ಯಾರು ಉಲ್ಲಂಘಿ
ನಡೆಯುವರೋ ಅವರು ಶಿವಾಜ್ಞಾಭಂಗಕಾರಿಗಳಾಗುವರೆಂದೂ, ಯಾ
ಶಿವನಿಂದ ಶಾಸನಗೊಳಿಸಲ್ಪಟ್ಟ ಜಾತಿಗಳ ಕಟ್ಟನ್ನು ಮೀರಿ ವರ್ತಿ
ವರೋ ಅವರು ಸರ್ವಕರ್ಮಬಹಿಷ್ಕೃತರಾಗಿ ಚಂಡಾಲರಾಗುವರೆಂದು
ವ್ಯಾಸಮಹರ್ಷಿಗಳು ಉಲ್ಲೇಖಿಸಿದ್ದಾರೆ. ಈ ರೀತಿಯಾಗಿ ವೀರಶೈ
ಮತದಲ್ಲಿ ವರ್ಣಾಶ್ರಮಧರ್ಮಗಳ ಸ್ವರೂಪವೂ ಜಾತಿಗಳ ಸ್ವರೂಪವೂ
ಘಂಟಾಘೋಷವಾಗಿ ಉಕ್ತವಾಗಿರಲು ಇದನ್ನು ದೂರೀಕರಿಸುವುದು
ಮಹಾಪಾಪವಲ್ಲವೇ ?

ಈತನು ತನ್ನ ಪುಸ್ತಕದಲ್ಲಿ ಯಾವ ಶಂಕರಸಂಹಿತಾವಚನ
ಳನ್ನುದಾಹರಿಸಿರುವನೋ ಅವುಗಳ ಸಮೀಪದಲ್ಲಿಯೇ ವರ್ಣಾಶ್ರಮಧರ್ಮ
ಪ್ರತಿಪಾದಕಶ್ಲೋಕಗಳಿದ್ದರೂ ಅವುಗಳನ್ನು ಕಣ್ದೆರೆದು ನೋಡದೆ ಅ
ತನ್ನ ವಕ್ರಮಾರ್ಗಕ್ಕೆ ಸರಿಬೀಳುವುದಿಲ್ಲವೆಂದು ಕೈಬಿಟ್ಟಿರುವದು ಮಹಾ
ದ್ರೋಹವಲ್ಲವೇ ?

" ಶೈವಾದಿಮತಾಂತರದವರಿಗೂ ಜ್ಞಾನಶಿಖಾಜ್ಞಾನಯುಜ್ಞೋಪವೀತಗಳೆಂಬ
ಬ್ರಾಹ್ಮಣ್ಯವನ್ನು ಸ್ವೀಕಾರಮಾಡುವದು ಸಮ್ಮತವಾಗಿದೆ "

ಎಂದು ಈತನು ಬರೆದಿರುತ್ತಾನೆ. ಇದರಿಂದ ಈತನು ಪರಮತದ ಭಾಷ್ಯಾದಿಗಳ ಗಂಧವನ್ನೂ ಸಹ ಆಘ್ರಾಣಿಸಿಲ್ಲವೆಂದು ಕಂಡುಬರುತ್ತದೆ. ಏಕೆಂದರೆ—ಶಂಕರಾಚಾರ್ಯರು ಅಪಶೂದ್ರಾಧಿಕರಣ ಭಾಷ್ಯದಲ್ಲಿ—

**ಯೇಷಾಂ ಪುನಃ ಪೂರ್ವಕೃತಸಂಸ್ಕಾರವಶಾತ್ ವಿದುರ ಧರ್ಮವ್ಯಾಧಪ್ರಭೃತೀನಾಂ ಜ್ಞಾನೋತ್ಪತ್ತಿಸ್ತೇಷಾಂ ನಶಕ್ಯತೇ ಫಲಪ್ರಾಪ್ತಿಃ ಪ್ರತಿಷೇದ್ಧುಂ ಜ್ಞಾನಸ್ಯೈಕಾಂತಿಕಫಲತ್ವಾತ್ ' ಶ್ರಾವಯೇಚ್ಚತುರೋ ವರ್ಣಾನ್ ' ಇತಿಚೇತಿಹಾಸಪುರಾಣಾಧಿಗಮೇ ಚಾತುರ್ವರ್ಣ್ಯಸ್ಯಾಧಿಕಾರಸ್ಮರಣಾತ್ ವೇದಪೂರ್ವಕಸ್ತು ನಾಧಿಕಾರಃ ಶೂದ್ರಾಣಾಮಿತಿಸ್ಥಿತಂ ||**

ಎಂದು ಬರೆದಿರುತ್ತಾರೆ. ವಿದುರವ್ಯಾಧಾದಿಗಳು ಸಿದ್ಧರಾಗಿರುವದರಿಂದ ಅವರಿಗೆ ಅಧಿಕಾರದ ವಿಚಾರವೇ ಇಲ್ಲ. ಆದರೆ ಸಾಧಕರಿಗೆ ಮಾತ್ರ ಅಧಿಕಾರದ ವಿಚಾರವಿರುವುದೆಂದು ಶಂಕರಭಾಷ್ಯದ ಆನಂದಗಿರಿ ಟೀಕಾಕಾರರು ಹೇಳಿರುವರು. ಸಿದ್ಧರಾದ ವಿದುರವ್ಯಾಧಧರ್ಮಾದಿಗಳಿಗೆ ಜ್ಞಾನವಿರುವದರಿಂದ ಅವರು ಮುಕ್ತರೇ ಆಗಿರುವರೆಂದು ಹೇಳಿದ ಶಂಕರಾಚಾರ್ಯರು ಆ ವಿದುರಾದಿಗಳಲ್ಲಿ ಬ್ರಾಹ್ಮಣ್ಯವನ್ನು ಒಪ್ಪಿಲ್ಲ. ಶಂಕರಾಚಾರ್ಯರೇ ಒಪ್ಪದ ಮೇಲೆ ಅವರ ಮತದವರಾರು ಒಪ್ಪುವರು ? ಸ್ವಮತ ಮತ್ತು ಅನ್ಯಮತಗಳ ನಿಜತತ್ತ್ವವನ್ನು ತಿಳಿಯದೆ ಮನಸ್ಸಿಗೆ ಬಂದಂತೆ ಬರೆದು ಜನರನ್ನು ವಂಚಿಸುವದರಿಂದ ಈತನಿಗೆ ಬರುವ ಪ್ರಯೋಜನವಾವುದೋ ತಿಳಿಯದಾಗಿದೆ. ಬಸವಪಂಥಿಗಳ ಉದ್ದೇಶದಂತೆ ವೀರಶೈವರಲ್ಲಿರುವ ಚಾತುರ್ವರ್ಣ್ಯವನ್ನು ಕೆಡಿಸಿ ಸಂಕರಗೊಳಿಸಿ ಏಕಜಾತಿಯನ್ನು ಮಾಡಬೇಕೆಂದಿರಬಹುದೇನು ? ಈತನಂಥವರು ಕೋಟಿ ಕೋಟಿ ಜನರು ಕೂಡಿ ಕೋಟಿ ಕೋಟಿ ಜನ್ಮಗಳನ್ನೆತ್ತಿ ಪ್ರಯತ್ನಪಟ್ಟರೂ ಶಿವದ್ರೋಹಕಾರಕವಾದ ಈ ಪಾಪರೂಪ ಕಾರ್ಯವು ಎಂದೂ ಸಿದ್ಧಿಸದು. ಈಶ್ವರಸಂಕಲ್ಪಕ್ಕೆ ವಿರುದ್ಧವಾಗಿ ಸಕಲಜಾತಿಯವರನ್ನು ಸಂಕರಗೊಳಿಸಲು ಪ್ರಯ

ತ್ನಿಸಿದ ಪ್ರಬಲ ಮಂತ್ರಿಯಾದ ಬಸವನಿಂದಲೇ ಈ ಕಾರ್ಯವ್ಯ
ವೇರಲಿಲ್ಲವೆಂದಮೇಲೆ ಈ ಮುಂಡಿಯ ಪಾಡೇನು ? ಇರಲಿ ;

"ಶ್ರೀ ಶಂಕರಾಚಾರ್ಯರು ಶಿಖಾಸೂತ್ರಗಳಿಲ್ಲದವರಾದರೂ ಅವರು ಬ್ರಾ
ಣರೂ ಜಗದ್ಗುರುಗಳೂ ಆಗಿರುವದರಿಂದ ಅವರಲ್ಲಿ ಜ್ಞಾನಶಿಖಾಜ್ಞಾನ ಯಜ್ಞ
ಪವೀತಗಳಿಂದ ಬ್ರಾಹ್ಮಣ್ಯವನ್ನು ಸ್ವೀಕರಿಸುವರು.''

ಎಂದು ಈತನು ಬರೆದಿರುತ್ತಾನೆ. ಈ ವಿಷಯವನ್ನು ವಿಮರ್ಶಿಸೋಣ;

ಶ್ರೀ ಶಂಕರಾಚಾರ್ಯರು ಜನ್ಮತಃ ಬ್ರಾಹ್ಮಣರಿದ್ದು ಉ
ನಯನಾನಂತರ ಪರಮವೈರಾಗ್ಯವನ್ನು ಹೊಂದಿ ಸನ್ಯಾಸಾಶ್ರಮವ
ಹೊಂದುವಾಗ ಧರ್ಮಶಾಸ್ತ್ರಾನುಸಾರವಾಗಿ ಶಿಖಾಸಹಿತ ವಪನವಾ
ಕೊಂಡು ಬ್ರಹ್ಮಸೂತ್ರವನ್ನು ತ್ಯಜಿಸಿ ಸನ್ಯಾಸಿಗಳಾದರು. ಈ ವಿ
ಯವು ಅವರ ಚರಿತ್ರಾದಿಗಳಲ್ಲಿ ಸುಪ್ರಸಿದ್ಧವಾಗಿದೆ. ಸನ್ಯಾಸಾಶ್ರ
ಗಳಾದ ಬ್ರಾಹ್ಮಣರಲ್ಲ ಧರ್ಮಶಾಸ್ತ್ರಾನುಸಾರವಾಗಿ ಜ್ಞಾನಶಿ
ಜ್ಞಾನಯಜ್ಞೋಪವೀತಗಳಿಂದ ಬ್ರಾಹ್ಮಣ್ಯವನ್ನು ಎಲ್ಲರೂ ಒ
ಕೊಳ್ಳುತ್ತಾರೆ. ಆದರೆ ಸನ್ಯಾಸಿಗಳಾಗದ ಬ್ರಾಹ್ಮಣರಲ್ಲಿ ಜ್ಞಾನಶಿ
ಜ್ಞಾನಯಜ್ಞೋಪವೀತಗಳನ್ನು ಯಾರಾದರೂ ಒಪ್ಪುವರೋ? ಜ್ಞಾ
ಶಿಖಾಜ್ಞಾನಯಜ್ಞೋಪವೀತಗಳುಳ್ಳ ಬ್ರಾಹ್ಮಣಸನ್ಯಾಸಿಗಳಿಗೆ ವೈದಿ
ಕರ್ಮಾಧಿಕಾರವಿಲ್ಲ ; ಕಿಂತು ಕೆಲವು ನಿಯಮಗಳುಂಟು. ವೈದಿಕಕ
ಗಳಲ್ಲಿ ಅಧಿಕಾರವುಳ್ಳ ಇತರಾಶ್ರಮಿಗಳಿಗೆ ಕೇಶಮಯ ತಂತುಮ
ಶಿಖಾಸೂತ್ರಗಳು ಇದ್ದೇತೀರಬೇಕು. ಇದೇ ಧರ್ಮಶಾಸ್ತ್ರದ ಶಾಸನ
ಆದುದರಿಂದ ಶಂಕರಾಚಾರ್ಯರ ವಿಷಯವನ್ನು ಈ ಸಂದರ್ಭದಲ್ಲಿ
ಕೊಂಡಿರುವದು ಧರ್ಮಶಾಸ್ತ್ರಜ್ಞಾನಶೂನ್ಯತೆಯ ಲಕ್ಷಣವಾಗಿದೆ. ಸನ್ಯಾ
ಗಳಿಗೆ ಹೇಳಿರುವ ಧರ್ಮಗಳನ್ನು ಇತರಾಶ್ರಮಗಳಿಗೆ ಹೇಳುವ ಈ ಶ
ಪಂಡಿತನ ಪಾಂಡಿತ್ಯವನ್ನು ಕಂಡು ನಗಬೇಕೋ ಅಳಬೇಕೋ ಸ
ಗಂತೂ ತಿಳಿಯದಾಗಿದೆ. ಇರಲಿ ;

ಈತನು ತನ್ನ ಪುಸ್ತಕದ ೧೫೫ನೆಯ ಪುಟದಲ್ಲಿ—

"ವೀರಶೈವಾಶ್ರಮಿಗಳಲ್ಲಿ ಶಿವಾಗಮಸಿದ್ಧಾಂತವನ್ನನುಸರಿಸಿ ಜ್ಞಾನಶಿಖಾ ಜ್ಞಾನ (ಲಿಂಗ) ಯಜ್ಞೋಪವೀತಗಳಿಂದ ಬ್ರಾಹ್ಮಣ್ಯವನ್ನು ಹೇಳುವದು ಅತ್ಯಂತ ಯೋಗ್ಯವಾಗಿದೆ"

ಎಂದು ಬರೆದಿರುವನು. ಸಿದ್ಧಾಂತಶಿಖಾಮಣಿ ಕ್ರಿಯಾಸಾರ ಮೊದಲಾದ ಗ್ರಂಥಗಳೊಳಗೆ, ವೀರಶೈವರಲ್ಲಿ ಬ್ರಹ್ಮಚರ್ಯಾದಿ ಚತುರ್ವಿಧ ಶಿವಾ ಶ್ರಮಗಳುಂಟೆಂದು ಹೇಳಲ್ಪಟ್ಟಿದ್ದರೂ, ಇದನ್ನು ಕಣ್ದೆರೆದು ನೋಡದೆ ಸಂಪ್ರದಾಯವನ್ನು ಸಹ ತಿಳಿಯದೆ ವೀರಶೈವಾಶ್ರಮಿಗಳೆಂದು ಪ್ರಯೋಗಿ ಸಿರುವುದನ್ನು ನೋಡಿದರೆ ನಮ್ಮ ಭರತಖಂಡದಲ್ಲಿ ದೇವರು ಎಂಥ ಎಂಥ ಬುದ್ಧಿಶಾಲಿಗಳನ್ನು ಹುಟ್ಟಿಸಿರುವನೆಂದು ಸೋಜಿಗಪಡಬೇಕಾಗಿದೆ. ಅಸ್ತು! ಮುಂಡಿಯೇ! ಶಿವಾಗಮಸಿದ್ಧಾಂತವು ವೈದಿಕಸಿದ್ಧಾಂತಕ್ಕೆ ಬೇರೆಯಾ ಗಿಲ್ಲ. ವೇದಸಿದ್ಧಾಂತದಲ್ಲಿ ಕೇವಲ ಸನ್ಯಾಸಿಗಳಿಗಲ್ಲದೆ ಬೇರೆಯವರಿಗೆ ಜ್ಞಾನಶಿಖಾಜ್ಞಾನಯಜ್ಞೋಪವೀತಗಳು ವಿಹಿತಗಳಾಗಿಲ್ಲ. ಅತಏವ ಆಗಮಸಿದ್ಧಾಂತದಲ್ಲಿಯೂ ಜ್ಞಾನಶಿಖಾಜ್ಞಾನಯಜ್ಞೋಪವೀತಗಳು ಶಿವಯತಿಗಳಿಗಲ್ಲದೆ ಉಳಿದ ಆಶ್ರಮದವರಿಗೆ ಹೇಳಲ್ಪಟ್ಟಿಲ್ಲವೆಂದು ಚೆನ್ನಾಗಿ ತಿಳಿದುಕೊಳ್ಳಬೇಕು.

ಈತನು ತನ್ನ ಪುಸ್ತಕದಲ್ಲಿ ೧೬ ನೆಯ ಪುಟದಿಂದ ೨೫ ನೆಯ ಪುಟದವರೆಗೂ ವೀರಶೈವರಿಗೆ ಶಿಖಾಸೂತ್ರಗಳಿರಕೂಡದೆಂಬ ಬಗ್ಗೆ, ಯಾವನೋ ಒಬ್ಬ ಮಹಾಶೂದ್ರನು ಸ್ವಕಪೋಲಕಲ್ಪನೆಯಿಂದ ರಚಿ ಸಿದ ಶ್ಲೋಕಗಳನ್ನು ಶಿವಾಗಮವಾಕ್ಯಗಳೆಂದು ಬರೆದು ತನ್ನ ವಂಚಕ ತನವನ್ನು ಜಗತ್ತಿಗೆಲ್ಲಾ ತೋರಿಸಿರುವನು. ಸದ್ಯಃ ಆ ಶೂದ್ರಾಗಮ ವಾಕ್ಯಗಳ ವಿಷಯವನ್ನು ಸ್ವಲ್ಪಮಟ್ಟಿಗೆ ವಿಮರ್ಶಿಸೋಣ!

ಅರ್ಧಮುಂಡೀ ಭವೇದ್ಯಸ್ತು ಪೂರ್ವಪುಣ್ಯಂ ವಿನಶ್ಯತಿ |
ಇಹ ನಾಸ್ತಿ ಪರಂ ನಾಸ್ತಿ ನಾಸ್ತಿನಾಸ್ತಿ ವರಾನನೇ ||

ಇದೊಂದು ಆ ಶೂದ್ರಾಗಮದೊಳಗಿನ ಶ್ಲೋಕವು. ಯಾವನು ಅರ್ಧತಲೆಯನ್ನು ಬೋಳಿಸಿಕೊಳ್ಳುವನೋ ಅವನ ಪೂರ್ವಪುಣ್ಯವು ನಾಶವಾಗುವುದೆಂದು ಈ ಶ್ಲೋಕಾಭಿಪ್ರಾಯವಿರುವುದು. ಯಾರು ತಲೆಯ ಅರ್ಧಭಾಗವನ್ನು ಬಿಟ್ಟು ಅರ್ಧಭಾಗವನ್ನು ಬೋಳಿಸಿಕೊಳ್ಳುವರೋ ಅವರ ಪೂರ್ವಪುಣ್ಯವು ನಾಶವಾಗಬಹುದು. ಇದರಿಂದ ವೀರಶೈವದ್ವಿಜರಿಗೆ ಬಂದ ಚ್ಯುತಿಯೇನು? ವೀರಶೈವದ್ವಿಜರಂತೂ ತಲೆಯಲ್ಲಿ ಅರ್ಧಭಾಗವನ್ನು ಬಿಟ್ಟು ಅರ್ಧಭಾಗವನ್ನು ಬೋಳಿಸಿಕೊಳ್ಳುವುದೇ ಇಲ್ಲ. ಅವರು ತಲೆಯ ಮಧ್ಯಭಾಗದಲ್ಲಿ ಶಿಖೆಯಿರುವ ಸ್ಥಾನವನ್ನು ಬಿಟ್ಟು ಸುತ್ತಲು ಬೋಳಿಸಿಕೊಳ್ಳುತ್ತಾರೆ. ಶಿಖೆಯುಳ್ಳವರು ಅರ್ಧಮುಂಡಿಗಳಲ್ಲ; ಶಿಖೆಯು ಮಧ್ಯಸ್ಥಾನದಲ್ಲಿ ವಿಹಿತವಾಗಿರುವದರಿಂದ ಈ ಶೂದ್ರಾಗಮವಾಕ್ಯದಲ್ಲಿದ್ದಂತೆ ಅರ್ಥಮಾಡಿದರೂ ಇದರಿಂದ ವೀರಶೈವದ್ವಿಜರಿಗೆ ಯಾವ ಬಾಧೆಯೂ ತಟ್ಟುವುದಿಲ್ಲೆಂಬ ವಿಷಯವು ಈಗ ಈ ಮುಂಡಿಗಾದರೂ ಹೊಳೆದಿರಬಹುದು. ಈ ಶ್ಲೋಕದಲ್ಲುಕ್ತವಾಗಿರುವ ಅರ್ಧಮುಂಡನ ವಿಷಯವು ಅಫಘಾನಸ್ಥಾನದ ತುರುಕರಲ್ಲಿ ಮಾತ್ರ ಕಂಡುಬರುವುದರಿಂದ ಈ ಶ್ಲೋಕವನ್ನು ರಚಿಸಿದ ಶೂದ್ರನು ಅವರನ್ನುದ್ದೇಶಿಸಿ ಬರೆದಿರುವಂತೆ ತೋರುತ್ತದೆ. ಇರಲಿ; ಇನ್ನು ಈ ಶೂದ್ರಾಗಮಶ್ಲೋಕದ ಉತ್ತರಾರ್ಧದಲ್ಲಿ 'ಇಹನಾಸ್ತಿ' ಎಂದಿದೆ. ಹೀಗಂದರೇನು? ಯಾವನು ಅರ್ಧಮುಂಡಿಯೋ ಅವನು ಇಲ್ಲಿ ಇಲ್ಲವೆಂದರ್ಥವೋ? ಈ ಲೋಕದಲ್ಲಿ ಇಲ್ಲವೆಂದರ್ಥವೋ? ಅಥವಾ ಅವನಿಗೆ ಈ ಲೋಕದಲ್ಲಿರುವದಿಲ್ಲವೆಂದರ್ಥವೋ? ಏನರ್ಥವೋ ಎನ್ನುವದು ಈ ಶ್ಲೋಕವನ್ನು ರಚಿಸಿದ ಆ ಮಹಾಶೂದ್ರನಿಗೇ ಗೊತ್ತು. ಮುಂದಿನ 'ನಾಸ್ತಿ ನಾಸ್ತಿ' ಎಂಬ ಎರಡು ಪದಗಳಿಗೆ ಏನರ್ಥವೋ? ಇದಂತೂ ಯಾರಿಗೂ ತಿಳಿಯದಾಗಿದೆ. ಆದರೆ ಈ ಶ್ಲೋಕವನ್ನು ರಚಿಸಿದ ಶೂದ್ರನು ಈ ಶ್ಲೋಕಾಭಿಪ್ರಾಯಕ್ಕನುಸಾರವಾಗಿ ಶ್ಲೋಕಾಂತ್ಯದಲ್ಲಿ "ಖರಾನನೇ" ಎಂದು

ಇಟ್ಟಿರಬಹುದು. ಆದರೆ ಈತನು ಆದನ್ನು ಶಿವಾಗಮವಾಕ್ಯವನ್ನು ಮಾಡುವುದಕ್ಕಾಗಿ "ವರಾನನೇ" ಎಂದು ತಿದ್ದಿರುವನೋ ಏನೋ ಎಂದು ಸಂಶಯಬರುತ್ತದೆ. ಸಂಸ್ಕೃತಜ್ಞಾನವಿಲ್ಲದೆ ಹೀಗೆ ಯದ್ವಾ ತದ್ವಾ ಶಿವಾಗಮಗಳ ಹೆಸರಿನಿಂದ ಕಲ್ಪಿಸಲ್ಪಟ್ಟಿರುವ ಶ್ಲೋಕಗಳನ್ನು ಈತನು ಪ್ರಮಾಣವನ್ನಾಗಿ ತೆಗೆದುಕೊಂಡಿರುವುದನ್ನು ನೋಡಿದರೆ ಸರ್ವರೂ ಛೀಮಾಡುವಂತಿದೆ. ಅಸ್ತು !

ವೀರಶೈವಮಹಾದೀಕ್ಷಾಂ ಪ್ರಪನ್ನಃ ಶ್ರುತಿಕೋವಿದಃ |
ಸೋ ಧಾರಯೇತ್ಕುಟುಂಬೀ ಸ್ ಶಿಖಾಂ ಪ್ರಾಕೃತವಿಪ್ರವತ್ ||

ಎಂಬೀ ಶೂದ್ರಕಲ್ಪಿತಾಮಂಗಲಶ್ಲೋಕದ ವಿಷಯವನ್ನು ೨೩ ನೆಯ ಪುಟದಲ್ಲಿ ಬರೆದಿರುತ್ತೇವೆ. ಅಲ್ಲಿಯೇ ನೋಡಿಕೊಳ್ಳಬೇಕು.

ಇನ್ನು ಈತನು ಪ್ರಮಾಣವನ್ನಾಗಿ ತೆಗೆದುಕೊಂಡ ಈ ಮುಂದಿನ ಶ್ಲೋಕದ ವಿಷಯವನ್ನು ವಿಮರ್ಶಿಸೋಣ !

ಯೇ ಶರ್ವದೀಕ್ಷಾರಹಿತಾ ಯೇತ್ವಷ್ಟಾವರಣವರ್ಜಿತಾಃ |
ಪಂಚಾಚಾರವಿಹೀನಾಶ್ಚ ಶಿಖಾ ತೇಷಾಂ ಮಯೋಚ್ಯತೆ ||

ಇದೊಂದು ಈ ಮುಂಡಿಗೆ ಮಹಾಪ್ರಮಾಣವಾದ ಶ್ಲೋಕವು. ಈ ಶ್ಲೋಕವನ್ನು ಅರ್ಧಮರ್ಧ ಕಲಿತ ಯಾವನೋ ಒಬ್ಬ ಶೂದ್ರಜಾತಿಯ ಒಕ್ಕಲಿಗನು ಬರೆದಿರಬಹುದೆಂದು ತೋರುತ್ತದೆ. ಏಕೆಂದರೆ—ಅನುಷ್ಟುಪ್ ಶ್ಲೋಕದ ನಾಲ್ಕುಪಾದಗಳಲ್ಲಿಯೂ ಎಂಟೆಂಟು ಅಕ್ಷರಗಳಿರಬೇಕೆಂಬುದು ಕೋಶವನ್ನೋದುವ ಬಾಲಕನಿಗೂ ಸಹ ಗೊತ್ತಿದೆ. ಈ ಶ್ಲೋಕದ ೨ನೆಯ ಚರಣದಲ್ಲಿ "ಯೇತ್ವಷ್ಟಾವರಣವರ್ಜಿತಾಃ" ಎಂದು ೯ ಅಕ್ಷರ ಗಳಿವೆ. ಮೂರ್ಖರಚಿತವಾದ ಇಂಥ ಅಮಂಗಲಶ್ಲೋಕವನ್ನು ಪ್ರಮಾಣ ವನ್ನಾಗಿ ತೆಗೆದುಕೊಂಡು ವಾಚಕರನ್ನು ವಂಚಿಸಲುದ್ಯುಕ್ತನಾಗಿರುವ ಈ ಮುಂಡಿಯ ಪಾಂಡಿತ್ಯದ ಪ್ರಭಾವವು ಎಷ್ಟರಮಟ್ಟಿಗಿರಬಹುದೆಂಬು ದನ್ನು ಕುಶಲಮತಿಗಳಾದ ವಾಚಕರೇ ಊಹಿಸಬಹುದಾಗಿದೆ.

ಈಗ್ಗೆ ೭೦-೮೦ ವರ್ಷಗಳ ಪೂರ್ವದಲ್ಲಿ ಕೆಲಜನ ಶೂದ್ರಮುಂಡಿಗಳು ತಮ್ಮ ಇಚ್ಛಾನುಸಾರವಾಗಿ ಕೆಲವು ಅಬದ್ಧಶ್ಲೋಕಗಳನ್ನು ರಚಿಸಿ ಅವು ಆಗಮಾಂತರ್ಗತಗಳೆಂದು ಬರೆದು ಮಹಾಪಾಪಾತ್ಮರಾಗಿ ಹೋಗಿದ್ದಾರೆ. ಈ ಮುಂಡಿಯು ಮುಂಡನವನ್ನು ಸಾಧಿಸುವುದಕ್ಕಾಗಿ ತೆಗೆದುಕೊಂಡಿರುವ ಶ್ಲೋಕಗಳೆಲ್ಲಾ ಆ ವಿಕಟಪಂಡಿತರಿಂದಲೇ ರಚಿಸಲ್ಪಟ್ಟವುಗಳಾಗಿವೆ. ಈ ತರಹದ ಅಬದ್ಧಶ್ಲೋಕಗಳೇ ಈತನಿಗೆ ಪ್ರಮಾಣಗಳಾಗಿರುವುದನ್ನು ನೋಡಿ ಆಶ್ಚರ್ಯಪಡಬೇಕಾಗಿದೆ. ಇರಲಿ; ಈ ಶ್ಲೋಕದ ಅರ್ಥವನ್ನು ಸ್ವಲ್ಪ ವಿಚಾರಿಸುವಾ! ಶರ್ವದೀಕ್ಷಾರಹಿತಾ ಎಂಬಲ್ಲಿ—ಶರ್ವದೀಕ್ಷೆಯೆಂದರೆ ಶಿವದೀಕ್ಷೆಯಂದಲ್ಲವೇ ಅರ್ಥವು? ಈ ಶಿವದೀಕ್ಷೆಯಲ್ಲಿ ಅಷ್ಟಾವರಣಗಳು ಅಡಕಗಳಾಗಿಲ್ಲವೆ? ಆಗಿದ್ದರೆ ಮತ್ತೇಕೆ "ಅಷ್ಟಾವರಣವರ್ಜಿತಾಃ" ಎಂದು ಹೇಳಬೇಕು? ಪಂಚಾಚಾರವಿಹೀನಾಃ—ಯಾರು ಪಂಚಾಚಾರಗಳಿಂದ ವಿಹೀನರೋ, ತೇಷಾಂ—ಅವರಿಗೆ, ಶಿಖಾ—ಶಿಖೆಯು, ಮಯಾ—ನನ್ನಿಂದ, ಉಚ್ಯತೆ—ಹೇಳಲ್ಪಡುತ್ತದೆ. ಹೀಗೆ ಈ ಶ್ಲೋಕದ ಅರ್ಥವಾಗುತ್ತದೆ. ಇಲ್ಲಿ ಪಂಚಾಚಾರಗಳ ವಿಷಯವನ್ನು ಸ್ವಲ್ಪ ವಿವರಿಸೋಣ! ಪಂಚಾಚಾರಗಳು ನಿರ್ವಿಶೇಷ-ಸವಿಶೇಷ ಎಂದು ಎರಡುಪ್ರಕಾರವಾಗಿವೆ. ಈ ವಿಷಯವು ಕ್ರಿಯಾಸಾರದ ೫೯ನೆಯ ಉಪದೇಶದಲ್ಲಿ ವಿಶದೀಕರಿಸಲ್ಪಟ್ಟದೆ. ಅಲ್ಲಿ ನೋಡಿಕೊಳ್ಳಬೇಕು. ಸವಿಶೇಷಪಂಚಾಚಾರಗಳುಳ್ಳವರು ವೀರಶೈವರು. ನಿರ್ವಿಶೇಷಪಂಚಾಚಾರಗಳುಳ್ಳವರು ಪ್ರಾಕೃತರು. ಈ ಉಭಯರಿಗೂ ಪಂಚಾಚಾರಗಳಿರುವುದರಿಂದ ಈ ಇಬ್ಬರಿಗೂ ಈ ಶ್ಲೋಕಾಭಿಪ್ರಾಯವು ಸಂಬಂಧಿಸುವದಿಲ್ಲ; ಆದರೆ ಪ್ರಾಕೃತಾಪ್ರಾಕೃತ ಮಾನವರಿಗೆ ಭಿನ್ನಗಳಾದ ಪಶುಗಳಿಗೆ ಮಾತ್ರ ಸಂಬಂಧಿಸುವಂತೆ ತೋರುತ್ತದೆ. ಇದನ್ನು ನೋಡಿ ಈ ಮುಂಡಿಯು ಅಳಬೇಕೋ ನಗಬೇಕೋ ತಿಳಿಯದಾಗಿದೆ. ಈ ಶ್ಲೋಕದಂತೆ ಅರ್ಥಮಾಡಲಿಕ್ಕೆ ಹೋದರೆ, ಶಿಖಾವಾದಿಗಳ ಸಿದ್ಧಾಂತವೇ ಬಲ

ಪಡುವುದೆನ್ನುವದು ಸರ್ವರಿಗೂ ವೇದ್ಯವಾಗುತ್ತದೆ. ನಾಲ್ಕೂ ಕಡೆಗೆ ದೃಷ್ಟಿಯನ್ನಿಡದೆ ಕಲ್ಪಿತಶ್ಲೋಕಗಳನ್ನುದಾಹರಿಸುವುದು ಮಂದರ ಕಾರ್ಯವಲ್ಲದೆ ಬುದ್ಧಿಮಂತರ ಕಾರ್ಯವಲ್ಲ. ಈ ವಿಷಯವನ್ನು ಈ ಮುಂಡಿಯು ಚನ್ನಾಗಿ ಮನನಮಾಡಿಕೊಂಡು ಧನ್ಯಾತ್ಮನಾಗಬೇಕೆಂದು ಒತ್ತಿ ಒತ್ತಿ ಹೇಳುತ್ತೇವೆ. ಇನ್ನು ಈತನು ಉದಾಹರಿಸಿದ ಮತ್ತೊಂದು ಪ್ರಮಾಣವನ್ನು ವಿಚಾರಿಸುವಾ !

ಶಿಖಾಸೂತ್ರವಿಹೀನಾಶ್ಚ ಪಂಚಸೂತಕವರ್ಜಿತಾಃ |
ವೀರಶೈವಾ ಭವಂತ್ಯೇವಂ ಮತ್ತುಲ್ಯಾ ನಚ ಸಂಶಯಃ ||

ಇದೊಂದು ಶವಾಗಮ ಶ್ಲೋಕವಂತೆ! ಯಾವ ಶವಾಗಮವೋ ಬರೆದಿಲ್ಲ. ಈ ಹೆಂಡಬಂಡಾಗಮದ ಶ್ಲೋಕದ ಸ್ವರೂಪವನ್ನು ಸ್ವಲ್ಪ ವಿಮರ್ಶಿಸೋಣ !

ಶಿಖಾಸೂತ್ರವಿಹೀನರೂ ಪಂಚಸೂತಕವರ್ಜಿತರೂ ಯಾರೋ ಅವರು ವೀರಶೈವರು (ಶೂದ್ರ ವೀರಶೈವರು) ಆಗಿಯೇ ಆಗುತ್ತಾರೆ. "ಏವಂ" ಹೀಗೆ ಮತ್ತುಲ್ಯರು (ನನಗೆ ಸಮಾನರು) ವೀರಶೈವರು (ನಿರಾಭಾರವೀರಶೈವರು) ಆಗುತ್ತಾರೆ, ಸಂಶಯವಿಲ್ಲವೆಂದು ಈ ಶ್ಲೋಕದ ಅರ್ಥವು. ಈ ಶ್ಲೋಕಾಭಿಪ್ರಾಯವು ವೀರಶೈವಶೂದ್ರರನ್ನೂ ಸನ್ಯಾಸಿಗಳನ್ನೂ ಆವರಿಸಿಕೊಳ್ಳುವುದಲ್ಲದೆ ವೀರಶೈವದ್ವಿಜರನ್ನು ಆವರಿಸಿಕೊಳ್ಳುವುದಿಲ್ಲ. ವೀರಶೈವದ್ವಿಜರಂತೂ ಶಿಖಾಸೂತ್ರವಿಹೀನರೂ ಪಂಚಸೂತಕವರ್ಜಿತರೂ ಅಲ್ಲವೇ ಅಲ್ಲ. ಇವರು ಲಿಂಗಧಾರಣ ಲಿಂಗ ಪೂಜಾದಿಗಳಲ್ಲಿ ಮಾತ್ರ ನಿತ್ಯವ್ರತಲೋಪಭಯದಿಂದ ಪಂಚಸೂತಕಗಳನ್ನು ಬಿಟ್ಟಿರುವರಲ್ಲದೆ, ಪಾಕಾದಿಕಾರ್ಯಗಳಲ್ಲಿ ಪಂಚಸೂತಕವುಳ್ಳವರೇ ಆಗಿರುವರು. "ಪಂಚಸೂತಕವರ್ಜಿತ" ಎಂಬ ಪದದಿಂದ ತ್ರೈವರ್ಣಿಕರ ಗ್ರಹಣವಾಗುವುದಿಲ್ಲ. ಅದುದರಿಂದ ಹಿಂದಿನ ಪದಗಳ ವಿರೋಧ ಪರಿಹಾರಕ್ಕಾಗಿ ವೀರಶೈವವೆಂಬ ಸಾಮಾನ್ಯಪದಕ್ಕೆ ವಿಶೇಷಾರ್ಥವನ್ನು

ಹೇಳಲೇಬೇಕು. ಶೂದ್ರವರ್ಣದ ವೀರಶೈವರಿಗೂ ಸನ್ಯಾಸಿಗಳಿಗೂ ಶಿಖಾಸೂತ್ರಗಳೂ ಪಂಚಸೂತಕಗಳೂ ಇಲ್ಲದಿರುವದರಿಂದ ಅವರೇ ಶಿಖಾ ಸೂತ್ರವಿಹೀನರೂ ಪಂಚಸೂತಕವರ್ಜಿತರೂ ಆದ ವೀರಶೈವರಾಗುವ ರೆನ್ನುವುದೇ ಈ ಶ್ಲೋಕಾಭಿಪ್ರಾಯವು. ವಾಚಕರೇ! ಬಹುಕಷ್ಟಪಟ್ಟು ಶಿವಾಗಮವಾಕ್ಯವೆಂದು ಬರೆದಿದ್ದ ಶ್ಲೋಕವು ಈ ಮುಂಡಿಯ ಮಾರ್ಗ ವನ್ನು ಬಿಟ್ಟು ಎತ್ತಲೋ ಓಡಿಹೋಯಿತಲ್ಲವೇ?

ಇನ್ನು ಈತನು ತೆಗೆದುಕೊಂಡ ಬೇರೊಂದು ಶ್ಲೋಕವನ್ನು ವಿಮ ರ್ಶಿಸೋಣ!

ಯೇ ಸ್ಥಾವರಾರ್ಚನಾಸಕ್ತಾ ಯೇ ವಾದಾಚಾರಸಂವೃತಾಃ |
ಯೇತ್ವಾಗಮವಿರುದ್ಧಾಶ್ಚ ಶಿಖಾ ತೇಷಾಂ ಮಯೋಚ್ಯತೆ ||

ಈ ಅಮಂಗಲಶ್ಲೋಕವನ್ನು ಯಾವ ಪುಣ್ಯಾತ್ಮನು ರಚಿಸಿರು ವನೋ ತಿಳಿಯದಾಗಿದೆ. ಇದು ಯಾವ ಗರ್ದಭಾಗಮದಲ್ಲಿದೆಯೋ ಹೇಳಿಲ್ಲ. ಹೇಳಿದ್ದರೆ ಚನ್ನಾಗಿತ್ತು. ಇರಲಿ; ಯಾರು ಸ್ಥಾವರಾರ್ಚನಾ ಸಕ್ತರೋ, ಯಾರು ವಾದಾಚಾರಾವೃತರೋ, ಯಾರು ಆಗಮ ವಿರೋಧಿಗಳೋ ಅವರಿಗೆ ಶಿಖೆಯು ಹೇಳಲ್ಪಡುತ್ತದೆಂದು ಇದರ ಅರ್ಥ ವಾಗುತ್ತದೆ. ವೀರಶೈವರಲ್ಲಿ ಕೆಲವರು ಸ್ಥಾವರದೇವಾರ್ಚನೆಯಲ್ಲಿ ಆಸಕ್ತರಾಗಿದ್ದಾರೆ; ಅಲ್ಲದೆ ಪಾಂಚರಾತ್ರಾದ್ಯಾಗಮಗಳಿಗೆ ವಿರುದ್ಧರೂ ಆಗಿದ್ದಾರೆ. ಇದರಿಂದ ವೀರಶೈವರಿಗೆ ಶಿಖೆಯು ನಿಷೇಧಿತವಾಗಲಿಲ್ಲ. ಸಾಮಾನ್ಯವಾಗಿ ಭಾರತೀಯರಲ್ಲಿ ಆಗಮವಿರುದ್ಧರು ಯಾರೂ ಇಲ್ಲ. ಆಗಮಶಬ್ದವು ವೇದಕ್ಕೂ ಬೋಧಕವಾಗಿದೆ. "ವಿಶ್ವಸ್ಯ ಕರ್ತಾ ಭುವ ನಸ್ಯ ಗೋಪ್ತಾ ಇತ್ಯಾದಯ ಆಗಮಾ ಅಪ್ಯನುಸಂಧೇಯಾಃ" ಎಂದು ಶ್ರುತಿವಾಕ್ಯಕ್ಕೂ ಸಹ ಆಗಮವೆಂಬ ವ್ಯವಹಾರವು ಶಾಸ್ತ್ರಕಾ ರಿಂದ ಮಾಡಲ್ಪಟ್ಟಿರುತ್ತದೆ. ಇನ್ನು ಆಗಮಪದದಿಂದ ಶಿವಾಗಮವನ್ನೇ ತೆಗೆದುಕೊಳ್ಳುವಲ್ಲಿ ವಿನಿಗಮನೆಯಿಲ್ಲ. ಪಾಂಚರಾತ್ರಾದ್ಯಾಗಮಗಳನ್ನು

ತೆಗೆದುಕೊಂಡರೆ ಆ ಆಗಮಗಳಿಗೆ ವಿರುದ್ಧರು ವೀರಶೈವರೂ ಹಾಗೂ ಸ್ಮಾರ್ತರೂ ಆಗುತ್ತಾರೆ. ಇನ್ನು ಆಗಮಪದದಿಂದ ಶಿವಾಗಮಗಳ ಗ್ರಹಣ ಮಾಡುವುದಾದರೆ, ಅವುಗಳಿಗೆ ವಿರುದ್ಧರು ಮಾಧ್ವರೂ ರಾಮಾನುಜೀಯಾದಿಗಳೂ ಆಗುತ್ತಾರೆ. ಇನ್ನು ಆಗಮಪದದಿಂದ ವೇದಗಳನ್ನು ಗ್ರಹಣಮಾಡಿದರೆ ಅವುಗಳಿಗೆ ಯಾವ ಭಾರತೀಯರೂ (ಹಿಂದುಗಳೂ) ವಿರೋಧಿಗಳಾಗುವುದಿಲ್ಲ. ಅಂದ ಮೇಲೆ ಆಗಮವಿರುದ್ಧರು ಯಾರೆಂದು ಹೇಳುವುದು ? ಹಿಂದುಗಳನ್ನು ಬಿಟ್ಟರೆ ತುರುಕರು ಅಥವಾ ಕ್ರೈಸ್ತರು ಆಗಮವಿರುದ್ಧರೆಂದು ಹೇಳಬೇಕಾಗುವುದು. ಇದರಿಂದ ಇನ್ನು ಮೇಲೆ ಈ ಮುಂಡಿಯಂಥವರು ತುರುಕರಿಗೂ ಕ್ರೈಸ್ತರಿಗೂ ನೀವು ಆಗಮವಿರೋಧಿಗಳಾಗಿರುವಿರಿ; ನಿಮಗೆ ಶಿವನು ಶಿಖಾಧಾರಣವನ್ನು ವಿಧಿಸಿದ್ದಾನೆ; ಆದ್ದರಿಂದ ನೀವು ಶಿಖಾಧಾರಣವನ್ನುಮಾಡಿಕೊಳ್ಳಿರೆಂದು ಬೋಧಮಾಡಬೇಕಾಗಿಬರುವುದು. ಆಹಾ ! ಈ ಮುಂಡಿಯು ಪ್ರಮಾಣವನ್ನಾಗಿ ತೆಗೆದುಕೊಂಡಿರುವ ಶ್ಲೋಕಗಳ ಮಹಿಮೆಯನ್ನು ಆದಿಶೇಷನೂ ಸಹ ವರ್ಣಿಸಲು ಅಸಾಧ್ಯವು. ಇಂಥ ಅಮಂಗಲಶ್ಲೋಕಗಳನ್ನು ಬರೆದು ಕೊಂಡು ಕಂಬಳಿ ಹೊದ್ದವರ ಮುಂದೆ ಜಂಭಕೊಚ್ಚಿಕೊಳ್ಳುತ್ತಿರುವುದನ್ನು ನೋಡಿ ಕುಶಲರು ನಗುತ್ತಿರುವರು. ಹೀಗೆ ಮನಬಂದಂತೆ ಬರೆಯುತ್ತಿರುವ ಮುಂಡಿಗಳಿಗೆ ಪರಮೇಶ್ವರನು ಎಂದು ಸದ್ಬುದ್ಧಿಯನ್ನನು ಗ್ರಹಿಸುವನೋ ನೋಡಬೇಕಾಗಿದೆ.

ಇನ್ನು ಈ ಮುಂಡಿಯು ತೆಗೆದುಕೊಂಡ ಮತ್ತೊಂದು ಶ್ಲೋಕಾಭಿಪ್ರಾಯವನ್ನು ವಿಮರ್ಶಿಸೋಣ !

> ನ ಶಿಖಾಂ ಧಾರಯೇದ್ಯೋಗೀ ನ ಶಿಖಾಂ ಧಾರಯೇದ್ವ್ರತೀ |
> ಶಿಖಾಂ ವಾ ಧಾರಯೇದ್ದೇವಿ ಗೃಹೀ ದೀಕ್ಷಾವಿವರ್ಜಿತಃ ||

ಇದೊಂದು ಆಗಮಪ್ರಮಾಣವಂತೆ ! ಯಾವ ಆಗಮದ ಶ್ಲೋಕವೋ ಎನ್ನುವುದನ್ನು ಬರೆದಿಲ್ಲ. ಬಹುಶಃ ಪಿಶಾಚಾಗಮದಲ್ಲಿದ್ದರೂ

ಇರಬಹುದು. ಇರಲಿ; ಯೋಗಿಯೂ ವ್ರತಿಯೂ ಶಿಖೆಯನ್ನು ಧರಿಸ ಬಾರದಂತೆ! ದೀಕ್ಷಾವರ್ಜಿತನಾದ ಗೃಹಿಯು (ಗೃಹಸ್ಥನು) ಶಿಖೆಯನ್ನು ಧರಿಸಬಹುದಂತೆ! ನೋಡಿದಿರಾ, ಪಿಶಾಚಾಗಮದ ಸರಣಿಯನ್ನು? ಯೋಗಿಯು ಗೃಹಸ್ಥನಾಗಲಾರನೋ? ವ್ರತಿಯು ಗೃಹಸ್ಥನಾಗಲಾರನೋ? ಯೋಗಿಯು ವ್ರತಿಯಲ್ಲವೋ? ವ್ರತಿಯು ಯೋಗಿಯಲ್ಲವೋ? ವ್ರತಿಯು ಯೋಗಿಯೂ ಆಗಿದ್ದಾನೆ; ಯೋಗಿಯು ವ್ರತಿಯೂ ಆಗಿದ್ದಾನೆ; ಈ ರೀತಿಯಾಗಿದ್ದ ಧರ್ಮಶಾಸ್ತ್ರತತ್ತ್ವವನ್ನು ತಿಳಿಯದೆ ಮನಬಂದಂತೆ ಶ್ಲೋಕವನ್ನು ಕಲ್ಪಿಸಿರುವುದು ಕೇವಲ ಮೂರ್ಖತನವು. ಈತನು "ಯೋಗಿ" ಎಂಬ ಎರಡಕ್ಷರ ಶಬ್ದಕ್ಕೆ ಲಿಂಗಾಂಗಸಾಮರಸ್ಯಜ್ಞಾನಸಂಪನ್ನನಾದ ವೀರಶೈವನೆಂದು ಅರ್ಥಮಾಡಿರುವುದನ್ನು ನೋಡಿದರೆ ನಗೆಬರುತ್ತದೆ. ಈ ಅರ್ಥವನ್ನು ಯಾವ ನಿಘಂಟಿನಿಂದ ಎಳೆದುಕೊಂಡು ಬಂದನೋ ತಿಳಿಯದಾಗಿದೆ. "ವ್ರತಿ" ಶಬ್ದಕ್ಕೆ ಯಾಕೋ ಏನೂ ಬರೆದಿಲ್ಲ. ಇದು ವೀರಶೈವರ ಪುಣ್ಯವೆಂದೇ ಭಾವಿಸಬೇಕಾಗಿದೆ. ಅಸ್ತು!

ಇನ್ನು ವೀರಕಾಮಿಕಾದಿಶಿವಾಗಮಗಳು ವೀರಶೈವರು ಕರ್ಮಾಂಗಭೂತಗಳಾದ ಶಿಖಾಸೂತ್ರಗಳನ್ನು ಧರಿಸಬಾರದೆಂದು ಶಾಸನಮಾಡುತ್ತವಂತೆ! ಈ ಶವಾಗಮವಾಕ್ಯಗಳನ್ನಷ್ಟು ವಿಚಾರಿಸುವಾ! ಇವು ಏಳೂವರೆ (ಸಾಡೆಸಾತ) ಶ್ಲೋಕಗಳಿವೆ. ಅವುಗಳಲ್ಲಿ—

ಲಿಂಗಧಾರೀ ಮಹಾಯೋಗೀ ಧ್ಯಾನಾರೂಢೋ ನಿರಂತರಂ |
ಷಟ್ಸ್ಥಲಾಚಾರಸಂಯುಕ್ತಃ ನ ಶಿಖಾಂ ಧಾರಯೇದ್ಧ್ರುವಂ ||

ಇದು ಮೊದಲನೆಯದಾಗಿದೆ. ಇದರಲ್ಲಿ ಯಾವ ವೀರಶೈವರೂ ಶಿಖೆಯನ್ನು ಧರಿಸಬಾರದೆಂದಿಲ್ಲ. ಆದರೆ ಲಿಂಗಧಾರಿಯಾದ ಮಹಾಯೋಗಿಯೂ, ನಿರಂತರ ಧ್ಯಾನಾರೂಢನೂ ಷಟ್ಸ್ಥಲಾಚಾರಸಂಯುಕ್ತನೂ ಆಗಿರುವವನು ಶಿಖೆಯನ್ನು ಧರಿಸಬಾರದೆಂದಿದೆ. ಈ ಶ್ಲೋಕವು

ವೀರಶೈವಸನ್ಯಾಸಿಯ ವಿಷಯದಲ್ಲಿ ಹೇಳಿದ್ದಲ್ಲದೆ ಎಲ್ಲರಿಗೂ ಹೇಳಿದ್ದಲ್ಲ. ಸನ್ಯಾಸಿಗೆ ಶಿಖೆಯಿರಕೂಡದೆಂಬ ವಿಷಯದಲ್ಲಿ ಯಾರಿಗೂ ಭಿನ್ನಾಭಿಪ್ರಾಯವಿರುವುದಿಲ್ಲ. ಇಲ್ಲಿ ನಿರಂತರ ಧ್ಯಾನಾರೂಢತ್ವವು ಶಿವಯತಿಗೆ ವಿಶೇಷಣವಾಗಿ ಹೇಳಲ್ಪಟ್ಟಿರುವುದು. "ನಿವೃತ್ತಃ ಸರ್ವಸಂಗೇಭ್ಯಃ ಶಿವಧ್ಯಾನಪರಸ್ಸದಾ | ಜ್ಞೇಯಶ್ಶಿವಯತೀಂದ್ರೋಽಯಂ ಭಸ್ಮನಿಷ್ಠಸ್ಸನಾತನಃ ||" ಹೀಗೆ ಕ್ರಿಯಾಸಾರಾದಿಗಳಲ್ಲಿ ಶಿವಯತಿಗಳಿಗೆ ಸದಾ ಧ್ಯಾನಪರತ್ವವು ಉಕ್ತವಾಗಿರುವುದು. ಆದುದರಿಂದ ಈ ಶ್ಲೋಕವು ನಿರಾಭಾರಿಗಳಿಗೆ ಶಿಖಾನಿಷೇಧವನ್ನು ಹೇಳುವುದಲ್ಲದೆ, ಶಿವಬ್ರಹ್ಮಚಾರಿಶಿವಗೃಹಸ್ಥ ಮೊದಲಾದ ವೀರಶೈವದ್ವಿಜರಿಗೆ ಶಿಖಾನಿಷೇಧವನ್ನು ಹೇಳುವುದಿಲ್ಲವೆಂದು ತಿಳಿಯತಕ್ಕದ್ದು.

> ಯಶ್ಶಿಖಾಸೂತ್ರಸಂಪನ್ನ ಉನ್ಮತ್ತಃ ಶೈವ ಈರಿತಃ |
> ತಸ್ಮಾಚ್ಛಿಖಾಸೂತ್ರಯುಗ್ಮಂ ನೋ ಧಾರ್ಯಂ ಗಣವಂಶಜೈಃ ||

ಇದೊಂದು ಸಾಡೆಸಾತಶ್ಲೋಕಮಾಲಿಕೆಯೊಳಗಿನ ಮಣಿಯಾಗಿದೆ. ಶಿಖಾಸೂತ್ರಸಂಪನ್ನನು ಉನ್ಮತ್ತಶೈವನಂತೆ ! ನೋಡಿದಿರಾ, ಈ ಉನ್ಮತ್ತಾಗಮಪ್ರಮಾಣದ ಮಹಿಮೆಯನ್ನು? ಈ ಶ್ಲೋಕದಲ್ಲಿರುವ ಉನ್ಮತ್ತಪದವಿನ್ಯಾಸವನ್ನು ನೋಡಿದರೆ ಯಾವನೋ ಒಬ್ಬ ಶಿಖಾವಿರೋಧಿಯಾದ ಶೂದ್ರಜಾತಿಯ ಉನ್ಮತ್ತನು ಉನ್ಮತ್ತತನದ ರಭಸದಲ್ಲಿಯೇ ಈ ಶ್ಲೋಕವನ್ನು ಬರೆದಂತೆ ತೋರುತ್ತದೆ. ಯಾಕಂದರೆ— ಉನ್ಮತ್ತನು ಪ್ರಜ್ಞೆದಪ್ಪಿ ಉನ್ಮತ್ತವಚನಗಳನ್ನಾಡುವುದು ಲೋಕದಲ್ಲಿ ಸಹಜವಾಗಿದೆ. ಆ ಉನ್ಮತ್ತನು ತನ್ನ ಸ್ವಭಾವಕ್ಕನುಸರಿಸಿ ಶ್ಲೋಕದಲ್ಲಿಯೂ ಸಹ ಉನ್ಮತ್ತಶಬ್ದವನ್ನು ಪ್ರಯೋಗಿಸಿರುವನು. ಇಂಥ ದುಷ್ಟಶ್ಲೋಕಗಳನ್ನು ಶಿವಾಗಮಶ್ಲೋಕಗಳೆಂದು ಬರೆದರೆ ಸತ್ಪುರುಷರು ಛೀಮಾಡ್ಯಾರೆಂಬ ಭೀತಿಯು ಈ ಮುಂಡಿಗೆ ಉತ್ಪನ್ನವಾಗದಿರುವುದನ್ನು ನೋಡಿದರೆ ಆಶ್ಚರ್ಯವೆನಿಸುತ್ತದೆ. ಅಸ್ತು !

ಈತನು ತನ್ನ ಪುಸ್ತಕದ ೧೮ ನೆಯ ಪುಟದಲ್ಲಿ—

'ಯೇಃ ಪರದ್ರವ್ಯಸಂಸಕ್ತಾಃ' ಮೊದಲ್ಗೊಂಡು 'ವೀರಶೈವಂ ಪ್ರ
ಮ್ಯಹಂ' ಎಂಬುವವರೆಗೆ ೫|| ಶ್ಲೋಕಗಳನ್ನು ಬರೆದಿರುತ್ತಾನೆ. ಶ್ಲೋಕಗಳು ವೀರಕಾಮಿಕಾದಿಶಿವಾಗಮಗಳಲ್ಲಿವೆಯೆಂದು ಬರೆದಿರುವದನ್ನು ನೋಡಿದರೆ ಹುಚ್ಚರೂ ಕೂಡ ನಗುವಂತಿದೆ. ವೀರಕಾಮಿಕಾದಿಶಿವಾ
ಮಗಳು ಮದ್ರಾಸ್‌ಪಟ್ಟಣದಲ್ಲಿ ಗ್ರಂಥಾಕ್ಷರಗಳಲ್ಲಿ ಮುದ್ರಿತಗಳಾಗಿವೆ. ಅವುಗಳಲ್ಲಿ ಪಂಜುಹಚ್ಚಿ ಹುಡುಕಿದರೂ ಇವು ಸಿಗುವಂತಿಲ್ಲ. ಈತನು ಒಂದೊಂದು ಶ್ಲೋಕವನ್ನು ಬರೆದು ಇಂಥ ಆಗಮದಲ್ಲಿ, ಇಷ್ಟನೆಯ ಪ
ಲದಲ್ಲಿ, ಇಷ್ಟನೆಯ ಶ್ಲೋಕವೆಂದು ಬರೆಯದೆ, ವೀರಕಾಮಿಕಾದ್ಯಾಗಮ
ಗಳಲ್ಲುಕ್ತವಾಗಿವೆಯೆಂದು ಬರೆದಿರುವುದು ಮೋಸಕಾರ್ಯವಲ್ಲದೆ ಬೇ
ಯಲ್ಲ. ಈ ತರಹದ ಮೋಸಕಾರ್ಯದಲ್ಲಿ ಕೈಹಾಕಿದ ಈತನಿಗೆ ಯಾವ ಪುರುಷಾರ್ಥವು ಬರುವುದೋ ತಿಳಿಯದಾಗಿದೆ.

ಈತನು ೧೯ ನೆಯ ಪುಟದಲ್ಲಿ—

ಯೇ ಶಿಖಾಧಾರಿಣೋ ದೇವಿ ತೇ ವೀರಾ ನೈವ ಪಾರ್ವತಿ |
ಕ್ಷತ್ರಿಯಾಣಾಂ ತು ಶೂದ್ರಾಣಾಂ ವಿಪ್ರಾಣಾಂ ಹಿ ವಿಶಾಂ ಶಿಖಾ ||

ಇದೊಂದು ಸುಪ್ರಭೇದಾಗಮದ ಪ್ರಮಾಣವಂತೆ! ಮದ್ರಾಸಿನಲ್ಲಿ ಮುದ್ರಿತವಾದ ಸುಪ್ರಭೇದಾಗಮದಲ್ಲಿ ಪಾತಾಳಗಡೆಯನ್ನು ಹಾಕಿ ಹುಡುಕಿದರೂ ಈ ಶ್ಲೋಕವು ಸಿಗುವುದಿಲ್ಲ. ಈತನು ಉದಾಹರಿಸಿದ ಯಾವ ಶ್ಲೋಕಗಳೂ ಯಾವ ಗ್ರಂಥಗಳಲ್ಲಿಯೂ ದೊರೆಯುವುದಿಲ್ಲ. ಹೀಗಿದ್ದರೂ ಯಾವುದಕ್ಕೂ ಹೆದರದೆ ಅಸಾಧಾರಣ ಧೈರ್ಯದಿಂದ ಮುದ್ರಣಮಾಡಿಸಿರುವುದನ್ನು ನೋಡಿದರೆ ಈತನ ಧೈರ್ಯಕ್ಕೆ ಬೆಲೆಯೇ ಇಲ್ಲವೆಂದು ಹೇಳಬೇಕಾಗುತ್ತದೆ. ಭಾರತಮಾತೆಯ ಉದರದಲ್ಲಿ ಇಂಥ ಮಕ್ಕಳು ಜನಿಸಿದ ಮೇಲೆ ಅವಳ ಪುಣ್ಯಕ್ಕೆ ಬೆಲೆಯೇ? ಆಹಾ! ಈ ಮುಂಡಿಯ ಜನ್ಮ ಧನ್ಯ! ಧನ್ಯ!! ಯಾರು ಶಿಖಾಧಾರಿಗಳೋ

ಅವರು ವೀರರಾಗುವುದಿಲ್ಲವೆಂದೂ, ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರರಿಗೆ ಶಿಖೆಯುಂಟೆಂದೂ ಈ ಶ್ಲೋಕಾಭಿಪ್ರಾಯವಿರುತ್ತದೆ. ಇಲ್ಲಿ "ವೀರ" ಶಬ್ದಕ್ಕೆ ವೀರಶೈವರೆಂದು ಅರ್ಥಮಾಡದೆ ಭಟರೆಂದು ಮಾಡಿದರೆ ಸರಿಯಾಗುತ್ತದೆ. ಶೂದ್ರರಿಗೆ ವಿಧ್ಯುಕ್ತಶಿಖಾಧಾರಣವನ್ನು ಯಾವ ಧರ್ಮಶಾಸ್ತ್ರಗಳೂ ಹೇಳುವುದಿಲ್ಲ. ಆದರೆ ಈ ಶ್ಲೋಕದಲ್ಲಿ ಶೂದ್ರರಿಗೆ ಶಿಖಾಧಾರಣವು ಹೇಳಲ್ಪಟ್ಟಿರುವುದರಿಂದಲೂ, ಮೇಲಿನ ಒಂದು ವಾಕ್ಯದಲ್ಲಿಯೇ "ದೇವಿ" ಮತ್ತು "ಪಾರ್ವತಿ" ಎಂದು ಎರಡು ಸಂಬೋಧನನಾಮಗಳು ಛಂದಸ್ಸಿಗೋಸುಗ ನಿರರ್ಥಕವಾಗಿ ಉಪಯೋಗಿಸಲ್ಪಟ್ಟಿರುವುದರಿಂದಲೂ ಯಾವನೋ ಒಬ್ಬ ಅರ್ಧಪಂಡಿತನು ಈ ಶ್ಲೋಕವನ್ನು ರಚಿಸಿರುವನೆಂದು ಸ್ಪಷ್ಟವಾಗುತ್ತದೆ. ಇಂಥ ಅಬದ್ಧಶ್ಲೋಕವನ್ನು ಪ್ರಮಾಣವನ್ನಾಗಿ ತೆಗೆದುಕೊಂಡ ಈತನ ಪಾಂಡಿತ್ಯವು ಎಷ್ಟರಮಟ್ಟಿಗಿರಬಹುದೆಂಬ ವಿಷಯವನ್ನು ಪಾಠಕರೇ ಪರ್ಯಾಲೋಚಿಸಬೇಕು. ಅಸ್ತು! ಈತನ ಬೇರೊಂದು ಪ್ರಮಾಣವನ್ನು ಪರಿಶೀಲಿಸೋಣ!

> ವೇಶೇಷ್ವಾಚಾರೇಷ್ವೇವಂ ಭೇದಂ ವಿದ್ಧಿ ಬ್ರವೀಮಿ ತೇ |
> ಬ್ರಾಹ್ಮಣಾನಾಂ ಶಿಖಾ ಪ್ರೋಕ್ತಾ ನ ವೀರಾಣಾಂ ಮಹೇಶ್ವರಿ ||

ಇದೊಂದು ಶವಾಗಮವಚನವಂತೆ! ಯಾವ ಶವಾಗಮವೆನ್ನುವದನ್ನು ಬರೆದಿಲ್ಲ. ಈ ಶವಾಗಮವಾಕ್ಯದಲ್ಲಿ ಬ್ರಾಹ್ಮಣರಿಗೆ ಶಿಖೆಯುಂಟೆಂದೂ, ವೀರರಿಗೆ ಶಿಖೆಯಿಲ್ಲವೆಂದೂ ಅಭಿಪ್ರಾಯವು ಹೊರಡುತ್ತದೆ. ವೀರಶೈವಮತದಲ್ಲಿ ಬ್ರಾಹ್ಮಣರು ಇರುವುದರಿಂದ ಅವರಿಗೆ ಶಿಖೆಯು ಉಂಟೇ ಉಂಟು. ಈ ಶ್ಲೋಕವನ್ನು ರಚಿಸಿದ ಶೂದ್ರನು ತನ್ನ ಶೂದ್ರವೃತ್ತಿಗನುಸರಿಸಿ 'ವೀರ' ಪದವನ್ನು ಯುದ್ಧಮಾಡುವ ಭಟರನ್ನು ಕುರಿತು ಪ್ರಯೋಗಿಸಿದ್ದಾನೆಯೇ ಹೊರತು ಈ ಮುಂಡಿಯ ಅಭಿಪ್ರಾಯದಂತೆ ಆ ಪದವನ್ನು ಪ್ರಯೋಗಿಸಿಲ್ಲವೆಂದು ಹೇಳಬೇಕಾಗು

ತ್ತದೆ. ಯುದ್ಧಮಾಡುವವರಿಗಾಗಲಿ ಕುಸ್ತಿಯಾಡುವವರಿಗಾಗಲಿ ಟ್ರ
ಯಿದ್ದರೆ ಬಹಳ ತೊಂದರೆಯಾಗುವುದು ಲೋಕಾನುಭವಸಿದ್ಧವಾಗಿ
ಆದುದರಿಂದ ಯಾವನೋ ಒಬ್ಬ ಕುಸ್ತಿಮನುಷ್ಯನು ತನ್ನ ಕಾಯಕಕ್ಕ
ಸಾರವಾಗಿ ಇದನ್ನು ರಚಿಸಿರುವನಲ್ಲದೆ ಬೇರೆಯಿಲ್ಲ. ಈ ವಿಷಯವ
ಈ ಮುಂಡಿಯು ಬಹು ಸೂಕ್ಷ್ಮ ಬುದ್ಧಿಯಿಂದ ಪರಿಶೀಲಿಸಿದರೆ ಇ
ರಹಸ್ಯಾರ್ಥವು ಸ್ಪಷ್ಟವಾಗಿ ವೇದ್ಯವಾಗುವುದು. ಅಸ್ತು!

ಇನ್ನು ವೀರಶೈವರಿಗೆ ಶಿಖಾಸೂತ್ರಗಳಿರಬಾರದೆನ್ನುವ ತತ್ತ
ವನ್ನೇ ಷಡಕ್ಷರಕವಿಗಳು ವೃಷಭೇಂದ್ರವಿಜಯದಲ್ಲಿ ಹೇಳಿರುವರಂ
ಈ ಬಗ್ಗೆ ಈತನು ಅವರು ರಚಿಸಿದ—

> ಗುರುಮಾರ್ಗಸ್ಥಿತಿ ಬೇರೆ ದೀಕ್ಷೆಯ ವಿಧಾನಂ ಬೇರೆ ನಿತ್ಯವ್ರತಾ
> ಚರಣಂ ಬೇರೆ ಕಳೇವರಾನುಗತಚಿಹ್ನಂ ಬೇರೆ ||

ಎಂಬೀ ಶ್ಲೋಕವನ್ನು ಬರೆದಿರುತ್ತಾನೆ. ಇಲ್ಲಿ ಶಿಖಾಸೂತ್ರಗ
ವಾರ್ತೆಯೇ ಇಲ್ಲ. ಹೀಗಿದ್ದರೂ ಈತನು ಈ ಶ್ಲೋಕವನ್ನು ತನ್ನ
ಪಕ್ಷಕ್ಕೆ ಪ್ರಮಾಣವನ್ನಾಗಿ ತೆಗೆದುಕೊಂಡಿರುವುದು ಅತಿ ಮೂಢತ
ವಲ್ಲದೆ ಬೇರೆಯಲ್ಲ. ಷಡಕ್ಷರಕವಿಗಳು ಇಲ್ಲಿ ಶಿವಭಕ್ತರಿಗೂ, ವಿಷ್ಣು
ಭಕ್ತರಿಗೂ ತಾರತಮ್ಯವನ್ನು ಹೇಳಿರುವರಲ್ಲದೆ ಮತ್ತೇನನ್ನೂ ಹೇಳಿಲ್ಲ
ಷಡಕ್ಷರಕವಿಗಳ ಹೇಳಿಕೆಯಂತೆ ವೀರಶೈವರ ದೀಕ್ಷಾವಿಧಾನ, ವ್ರತ
ಆಚರಣೆ, ಶರೀರದಲ್ಲಿ ಧರಿಸುವ ಚಿಹ್ನ, ಪೂಜಾಕ್ರಮ, ದೈವತ ಮೊ
ಲಾದವುಗಳಿಗೂ ವಿಷ್ಣುಭಕ್ತರ ದೀಕ್ಷಾವಿಧಾನ, ವ್ರತ, ಆಚರಣೆ
ಶರೀರದಲ್ಲಿ ಧರಿಸುವ ಚಿಹ್ನ, ದೈವತಾದಿಗಳಿಗೂ ಯಾವ ಸಂಬಂಧವು
ಇರುವುದಿಲ್ಲ ಈ ವಿಷಯವು ಚಿಕ್ಕ ಬಾಲಕರಿಗೂ ಸಹ ತಿಳಿಯ
ವಂತಿದೆ. ಹೀಗಿದ್ದರೂ ಈತನು ಇದನ್ನು ಏಕೆ ಉದಾಹರಿಸಿದನೋ
ಆಶ್ಚರ್ಯಕರವಾಗಿದೆ. ಶರೀರದಲ್ಲಿ ಧರಿಸುವ ಚಿಹ್ನವು ಬೇರೆ ಎಂದಿ
ಬುದ್ಧಿಭ್ರಮೆಯಿಂದ ಏನೇನೋ ತಿಳಿದುಕೊಂಡಂತೆ ಭಾಸವಾಗುತ್ತದೆ

ಆಯ್ಯಾ! ಮುಂಡಿಯೇ! ಶಿವಭಕ್ತರು ಶರೀರದಲ್ಲಿ ಭಸ್ಮರುದ್ರಾಕ್ಷ ಗಳನ್ನು ಧರಿಸುತ್ತಾರೆ. ವಿಷ್ಣುಭಕ್ತರು ಊರ್ಧ್ವಪುಂಡ್ರ ತುಳಸೀ ಮಾಲಾದಿಗಳನ್ನು ಧರಿಸುತ್ತಾರೆ. ಇದನ್ನು ತೋರಿಸುವುದೇ ಷಡಕ್ಷರ ಕವಿಗಳ ಆಶಯವಾಗಿದೆಯೆನ್ನುವದನ್ನು ತಿಳಿದುಕೊಳ್ಳಬೇಕು.

ಈತನು ೨೦ ನೆಯ ಪುಟದಲ್ಲಿ—

> ಸನ್ಯಾಸಾಶ್ರಮಭಾಜಿ ನಾಸ್ತಿ ಚ ಶಿಖಾ ಯಜ್ಞೋಪವೀತಾದಿಕಂ
> ಪೌರ್ವಂ ಕರ್ಮ ತಥಾವಿಧಂ ಬಹುತರಂ ಯದ್ವನ್ಮುಮುಕ್ಷೌ ತಥಾ |
> ಮೋಕ್ಷಾರ್ಥಿನ್ಯಪಿ ವೀರಶೈವನಿರತೇ ನೈವಾಸ್ತಿ ಪೂರ್ವೋಚಿತಂ
> ಕರ್ಮಾನ್ಯತ್ಸಚ ಪೂಜ್ಯ ಏವ ತದಪಿ ಜ್ಞಾನಾಧಿಕೋ ವರ್ಣಿಭಿಃ ||

ಎಂಬ ಭಕ್ತ್ಯಾಧಿಕ್ಯದ ಶ್ಲೋಕವನ್ನು ಬರೆದಿದ್ದಾನೆ. ಈ ಶ್ಲೋಕಾಭಿ ಪ್ರಾಯವನ್ನು ಸ್ವಲ್ಪ ವಿಮರ್ಶಿಸೋಣ!

ಮೋಕ್ಷಾರ್ಥಿಯಾದ ಪ್ರಾಕೃತಯತಿಯಲ್ಲಿ ಅಗ್ನಿಹೋತ್ರಾದಿ ಸಕಲ ಕರ್ಮಗಳೂ ತದಂಗಭೂತಗಳಾದ ಶಿಖಾಸೂತ್ರಗಳೂ ಹೇಗೆ ಇರುವ ದಿಲ್ಲವೋ, ಹಾಗೆಯೇ ವೀರಶೈವ ಮಾರ್ಗನಿರತನಾದ ಮುಮುಕ್ಷುವಿನಲ್ಲಿ (ಸನ್ಯಾಸಿಯಲ್ಲಿ) ಶಿಖಾಸೂತ್ರಗಳಿರಕೂಡದೆಂದು ಭಕ್ತ್ಯಾಧಿಕ್ಯದ ಅಭಿ ಪ್ರಾಯವು. ಇದನ್ನು ಸರ್ವರೂ ಒಪ್ಪಿಯೇ ಒಪ್ಪುವರು. ಇದರಿಂದ ಈ ಮುಂಡಿಗೆ ಯಾವ ಪುರುಷಾರ್ಥವು ದೊರೆಯಿತೋ ತಿಳಿಯದಾಗಿದೆ.

ಈ ಮುಂಡಿಯು ಇದೇ ಪುಟದಲ್ಲಿ—

> ಯೇ ಭೂತಾನಾಮಧಿಪತಯೋ ವಿಶಿಖಾಸಃ ಕಪರ್ದಿನಃ ||

ಎಂಬ ಶ್ರೀರುದ್ರವೈದಿಕಮಂತ್ರವನ್ನುದಾಹರಿಸಿ, ಈ ಮಂತ್ರವು ಶಿಖೆಯಿರಕೂಡದೆಂದು ಬೋಧಿಸುತ್ತದೆಂದು ಬರೆದಿರುವನು. ಈ ವೈದಿಕ ಮಂತ್ರವು ಈ ಮುಂಡಿಯ ಅಭಿಪ್ರಾಯದಂತೆ ಅವೈದಿಕಾಭಿಪ್ರಾಯ ವನ್ನು ಬೋಧಿಸುವುದಿಲ್ಲ. ಈ ವಿಷಯದಲ್ಲಿ "ವಿಶಿಖಾಸಃ—ವಿವಿಧ ಶಿಖಾಃ" ಎಂದು ಅರ್ಥವನ್ನು ಮಾಡಿರುವ ಭಟ್ಟಭಾಸ್ಕರಭಾಷ್ಯವನ್ನು

ನೋಡಿ ಧನ್ಯಾತ್ಮನಾಗಬೇಕು. 'ವಿಶಿಖಾಸಃ' ಎಂಬ ವಿಶೇಷಣ
ವೇದದಲ್ಲಿ ರುದ್ರಮೂರ್ತಿಗಳಿಗುಕ್ತವಾಗಿರುವುದರಿಂದ ರುದ್ರರಿಗೆ ಮು
ನವನ್ನು ಹೇಳುವುದು ಅತ್ಯಂತ ತುಚ್ಛವಾಗಿದೆ. ಈ ಮುಂಡಿಯ
ಪ್ರಾಯದಂತೆ ಅರ್ಥಮಾಡಿದರೆ, ರುದ್ರಲೋಕದಲ್ಲಿ ರುದ್ರರು ಕ್ಷೌ
ಮಾಡಿಸಿಕೊಳ್ಳುವುದಕ್ಕೋಸ್ಕರ ಹಜಾಮರನ್ನು ಇಡುವ ಪ್ರಸಂಗ
ಪ್ರಾಪ್ತವಾಗಬಹುದು. ಹೀಗೆ ಪೂರ್ವಾಪರವಿಚಾರಮಾಡದೆ ಮನಸ್ಸಿ
ಬಂದಂತೆ ಬರೆಯುವುದು ಮಂದತನದ ಲಕ್ಷಣವಲ್ಲದೆ ಬೇರೆಯಲ್ಲ.

ಈತನು ೨೧ನೆಯ ಪುಟದಲ್ಲಿ—

> ಶಿಖಾಸೂತ್ರವಿಹೀನಾಶ್ಚ ಪಂಚಸೂತಕವರ್ಜಿತಾಃ |
> ಜಟಿನೋ ಮುಂಡಿನೋ ಭೂತ್ವಾ ವರ್ತಂತೇ ಮಹಿಮಾನ್ವಿತಾಃ ||
> ಜ್ಞಾನಮೇವ ಶಿಖಾ ತೇಷಾಂ ಶಿವಸೂತ್ರಂಚ ಪಾವನಂ |
> ಸೂತ್ರಂ ಮದಾತ್ಮಕಂ ಪ್ರಾಣವಿಷ್ಟಲಿಂಗಂ ಮಹೇಶ್ವರಿ ||

ಎಂಬ ಶ್ಲೋಕಗಳನ್ನು ಬರೆದಿರುತ್ತಾನೆ. ಇವು ವಾತುಲಾಗಮವಚನ
ಗಳಂತೆ! ವಾತುಲಾಗಮವು ಮುದ್ರಿತವಾಗಿದೆ. ಅದರಲ್ಲಿ ಈ ಶ್ಲೋಕಗಳ
ಇರುವುದಿಲ್ಲ. ಪರೀಕ್ಷಕರು ವಾತುಲಾಗಮವನ್ನು ಪರೀಕ್ಷಿಸಿದರೆ ಈತನ
ಬರವಣಿಗೆಯ ವಂಚಕತನವು ಸ್ಪಷ್ಟವಾಗಿ ಕಂಡುಬರುವುದು. ಅಸ್ತು
ಒಂದು ಪಕ್ಷದಲ್ಲಿ ಈ ಶ್ಲೋಕಗಳನ್ನೊಪ್ಪಿದರೂ, ಇದರಿಂದ ಎಲ್ಲ ವೀರಶೈವ
ರಿಗೆ ಜ್ಞಾನಶಿಖಾಜ್ಞಾನಯಜ್ಞೋಪವೀತಧಾರಣವು ಹೇಳಲ್ಪಡುವುದಿಲ್ಲ
ಸನ್ಯಾಸಿಗಳಿಗೆ ಮಾತ್ರ ಹೇಳಲ್ಪಡುವುದು. ಸನ್ಯಾಸಿಗಳಾದ ವೀರಶೈವರು
ಶಿಖಾಸೂತ್ರವಿಹೀನರೂ ಜಟಿಗಳೂ ಅಥವಾ ಮುಂಡಿಗಳೂ ಆಗಿರುವುದ
ರಿಂದಲೂ ಪಂಚಸೂತಕವರ್ಜಿತರಾಗಿರುವುದರಿಂದಲೂ ಅವರಿಗೆ ಮಾತ್ರ
ಜ್ಞಾನಶಿಖಾ ಜ್ಞಾನಯಜ್ಞೋಪವೀತಗಳು ಹೇಳಲ್ಪಡುತ್ತವೆಯಲ್ಲದೆ
ಇತರಾಶ್ರಮಿಗಳಾದ ವೀರಶೈವದ್ವಿಜರಿಗೆ ಹೇಳಲ್ಪಡುವದಿಲ್ಲವೆನ್ನುವದು
ಸ್ಪಷ್ಟವೇ ಆದೆ.

ಈತನು ಇದೇ ಪುಟದಲ್ಲಿ ಸೂತ್ರಕ್ಕೆ ಲಿಂಗವೆಂಬ ಅರ್ಥವುಳ್ಳ ಶ್ಲೋಕವನ್ನು ಬರೆದಿದ್ದಾನೆ. ಇದರಿಂದ ಈತನಿಗೆ ಯಾವ ಪ್ರಯೋಜನ ಪಡೆಯೋ ತಿಳಿಯದಾಗಿದೆ.

ಈತನು ೨೨ನೆಯ ಪುಟದಲ್ಲಿ—

> ಅಗ್ನೇರಿವ ಶಿಖಾ ನಾನ್ಯಾ ಯಸ್ಯ ಜ್ಞಾನಮಯೀ ಶಿಖಾ |
> ಸ ಶಿಖೀತ್ಯುಚ್ಯತೇ ವಿದ್ವಾನಿತರೇ ಕೇಶಧಾರಿಣಃ ||
> ಶಿಖಾ ಜ್ಞಾನಮಯೀ ಯಸ್ಯ ಉಪವೀತಂ ಚ ತನ್ಮಯಂ |
> ಬ್ರಾಹ್ಮಣ್ಯಂ ಸಕಲಂ ತಸ್ಯ ಇತಿ ಬ್ರಹ್ಮವಿದೋ ವಿದುಃ ||

ಎಂಬೀ ಬ್ರಹ್ಮೋಪನಿಷತ್ತಿನ ಎರಡು ಮಂತ್ರಗಳು ಎಲ್ಲ ವೀರಶೈವರಿಗೂ ಜ್ಞಾನಮಯಶಿಖಾಜ್ಞಾನಮಯಸೂತ್ರಗಳೆನ್ನುವಲ್ಲಿ ಪ್ರಮಾಣಗಳಂತೆ! ಅಹಾ! ಈತನ ಬುದ್ಧಿಯು ಎಷ್ಟು ಸೂಕ್ಷ್ಮವಿರಬಹುದು? ಈ ಎರಡು ಮಂತ್ರಗಳ ಮಧ್ಯದಲ್ಲಿಯೇ—

**ಕರ್ಮಣ್ಯಧಿಕೃತಾ ಯೇತು ವೈದಿಕೇ ಬ್ರಾಹ್ಮಣಾದಯಃ |**
**ತೇಭಿರ್ಧಾರ್ಯಮಿದಂ ಸೂತ್ರಂ ಕ್ರಿಯಾಂಗಂ ತದ್ಧಿ ವೈ ಸ್ಮೃತಂ ||**

ಎಂಬ ಮಂತ್ರವಿದೆ. ಇದನ್ನು ಈ ಮುಂಡಿಯು ಗಪ್ಪನೆ ನುಂಗಿಬಿಟ್ಟು ಇದರ ಹಿಂದಿನ ಹಾಗೂ ಮುಂದಿನ ಮಂತ್ರಗಳೆರಡನ್ನು ತೆಗೆದುಕೊಂಡಿರುವುದನ್ನು ನೋಡಿದರೆ ಈತನ ವಂಚಕತನವು ವ್ಯಕ್ತವಾಗುತ್ತದೆ. ಈ ಬ್ರಹ್ಮೋಪನಿಷತ್ತಿನ ಮಂತ್ರಗಳು ಸಾಮಾನ್ಯವಾಗಿ ವೈದಿಕಕರ್ಮಾಧಿಕಾರವಿಲ್ಲದ ಬ್ರಾಹ್ಮಣಸನ್ಯಾಸಿಗಳಿಗೆ ಕೇಶಮಯಶಿಖಾ ತಂತುಮಯ ಸೂತ್ರಗಳನ್ನು ವಿಧಿಸುವುದಿಲ್ಲವೆಂದೂ, ಜ್ಞಾನಮಯಶಿಖಾಸೂತ್ರಗಳನ್ನು ವಿಧಿಸುತ್ತವೆಂದೂ ನಾವು ಹಿಂದೆಯೇ ಸಿದ್ಧಾಂತಗೊಳಿಸಿರುವುದರಿಂದ, ಆ ವಿಷಯವನ್ನು ಈತನು ಪುನಃ ಪುನಃ ಪುನಃ ಪುನಃ ಓದಿನೋಡಿ ಧನ್ಯಾತ್ಮನಾಗಬೇಕೆಂದು ಹಾರೈಸುತ್ತೇವೆ.

ಈತನು ಇದೇ ಪುಟದಲ್ಲಿ—ಪುನಃ ಸೂತ್ರ ಶಬ್ದಕ್ಕೆ ಲಿಂಗವೆಂಬ ಅರ್ಥದಲ್ಲಿ—"ಲೋಕಾಶ್ಚ" ಎಂಬ ಶ್ಲೋಕವನ್ನೂ ಮತ್ತು—

ಶಿವವಿಷ್ಣುಮಯಂ ಲಿಂಗಂ ತ್ರಿವೃತ್ಸೂತ್ರಂ ಸನಾತನಂ |
ಯಜ್ಞೋಪವೀತಂ ಪರಮಂ ಪವಿತ್ರಂ ಶ್ರದ್ಧಯಾ ಸಹ |
ಕರಾಬ್ಜಪೀಠೇ ಪೀಠೇ ವಾ ಭಜಧ್ವಂ ಶ್ರುತಿಕೋವಿದಾಃ ||

ಎಂಬ ಶ್ಲೋಕಗಳನ್ನೂ ವೇದಾಂತಸಾರವೀರಶೈವಚಿಂತಾಮಣಿಪ್ರೋಕ್ತಗಳೆಂದು ಉದಾಹರಿಸಿದ್ದಾನೆ. ಇವುಗಳಿಂದ ನಾವು ಹೇಳುವ ಶಿಖಾಸೂತ್ರಗಳಿಗೆ ಬಾಧಕವೇನು ? ಶ್ರುತಿಕೋವಿದರಾದ ಮುನಿಪುಂಗವರೇ, ಶಿವವಿಷ್ಣುಮಯವಾದ ಲಿಂಗವು ತ್ರಿವೃತ್ಸೂತ್ರವೆಂದೂ, ಸನಾತನವೆಂದೂ, ಯಜ್ಞೋಪವೀತವೆಂದೂ, ಪರಮಪವಿತ್ರವೆಂದೂ ನಾಮಾಂತರಗಳುಳ್ಳದ್ದಾಗಿದೆ. ಇದನ್ನು ಕರಕಮಲಪೀಠದಲ್ಲಿಯಾಗಲಿ ಪೀಠದಲ್ಲಿಯಾಗಲಿ ಇಟ್ಟುಕೊಂಡು ಭಜಿಸಿರಿ, ಎಂದು ಇದರ ಅರ್ಥವಾಗುತ್ತದೆ. ಲಿಂಗಕ್ಕೆ ತ್ರಿವೃತ್ಸೂತ್ರವೆಂಬ ಹೆಸರೂ, ಯಜ್ಞೋಪವೀತವೆಂಬ ಹೆಸರೂ ಇದ್ದುಕೊಳ್ಳಲಿ, ಇದರಿಂದ ನಮ್ಮ ಪಕ್ಷಕ್ಕಾದ ಹಾನಿಯೇನು ? ವೀರಶೈವಸನ್ಯಾಸಿಗಳು ಬಾಹ್ಯಸೂತ್ರವನ್ನು ಬಿಟ್ಟಮೇಲೆ ಲಿಂಗವೇ ಯಜ್ಞೋಪವೀತವೆಂದೂ ತ್ರಿವೃತ್ಸೂತ್ರವೆಂದೂ ತಿಳಿದು ಭಜಿಸಬೇಕೆಂಬುದೇ ಆ ವಾಕ್ಯಗಳ ತಾತ್ಪರ್ಯವು. ಈ ವಿಷಯವು ಬ್ರಹ್ಮೋಪನಿಷತ್ತಿನಲ್ಲಿ ಸ್ಪಷ್ಟವಾಗಿದೆ. ಇದನ್ನು ನಾವು ಹಿಂದೆ ತೋರಿಸಿಯೇ ಇರುವೆವು. "ಶಿವವಿಷ್ಣುಮಯಂಲಿಂಗಂ" ಎಂಬುದನ್ನು ವೇದಾಂತಸಾರವೀರಶೈವಚಿಂತಾಮಣಿಯು ಹೇಳುತ್ತದೆಂದು ಹಿಗ್ಗಿಬರೆದ ಈತನು "ನಿರಾಭಾರವೀರಶೈವಃ ಬಹಿಸ್ಸೂತ್ರಂ ಬಹಿಶ್ಶಿಖಾಂ ಚ ತ್ಯಕ್ತ್ವಾ ಲಿಂಗಂ ಧಾರಯೇತ್" ಎಂದು ಅದೇ ಗ್ರಂಥದಲ್ಲುಕ್ತವಾಗಿರುವ ವಾಕ್ಯವನ್ನು ನೋಡಿದಂತೆ ತೋರುವುದಿಲ್ಲ. ಒಂದುಪಕ್ಷ ನೋಡಿದ್ದರೂ, ತನಗೆ ಇದು ವಿರೋಧವಾಗುವುದೆಂದು ತಿಳಿದು ಬಿಟ್ಟಂತೆ ತೋರುತ್ತದೆ. ವೀರಶೈವ

ಸನ್ಯಾಸಿಯು ಜಾತಿಚಿಹ್ನಗಳಾದ ಬಹಿಸ್ಸೂತ್ರವನ್ನೂ ಬಹಿಶ್ಶಿಖೆಯನ್ನೂ ತ್ಯಜಿಸಿ, ಮತಚಿಹ್ನವಾದ ಲಿಂಗವನ್ನು ಮಾತ್ರ ಧರಿಸಬೇಕೆಂದು ಈ ವಾಕ್ಯದ ಅಭಿಪ್ರಾಯವಿರುತ್ತದೆ. ಇದರಿಂದ ಸನ್ಯಾಸಾಶ್ರಮವನ್ನು ವಹಿಸುವುದಕ್ಕಿಂತ ಮೊದಲು ವೀರಶೈವದ್ವಿಜರಿಗೆ ಶಿಖಾಸೂತ್ರಗಳಿರಬೇಕೆಂದು ಸಿದ್ಧಾಂತವಾಗುತ್ತದೆ.

ಈತನು ಇದೇ ಪುಟದಲ್ಲಿ—

> ಯಜ್ಞೋಪವೀತಮಿತಿ ಸೂತ್ರಮಿತಿ ಪ್ರಸಿದ್ಧಂ
> ಸಾಕ್ಷಾತ್ಪವಿತ್ರಮಿತಿ ರುದ್ರ ಯದಿಷ್ಟಲಿಂಗಂ ।
> ಬ್ರಹ್ಮಾಖ್ಯವೇದಶಿರಸಿ ಪ್ರತಿಪಾದಿತಂ ಸ್ಯಾ
> ತ್ತತ್ಪಾಣಿಮಂತ್ರನುತವೀರಮತಪ್ರಕಾಶಂ ॥

ಎಂಬ ಭಕ್ತಾಧಿಕ್ಯದ ಶ್ಲೋಕವನ್ನುದಾಹರಿಸಿ, ಯಜ್ಞೋಪವೀತ ಮತ್ತು ಸೂತ್ರಶಬ್ದಗಳಿಗೆ ಇಷ್ಟಲಿಂಗವೆಂಬ ಅರ್ಥವಾಗುವುದೆಂದು ಬರೆದಿದ್ದಾನೆ. ಈ ಶ್ಲೋಕವನ್ನು ರಚಿಸಿದ ಕವಿಯು ಬ್ರಹ್ಮೋಪನಿಷತ್ತಿನ ನಿಜವಾದ ಅರ್ಥವನ್ನು ತಿಳಿದಿಲ್ಲವೆಂದು ಸ್ಪಷ್ಟವಾಗುತ್ತದೆ. ಬ್ರಹ್ಮೋಪನಿಷತ್ತಿನಲ್ಲಿ ಯಜ್ಞೋಪವೀತ ಹಾಗೂ ಸೂತ್ರಶಬ್ದಗಳು ಅನೇಕ ಕಡೆಯಲ್ಲಿ ಹೇಳಲ್ಪಟ್ಟವೆ. ಆದರೆ ಯಜ್ಞೋಪವೀತಮಂತ್ರದಲ್ಲಿರುವ ಯಜ್ಞೋಪವೀತ ಶಬ್ದಕ್ಕೂ "**ಕರ್ಮಣ್ಯಧಿಕೃತಾ ಯೇತು ವೈದಿಕೇ ಬ್ರಾಹ್ಮಣಾದಯಃ । ತೇಭಿರ್ಧಾರ್ಯಮಿದಂ ಸೂತ್ರಂ ಕ್ರಿಯಾಂಗಂ ತದ್ಧಿ ವೈ ಸ್ಮೃತಂ॥**" ಎಂಬ ಮಂತ್ರದಲ್ಲಿರುವ ಸೂತ್ರಶಬ್ದಕ್ಕೂ ಇಷ್ಟಲಿಂಗವೆಂದು ಅರ್ಥ ಮಾಡಲಿಕ್ಕೆ ಬರುವುದಿಲ್ಲ. "**ಯಜ್ಞೋಪವೀತಂ ಪರಮಂ ಪವಿತ್ರಂ ಪ್ರಜಾಪತೇರ್ಯತ್ಸಹಜಂ ಪುರಸ್ತಾತ್ । ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ ಯಜ್ಞೋಪವೀತಂ ಬಲಮಸ್ತು ತೇಜಃ**" ಎಂಬ ಮಂತ್ರದ ಮುಂದೆಯೇ **ಸಶಿಖಂ ವಪನಂ ಕೃತ್ವಾ ಬಹಿಸ್ಸೂತ್ರಂ ತ್ಯಜೇದ್ಬುಧಃ ॥** ಎಂಬ ಮಂತ್ರವಿದೆ. ಹಿಂದಿನ ಮಂತ್ರದಲ್ಲಿ

"ಯತ್" ಎಂಬ ಶಬ್ದವಿದೆ. ಇದರಿಂದ ಮುಂದಿನ ಮಂತ್ರದಲ್ಲಿ "ತತ್ ಬಹಿಸ್ಸೂತ್ರಂ" ಎಂದು ಹೇಳಬೇಕು. ಹಿಂದಿನ ಮಂತ್ರದಲ್ಲಿ ಉಕ್ತವಿಶೇಷಣವಿಶಿಷ್ಟವಾದ ಯಾವ ಯಜ್ಞೋಪವೀತವಿದೆಯೋ, ಆ ಬಹಿಸ್ಸೂತ್ರವನ್ನು ಶಿಖಾಸಹಿತವಪನಮಾಡಿಸಿಕೊಂಡು ಬಿಡಬೇಕೆಂದು ಈ ಮಂತ್ರವು ವಿಧಿಸುವುದರಿಂದ, ಯಜ್ಞೋಪವೀತಕ್ಕೆ ಇಷ್ಟಲಿಂಗವೆಂದು ಅರ್ಥಮಾಡಿದರೆ ವೀರಶೈವ ಸನ್ಯಾಸಿಯು ಇಷ್ಟಲಿಂಗವನ್ನು ಬಿಡಬೇಕಾಗುವ ಪ್ರಸಂಗವು ಬರುವುದು. ಹೀಗೆ ಆಚರಿಸುವುದು ಸಾಧ್ಯವೇ? ಮಂತ್ರಗಳಲ್ಲಿರತಕ್ಕ ಪೂರ್ವಾಪರರಹಸ್ಯಾರ್ಥವನ್ನು ತಿಳಿಯದೆ ಸುಮ್ಮಸಮ್ಮನೆ ಬರೆಯುವುದು ಮಂದಬುದ್ಧಿಯ ಪ್ರಭಾವವಲ್ಲದೆ ಬೇರೊಂದಿಲ್ಲ.

ಈತನು ೨೩ನೆಯ ಪುಟದಲ್ಲಿ—

> ಜ್ಞಾನಕ್ರಿಯಾಜಪತಪಃಪರಲಿಂಗತತ್ವ |
> ಧ್ಯಾನಾಖ್ಯಪಂಚಶಿವಯಜ್ಞಸಮೀಪಸಂಸ್ಥಂ ||
> ಯಜ್ಞೋಪವೀತಮಿತಿ ಲಿಂಗಮಿದಂ ಭವ ತ್ವಾಂ |
> ಪ್ರಾಹುಃ (　) ಕರತಲಾಮಲಕೋಪಮಂ ತೇ ||

ಎಂಬೀ ಛಂದೋಭಂಗವುಳ್ಳ ಭಕ್ತ್ಯಾಧಿಕ್ಯದ ಶ್ಲೋಕವನ್ನು ಉದಾಹರಿಸಿದ್ದಾನೆ. ಈ ಶ್ಲೋಕದಲ್ಲಿ ಯಜ್ಞೋಪವೀತಕ್ಕೆ ಲಿಂಗವೆಂದು ಅರ್ಥವಿದೆ ಈ ರೀತಿಯಾಗಿ ಅರ್ಥಮಾಡಿರುವುದು ವೀರಶೈವ ಸನ್ಯಾಸಿಯ ವಿಷಯದಲ್ಲಿಯೇ ಹೊರತು ಸಕಲವೀರಶೈವರ ವಿಷಯದಲ್ಲಿ ಅಲ್ಲವೆಂಬ ವಿಷಯವನ್ನು ತಿಳಿದುಕೊಳ್ಳತಕ್ಕದ್ದು. 'ನಿರಾಭಾರವೀರಶೈವೋ ಬಹಿಸ್ಸೂತ್ರಂ ಬಹಿಶ್ಶಿಖಾಂ ಚ ತ್ಯಕ್ತ್ವಾ ಲಿಂಗಂ ಧಾರಯೇತ್' ಎಂಬ ವೇದಾಂತಸಾರವೀರಶೈವಚಿಂತಾಮಣಿಯ ವಾಕ್ಯದಂತೆಯೂ, "ಸಶಿಖಂ ವಪನಂ ಕೃತ್ವಾ ಬಹಿಸ್ಸೂತ್ರಂ ತ್ಯಜೇದ್ಬುಧಃ" ಎಂಬ ಬ್ರಹ್ಮೋಪನಿಷತ್ತಿನ ವಾಕ್ಯದಂತೆಯೂ ನಿರಾಭಾರಿ ವೀರಶೈವನು (ವೀರಶೈವ ಸನ್ಯಾಸಿಯು) ಬಹಿಶ್ಶಿಖಾಸೂತ್ರಗಳನ್ನು ಬಿಟ್ಟು ಬ್ರಹ್ಮರೂಪವಾದ

ಲಿಂಗವನ್ನು ಮಾತ್ರ ಧರಿಸಬೇಕೆಂಬುದೇ ಸಿದ್ಧಾಂತವಲ್ಲದೆ, ಈ ಮುಂಡಿಯ ಹೇಳಿಕೆಯಂತೆ ಎಲ್ಲಾ ವೀರಶೈವರೂ ಬಹಿಸ್ಸೂತ್ರಬಹಿಶ್ಶಿಖೆಗಳನ್ನು ಬಿಟ್ಟು ಲಿಂಗವೊಂದನ್ನೇ ಧರಿಸಬೇಕೆನ್ನುವುದು ಸಿದ್ಧಾಂತವಲ್ಲ.

ಈ ಮುಂಡಿಯು—"ಶಿವವಿಷ್ಣುಮಯಂ ಲಿಂಗಂ" ಇತ್ಯಾದಿಯಾಗಿ ಲಿಂಗಕ್ಕೆ ಯಜ್ಞೋಪವಿತವೆಂದು ಹೇಳುವ ವೇದಾಂತಸಾರವೀರಶೈವ ಚಿಂತಾಮಣಿಯಲ್ಲಿ ಉಕ್ತಗಳಾದ ಶ್ಲೋಕಗಳನ್ನು ಬರೆದು, ನಿರಾಭಾರಿ ವೀರಶೈವರು ಮಾತ್ರ ಬಹಿಶ್ಶಿಖಾಸೂತ್ರಗಳನ್ನು ಬಿಟ್ಟು ಲಿಂಗವನ್ನು ಧರಿಸಬೇಕೆಂದು ವಿಧಿಸುವ ವಾಕ್ಯವನ್ನು ಬರೆಯದೆ ಬಿಟ್ಟಿರುವುದು ವಂಚಕತನವಲ್ಲವೇ? ಹೀಗಿದ್ದರೂ ವೇದಾಂತಸಾರವೀರಶೈವಚಿಂತಾಮಣಿಯು ಎಲ್ಲಾ ವೀರಶೈವರಿಗೆ ಜ್ಞಾನಶಿಖಾಜ್ಞಾನಸೂತ್ರ (ಲಿಂಗ) ಗಳನ್ನು ಹೇಳುವುದೆಂದು ಬರೆದಿರುವ ಈತನ ಬರವಣಿಗೆಗೆ ಎಷ್ಟು ಧಿಕ್ಕಾರವನ್ನಿಟ್ಟರೂ ಸಾಲದಾಗಿದೆ.

ಈತನು ತನ್ನ ಪುಸ್ತಕದ ೨೪ ನೆಯ ಪುಟದಲ್ಲಿ—

ವೀರಶೈವ ಕವಿಗಳಲ್ಲಿ ಒಬ್ಬರು 'ಯಜ್ಞೋಪವೀತಂ' ಎಂಬ ಉಪನಿಷನ್ಮಂತ್ರಕ್ಕೆ ಲಿಂಗಪರವಾಗಿ ಅರ್ಥಮಾಡಿರುವರೆಂದು ಹೇಳಿ ಅವರು ಮಾಡಿರುವ ಅರ್ಥವನ್ನು ತೋರಿಸಿದ್ದಾನೆ. ಒಬ್ಬನೆಂದರೆ ಅವನು ಯಾವನು? ಅವನಿಗೆ ನಾಮಧೇಯವಿಲ್ಲವೇ? ಅವನು ಅನಾಮಧೇಯನಾದರೆ ಅಂಥ ಅನಾಮಧೇಯನು ಬರೆದ ಅರ್ಥವು ಅನಾಮಧೇಯವೇ ಎಂದು ಹೇಳಬೇಕಾಗುವುದು. ಶ್ರೀಕರಭಾಷ್ಯ-ಲಿಂಗಧಾರಣಚಂದ್ರಿಕಾ-ಕ್ರಿಯಾಸಾರ-ಸಿದ್ಧಾಂತಶಿಖಾಮಣಿ ಮೊದಲಾದ ಉದ್ದಾಮಗ್ರಂಥಗಳನ್ನು ರಚಿಸಿರುವ ಆಚಾರ್ಯರು 'ಯಜ್ಞೋಪವೀತಂ ಪರಮಂ ಪವಿತ್ರಂ' ಎಂಬ ಮಂತ್ರಕ್ಕೆ ಲಿಂಗಪರವಾಗಿ ಅರ್ಥವನ್ನು ಮಾಡಿರುವುದಿಲ್ಲ. ಆದರೆ ಪಾಣಿಮಂತ್ರವ್ಯಾಖ್ಯಾನಸಮಯದಲ್ಲಿ ಲಿಂಗವು ಯಜ್ಞೋಪವೀತದಂತೆ ಪವಿತ್ರವೆಂದು ಲಿಂಗಕ್ಕೆ ಯಜ್ಞೋಪವೀತದ ಸಾದೃಶ್ಯ

ವನ್ನು ಹೇಳಿರುತ್ತಾರೆ. ಉಪಮೇಯವಾದ ಲಿಂಗವು ಬೇರೆ; ಉಪಮಾನವಾದ ಯಜ್ಞೋಪವೀತವು ಬೇರೆ; ಪವಿತ್ರತಾಧರ್ಮವು ಎರಡಕ್ಕೂ ಇದೆ ಎಂದು ತಿಳಿದುಕೊಂಡೇ ಅವರು ಸಹಜವಾದ ವ್ಯಾಖ್ಯಾನವನ್ನು ಬರೆದಿರುತ್ತಾರೆ. ಇಂಥ ಪ್ರಾಮಾಣಿಕಪಂಡಿತರ ಅಭಿಪ್ರಾಯವನ್ನು ತಿಳಿಯದೆ ಹಾಗೂ ಪೂರ್ವಾಪರಮಂತ್ರಾರ್ಥವನ್ನು ಯೋಚಿಸದೆ ಧರ್ಮಶಾಸ್ತ್ರ ವಿರುದ್ಧವಾಗಿ ಬರೆದು ಉಬ್ಬಿರುವುದು ಮಬ್ಬುತನವಲ್ಲದೆ ಬೇರೆಯಲ್ಲ.

ಈತನು ೨೫ನೆಯ ಪುಟದಲ್ಲಿ—

ವೀರಶೈವೀಯಭಕ್ತಾನಾಂ ಶಿರೋಮುಂಡನಮುತ್ತಮಂ |
ಶಿರಃಕೇಶಸಮಾಪೂರ್ಣಮಥವರ್ತನಮಾಚರೇತ್ ||

ಎಂಬ ಶ್ಲೋಕವನ್ನು ಬರೆದಿದ್ದಾನೆ. ಇದು ಶವಾಗಮವಚನವಂತೆ! ಯಾವ ಶವಾಗಮವೋ ಬರೆದಿಲ್ಲ. ಇದು ಯಾವನೋ ಒಬ್ಬ ಶೂದ್ರನಿಂದ ರಚಿಸಲ್ಪಟ್ಟ ಅಬದ್ಧಶ್ಲೋಕವಲ್ಲದೆ ಆಗಮಶ್ಲೋಕವಲ್ಲ. ಈತನು ಉದಾಹರಿಸಿರುವ ಎಲ್ಲ ಶ್ಲೋಕಗಳೂ ಕಲ್ಪಿತಗಳಾಗಿವೆ. ಈತನು ಬರೆದಿರುವ ಶ್ಲೋಕಗಳನ್ನು ಈ ಪ್ರಪಂಚವು ಹುಟ್ಟಿದಂದಿನಿಂದ ಇಲ್ಲಿಯವರೆಗೂ ಯಾರೂ ನೋಡಿಲ್ಲ. ಮತ್ತು ಕೇಳಿಲ್ಲ. ಈತನ ಪ್ರತಿಯೊಂದು ಅಮಂಗಲ ಶ್ಲೋಕವನ್ನು ನೋಡಿದ ಕೂಡಲೆ ಪಂಡಿತರಾದವರು ಬಿದ್ದು ಬಿದ್ದು ನಗುವರು. ಇರಲಿ; ಈ ಘನಪಂಡಿತನು ಈ ಶ್ಲೋಕಕ್ಕೆ ವೀರಶೈವರೆಲ್ಲರಿಗೂ ಶಿರೋಮುಂಡನವು ಉತ್ತಮವೆಂದೂ, ಪೂರ್ಣಶಿಖೆಯನ್ನು ಧರಿಸುವುದು ಮಧ್ಯಮವೆಂದೂ ಅರ್ಥವನ್ನು ಬರೆದಿದ್ದಾನೆ. ಅಯ್ಯೋ! ಅರ್ಥವೇ! ಅಯ್ಯೋ ಅರ್ಥವೇ! ಅಬ್ಬಬ್ಬಾ! ಈತನು ಯಾವ ದೇಶದಲ್ಲಿ ಸಂಸ್ಕೃತವನ್ನೋದಿರುವನೋ ತಿಳಿಯದಾಗಿದೆ ಭಾರಿ ಅರ್ಥ! ಭಾರಿ ಅರ್ಥ!! ಇರಲಿ. ಲೋಕದಲ್ಲಿ ಶಿಖಾ-ಜಟೆಗಳು ವಿಧಿಗನುಸರಿಸಿ ಧರಿಸಲ್ಪಡುತ್ತವೆ. ಈತನು ಹೇಳಿರುವ ಈ ಪೂರ್ಣಶಿಖೆಯೆನ್ನುವದು ಎಲ್ಲಿ, ಯಾವ ವಿಧಿಯಲ್ಲಿ ಉಕ್ತವಾಗಿದೆಯೋ ಎನ್ನುವುದನ್ನು ಈತನು ಎಲ್ಲರ ತಿಳುವಳಿಕೆಯ ಬಗ್ಗೆ

ಬರೆದಿದ್ದರೆ ಚನ್ನಾಗಿತ್ತು. ಪೂರ್ಣಶಿಖೆಯನ್ನು ಕಲ್ಪಿಸುವುದು ಇಂದಿನ ವರೆಗೂ ಯಾವ ಋಷಿಗಳಿಗೂ ಶಾಸ್ತ್ರಕರ್ತೃವಾದ ಪರಮಾತ್ಮನಿಗೂ ಸಾಧ್ಯವಾಗಲಿಲ್ಲ. ಈಗ ಮಾತ್ರ ಈತನ ಮುಖದಿಂದ ಹೊರಬಿದ್ದಿದೆ. ಇದಕ್ಕೆ ತಕ್ಕ ವಿಧಿಯು ಈತನಕಾಲದಲ್ಲಿಯೇ ಹೊರಬಿದ್ದು ಈತನ ಮಂಗಲನಾಮವು ಜಗತ್ತಿನಲ್ಲಿ ಬೆಳಗಲೆಂದಾಶಿಸುತ್ತೇವೆ. ವೀರಶೈವ ಸಂಬಂಧಿಗಳಾದ ಭಕ್ತರೆಂದರೆ ಚತುರ್ಥವರ್ಣದವರಾದ ಶೂದ್ರರು. ಇವರಿಗೆ ಮುಂಡನವು ಶಾಸ್ತ್ರವಿಹಿತವಾಗಿದೆ.

ವೇದಾಂತಸಾರವೀರಶೈವಚಿಂತಾಮಣಿಯಲ್ಲಿ ಉದಾಹೃತವಾಗಿರುವ—

ಜಿನ್ನಾನಾಮಪಿ ಬುದ್ಧಾನಾಮಿತರೇಷಾಂ ಚ ಪಾರ್ವತಿ ।
ಲುಂತನಂ ಕೃಂತನಂ ಪ್ರಾಪ್ತಂ ಶೂದ್ರಾಣಾಂ ಸರ್ವದಾ ತಥಾ ॥
ವಿತೇಷಾಂ ವೇದಬಾಹ್ಯಾನಾಂ ಜಟಾಭೂತಿರ್ನವಿದ್ಯತೇ ॥

ಎಂಬ ವೀರಾಗಮಶ್ಲೋಕವು ಕೇಶಗಳ ಲುಂತನ-ಕೃಂತನ (ಛೇದನ) ವೆಂಬ ಮುಂಡನವನ್ನು ವೇದಬಾಹ್ಯರಾದ ಜಿನ್ನ, ಬುದ್ಧ, ಶೂದ್ರಾದಿ ಗಳಿಗೆ ಬೋಧಿಸುವದಲ್ಲದೆ ಇತರರಿಗೆ ಬೋಧಿಸುವುದಿಲ್ಲ. ಶಿವಾಗಮಗಳು ವೀರಶೈವಮತೀಯರೆಲ್ಲರಿಗೂ ಮುಂಡನವನ್ನು ಹೇಳದೆ ಚತುರ್ಥವರ್ಣದ ಶೂದ್ರನಿಗೂ ಚತುರ್ಥಾಶ್ರಮದ ಸನ್ಯಾಸಿಗೂ ಮಾತ್ರ ಮುಂಡನವನ್ನು ಹೇಳುವುವು. ಈ ರೀತಿಯಾಗಿರುವ ಶಾಸ್ತ್ರರಹಸ್ಯವನ್ನು ತಿಳಿದು ಈ ಮುಂಡಿಯು ಧನ್ಯನಾಗಲಿ.

ಈತನು ೨೬ ನೆಯ ಪುಟದಲ್ಲಿ—

ಯದೀಚ್ಛಾ ಕುಸುಮಂ ಧಾರ್ಯಂ ಜಟೋಷ್ಣೀಷಾದಿಭೂಷಣಂ ।
ದೀಕ್ಷಿತೋ ವೀರಶೈವಾಯಾಂ ದೀಕ್ಷಾಯಾಂ ಧೃತಲಿಂಗಕಃ ॥

ಎಂಬ ಪಾರಮೇಶ್ವರಾಗಮದ ಪಂಚಮಪಟಲದಲ್ಲಿರುವ ಶ್ಲೋಕವನ್ನು ಉದಾಹರಿಸಿದ್ದಾನೆ. ಈತನು ಇಲ್ಲಿಯವರೆಗೆ ಉದಾಹರಿಸಿದ ಅನೇಕ

ಶ್ಲೋಕಗಳಲ್ಲಿ ಇದೊಂದು ಶ್ಲೋಕವು ಮಾತ್ರ ನಿಜವಾದ ಆಗಮದ ಶ್ಲೋಕವಾಗಿದೆ. ಈ ಬಗ್ಗೆ ನಾವು ಈತನಿಗೆ ಅನೇಕ ಧನ್ಯವಾದಗಳನ್ನು ಸಮರ್ಪಿಸಬೇಕಾಗಿದೆ. ನಿಜವಿದ್ದುದನ್ನು ಎಲ್ಲರೂ ಒಪ್ಪಲೇಬೇಕಾಗುವದು. ಇರಲಿ; ಈ ಶ್ಲೋಕದಲ್ಲಿ ವೀರಶೈವನಾದವನು ಜಟೆಯನ್ನು ಧರಿಸಬೇಕೆಂದಿದೆಯಲ್ಲದೆ, ತಲೆಯನ್ನೆಲ್ಲಾ ಬೋಳಿಸಿಕೊಂಡು ಮುಂಡಿಯಾಗಬೇಕೆಂದು ಹೇಳಿಲ್ಲ. ಇದರಿಂದ ಈ ಮುಂಡಿಯು ಸಿದ್ಧಾಂತಕ್ಕೆ ಯಾವ ಬಲವು ಬಂದಿತೋ ತಿಳಿಯದಾಗಿದೆ. ಈ ಶ್ಲೋಕವು ಈತನ ಅಭಿಪ್ರಾಯಕ್ಕೆ ವಿರುದ್ಧವಾಗಿರುವುದಲ್ಲದೆ ಅನುಕೂಲವಿಲ್ಲ. ಜಟಾಧಾರಣವನ್ನು ಯಾರೂ ನಿಷೇಧಿಸುವುದಿಲ್ಲವೆನ್ನುವುದು ಈತನಿಗೂ ತಿಳಿದೇ ಆದೆ. ಅರ್ಥವಾಗಲಿ ಅಥವಾ ಆಗದಿರಲಿ, ಜನರ ಕಣ್ಣಿಗೆ ಬಹಳ ಶ್ಲೋಕಗಳನ್ನು ತೆಗೆದುಕೊಂಡಿದ್ದೇನೆಂದು ತೋರಿಸುವುದಕ್ಕೋಸ್ಕರ ಈತನು ಈ ರೀತಿ ಬರೆದಿದ್ದಾನಲ್ಲದೆ ಬೇರೆಯಿಲ್ಲ. ಕೈಲಾಗದವರ ಕರ್ತವ್ಯವು ಇದೇ ಅಲ್ಲವೇ ?

ಈತನು ೨೬ನೆಯ ಪುಟದಲ್ಲಿ—

> ಋಷಿಗೋತ್ರೋದ್ಭವಾನಾಂ ಚ ಶಿಖಾಏವ ಪ್ರಕೀರ್ತಿತಾಃ |
> ಗಣಗೋತ್ರೋದ್ಭವಾನಾಂ ತು ಜಟಾಏವ ಶುಭಾವಹಾಃ ||

ಎಂಬ ಶ್ಲೋಕವನ್ನು ಬರೆದಿದ್ದಾನೆ. ಇದು ವಾತುಲಾಗಮಶ್ಲೋಕವಂತೆ! ಇದು ಯಾವ ವಾತುಲಾಗಮಶ್ಲೋಕವೋ ತಿಳಿಯದಾಗಿದೆ. ಈಗ ಪ್ರಿಂಟಾಗಿರುವ ವಾತುಲಾಗಮದಲ್ಲಂತೂ ಪಂಜು ಹಚ್ಚಿ ಹುಡುಕಿದರೂ ಶಿಗುವಂತಿಲ್ಲ. ಇರಲಿ; ಈ ಶ್ಲೋಕಕ್ಕೆ ಋಷಿಗೋತ್ರೋದ್ಭವರು ಶಿಖೆಯನ್ನು ಧರಿಸಬೇಕೆಂದೂ, ಗಣಗೋತ್ರೋದ್ಭವರು ಜಟೆಯನ್ನು ಧರಿಸಬೇಕೆಂದೂ ಅರ್ಥವಾಗುವುದು. ಆದರೆ ಈ ಶ್ಲೋಕದಿಂದ ಮುಂಡನವಾದಿಯಾದ ಈ ಮುಂಡಿಗೆ ಯಾವ ಪ್ರಯೋಜನವಾಯಿತೋ ತಿಳಿಯಲಿಲ್ಲ. ಕೇವಲ ಮುಂಡನವನ್ನೇ ಬಲವಾಗಿ ಸಾಧಿಸುವ ಈತನ ಮುಂಡ

ನತತ್ತ್ವಕ್ಕೆ ಈ ಶ್ಲೋಕವು ಬಾಧಕವಾಗಿರುವುದಲ್ಲದೆ ಸಾಧಕವಾಗಿರು ವುದಿಲ್ಲವೆನ್ನುವುದು ಚಿಕ್ಕಮಕ್ಕಳಿಗೂ ಸಹ ತಿಳಿಯುವಂತಿದ್ದರೂ ಸುಮ್ಮನೆ ಚಟಕ್ಕಾಗಿ ಬರೆದಂತೆ ತೋರುತ್ತದೆ.

ಈತನು ಇದೇ ಪುಟದಲ್ಲಿ—

ಶೈವಾನಾಂ ಬ್ರಾಹ್ಮಣಾದೀನಾಂ ಶಿಖಾ ಏವ ಪ್ರಕೀರ್ತಿತಾಃ |
ಇತರೇಷಾಂ ಮಹಾದೇವಿ ಜಟಾಧಾರಣಮುಂಡನೇ ||

ಎಂಬೀಶ್ಲೋಕವನ್ನು ಬರೆದಿದ್ದಾನೆ.

ಇದು ಮಕುಟಾಗಮಶ್ಲೋಕವಂತೆ! ಈ ಆಗಮವು ಅನೇಕ ಲೈಬ್ರರಿಗಳಲ್ಲಿ ದೊರೆಯುತ್ತದೆ. ಈತನು ಈ ಶ್ಲೋಕವನ್ನು ಆ ಆಗಮದಲ್ಲಿ ತೋರಿಸಬಲ್ಲನೋ? ಸುಮ್ಮನೆ ಜನರನ್ನು ಭ್ರಾಂತರನ್ನಾಗಿ ಮಾಡುವುದಕ್ಕಾಗಿ ಆಗಮಗಳ ಹೆಸರುಗಳನ್ನು ತೆಗೆದುಕೊಂಡು ಬರೆದಿರು ವುದು ಧೂರ್ತತನವೂ ವಂಚಕತನವೂ ಆಗಿದೆಯಲ್ಲದೆ ಬೇರೆಯಿಲ್ಲ. ಕಲಿಕಾಲದಲ್ಲಿ ಇಂಥವರ ಮಾತುಗಳಿಗೇ ಬೆಲೆಯಿದ್ದಂತೆ ತೋರುತ್ತದೆ. ಕಾಲಾಯ ತಸ್ಮೈ ನಮಃ! ಇರಲಿ; ಈ ಶ್ಲೋಕಾರ್ಥವನ್ನು ಸ್ವಲ್ಪ ವಿಮರ್ಶಿಸೋಣ! ಶೈವರಾದ ಬ್ರಾಹ್ಮಣಾದಿಗಳಿಗೆ ಶಿಖೆಯೂ ಇತರರಿಗೆ ಜಟಾಮುಂಡನಗಳೂ ಉಂಟೆಂದು ಈ ಶ್ಲೋಕಾಭಿಪ್ರಾಯವಿದೆ. 'ಶೈವಾನಾಂ ಬ್ರಾಹ್ಮಣಾದೀನಾಂ' ಎಂಬೀ ಪದಗಳಿಂದ ವೀರಶೈವ ಬ್ರಾಹ್ಮಣಾದಿಗಳಿಗೂ ಶಿಖೆಯು ಸಿದ್ಧವೇ ಆಗುತ್ತದೆ. ಯಾಕಂದರೆ— ವೀರಶೈವವು ಶೈವಭೇದವಾಗಿರುವುದಷ್ಟೆ!

**ಶೈವಂ ಚತುರ್ವಿಧಂ ಜ್ಞೇಯಂ ಸಮಾಸಾಚ್ಛೃಣು ಷಣ್ಮುಖ|**
**ಸಾಮಾನ್ಯಂ ಮಿಶ್ರಕಂ ಚೈವ ಶುದ್ಧಂ ವೀರಂ ಯಥಾಕ್ರಮಂ ||**

ಎಂಬ ವಾತುಲಶುದ್ಧಾಖ್ಯತಂತ್ರವು ಸಾಮಾನ್ಯಶೈವ, ಮಿಶ್ರಶೈವ, ಶುದ್ಧ ಶೈವ, ವೀರಶೈವವೆಂದು ಶೈವದಲ್ಲಿ ನಾಲ್ಕು ಭೇದವೆಂಬುದಾಗಿ ಸಾರು ತ್ತದೆ. ಅಂದಮೇಲೆ ವೀರಶೈವನು ಶೈವಕ್ಕೆ ಭಿನ್ನನೆನ್ನಲಿಕ್ಕೆ ಬರುವುದಿಲ್ಲ.

ಇಲ್ಲಿ ' ಇತರೇಷಾಂ ' ಎಂಬುದರಿಂದ ಶೈವಕ್ಕೆ ಅನ್ಯರಾದ ವೈಷ್ಣವಾದಿಗಳಿಗೆ ಎಂದು ತಿಳಿಯಬೇಕಾಗುತ್ತದೆ. ಈತನ ಮಕುಟಾಗಮ ಪ್ರಮಾಣವನ್ನನುಸರಿಸಿದರೆ ಶೈವಭಿನ್ನರಾದ ವೈಷ್ಣವಾದಿಗಳಿಗೆ ಶಿಖೆಯು ನಿಷಿದ್ಧವಾಗಿ ಜಟಾಮುಂಡನಗಳೇ ಸಿದ್ಧವಾಗುವುವು. ವೈಷ್ಣವಾದಿಗಳು ಈ ಮಾತನ್ನು ಒಪ್ಪುವರೋ? ಅವರಲ್ಲಿ ಈ ವರ್ತನವಿಲ್ಲದಿದ್ದರೆ ಈತನ ಶ್ಲೋಕಕ್ಕೆ ಯಾವ ಆಗಮದ ಶ್ಲೋಕವೆನ್ನಬೇಕು? ಗರ್ದಭಾಗಮದ ಶ್ಲೋಕವೆಂದರೆ ಒಪ್ಪಬಹುದಲ್ಲವೇ ? ಇರಲಿ.

ಈ ಮುಂಡಿಯು ಇನ್ನುಮುಂದೆ ಶಿಖಾವಾದಿಗಳು ಹೇಳತಕ್ಕ ಧರ್ಮಶಾಸ್ತ್ರ ಶ್ಲೋಕಗಳಿಗೆ ಅಪಾರ್ಥವನ್ನು ಕಲ್ಪಿಸಲುದ್ಯುಕ್ತನಾಗಿ ತನ್ನ ಮುಸಲಾಗ್ರಬುದ್ಧಿಯ ಪ್ರಭಾವವನ್ನು ಜಗತ್ತಿನಲ್ಲೆಲ್ಲಾ ತೋರ್ಪಡಿಸಿದ್ದಾನೆ. ಇನ್ನು ಮುಂದೆ ಈತನ ಬರವಣಿಗೆಯನ್ನು ಪರೀಕ್ಷಿಸೋಣ! ಈತನು ೨೭ನೆಯ ಪುಟದಲ್ಲಿ—

ಬ್ರಾಹ್ಮಣಾ ವೀರಶೈವಸ್ಥಾಶ್ಶಿಖಾಯಜ್ಞೋಪವೀತಿನಃ |
ಲಿಂಗರುದ್ರಾಕ್ಷಭಸ್ಮಾಂಕಾ ಬ್ರಹ್ಮಕರ್ಮಸಮಾಶ್ರಿತಾಃ ||

ಎಂದು ಪಾರಮೇಶ್ವರಾಗಮದ ೧೭ನೆಯ ಪಟಲದಲ್ಲಿ ವೀರಶೈವಬ್ರಾಹ್ಮಣರಿಗೆ ಶಿಖಾಸೂತ್ರಧಾರಣವನ್ನು ಸ್ಪಷ್ಟವಾಗಿ ಬೋಧಿಸುವ ಈ ಶ್ಲೋಕವು ಶಿಖಾಸೂತ್ರಧಾರಣವನ್ನು ಬೋಧಿಸುವದಿಲ್ಲವೆಂದು ಸಾಧಿಸುತ್ತ ೧೧ ಪುಟಗಳವರೆಗೆ ನಿರರ್ಥಕವಾಗಿ ಗೊಡ್ಡುಹರಟೆಯನ್ನು ಬರೆದಿರುತ್ತಾನೆ. " ಬ್ರಾಹ್ಮಣಾ ವೀರಶೈವಸ್ಥಾಃ " ಇತ್ಯಾದಿ ವಾಕ್ಯಗಳು ವೀರಶೈವ ಬ್ರಾಹ್ಮಣಲಕ್ಷಣಬೋಧಕಗಳಲ್ಲವಂತೆ! ಶುದ್ಧಶೈವಲಕ್ಷಣಬೋಧಕಗಳಂತೆ! ಈ ವಿಷಯದಲ್ಲಿ—

ಶಿವಾಚಾರರತಾ ನಿತ್ಯಂ ಲಿಂಗಪೂಜಾಪರಾಯಣಾಃ |
ಶಿವಾರಾಧ್ಯಾಸ್ಸದಾ ದೇವಿ ಮಮಾತಿಪ್ರಿಯಕಾರಿಣಃ |
ಶುದ್ಧಶೈವಾಸ್ಸಮಾಖ್ಯಾತಾ ಗೃಹಸ್ಥಾ ಗೃಹಿಣೀಯುತಾಃ ||

ಎಂಬ ಮುಂದಿನ ವಾಕ್ಯಗಳು ಸಾಕ್ಷಿಯಾಗಿವೆಯಂತೆ! ನೋಡಿದಿರಾ, ಈ ವಿಕಟಪಾಂಡಿತ್ಯದ ಪ್ರಭಾವವನ್ನು? ಪಾರ್ವತೀದೇವಿಯು ಶಂಕರನನ್ನು ಕುರಿತು—"ವದ ಲೋಕೋಪಕಾರಾಯ ವೀರಶೈವೇ ವಿಶೇಷಕಂ" ವೀರಶೈವಮತದಲ್ಲಿರುವ ವಿಶೇಷವನ್ನು (ಭೇದವನ್ನು) ಹೇಳೆಂದು ಪ್ರಶ್ನೆ ಮಾಡಲು, ಆದಕ್ಕೆ ಶಂಕರನು—

ಶುದ್ಧಶೈವಂ ಮಿಶ್ರಶೈವಂ ಮಾರ್ಗಶೈವಂ ತೃತೀಯಕಂ ।
ಚತುರ್ಥಂ ವೀರಶೈವಂ ಚ ಪಂಚಮೋವ್ಯಾಂತರಸ್ತಥಾ ॥

ಎಂದು ವೀರಶೈವವು ಶುದ್ಧಶೈವ, ಮಿಶ್ರಶೈವ, ಮಾರ್ಗಶೈವ, ವೀರಶೈವ, ಅಂತರಶೈವವೆಂದು ೫ ಪ್ರಕಾರವಾಗಿರುವುದೆಂದು ಉತ್ತರವನ್ನು ಹೇಳಿ, ಈ ವೀರಶೈವಾಂತಃಪಾತಿಶುದ್ಧಶೈವಾದಿಪಂಚವಿಧವಾದ ವೀರಶೈವವನ್ನು ಅನುಸರಿಸಿದ ವೀರಶೈವರು—

ತತ್ರತತ್ರ ವಿಭೇದೇನ ಜಾತಿಭೇದೇನ ಕೇನಚಿತ್ ।
ವರ್ತಂತೇ ಲಿಂಗಿನೋ ದೇವಿ ಜಾತಿಕರ್ಮಸಮಾಶ್ರಿತಾಃ ॥

ಅಲ್ಲಲ್ಲಿ (ಆಯಾ ದೇಶದಲ್ಲಿ) ಕೆಲವರು ವಿಶೇಷಭೇದದಿಂದಲೂ, (ಆಶ್ರಮ ಮತ್ತು ಅನ್ನಪಾನಾದಿವ್ಯವಹಾರ ಭೇದದಿಂದಲೂ) ಹಾಗೂ ಜಾತಿಗಳ (ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರಾದಿಜಾತಿಗಳ) ಭೇದದಿಂದಲೂ ಆಯಾಯ ಜಾತಿಗಳಿಗೆ ವಿಹಿತಗಳಾದ ಕರ್ಮಗಳನ್ನು ಚೆನ್ನಾಗಿ ಆಶ್ರಯಿಸಿದ (ಆಚರಿಸುವ) ವರಾಗಿ ಇರುತ್ತಾರೆ, ಎಂದು ಸಾಮಾನ್ಯವಾಗಿ ೫ ಪ್ರಕಾರದ ವೀರಶೈವರ ನಡತೆಯನ್ನು ಹೇಳಿ, ಅನಂತರ ವೀರಶೈವಾಂತಃಪಾತಿಗಳಾದ ಶುದ್ಧಶೈವರೆಂಬ ವೀರಶೈವರನ್ನೂ, ಬಳಿಕ ವೀರಶೈವಾಂತಃಪಾತಿಗಳಾದ ಮಿಶ್ರಶೈವರೆಂಬ ವೀರಶೈವರನ್ನೂ, ಇದರಂತೆ ಉದ್ದೇಶಕ್ರಮದಿಂದ ನಿರೂಪಿಸಿರುವನು. ಆದರಲ್ಲಿ ಪ್ರಾಥಮಿಕವಾದ ಶುದ್ಧಶೈವವನ್ನು ಹೊಂದಿದ ಶುದ್ಧಶೈವನಾಮಭೂಷಿತ ವೀರಶೈವರಾರೆಂದರೆ—

ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ ।
ಲಿಂಗರುದ್ರಾಕ್ಷ ಭಸ್ಮಾಂಕಾ ಬ್ರಹ್ಮಕರ್ಮಸಮಾಶ್ರಿತಾಃ ॥
ಶಿವಾಚಾರರತಾನಿತ್ಯಂ ಲಿಂಗಪೂಜಾಪರಾಯಣಾಃ ।
ಶಿವಾರಾಧ್ಯಾಃ ಸದಾ ದೇವಿ ಮಮಾತಿಪ್ರಿಯಕಾರಿಣಃ ॥
ಶುದ್ಧಶೈವಾಃ ಸಮಾಖ್ಯಾತಾ ಗೃಹಸ್ಥಾಗೃಹಿಣೀಯುತಾಃ ॥

ಎಂಬೀ ಎರಡುಶ್ಲೋಕಗಳಿಂದ ಶಿಖಾಯಜ್ಞೋಪವೀತಲಿಂಗಭಸ್ಮ ರುದ್ರಾಕ್ಷಧಾರಣಾದಿಗಳುಳ್ಳವರೂ, ವೈದಿಕಕರ್ಮಗಳನ್ನು ಆಶ್ರಯಿಸಿದವರೂ, ಲಿಂಗಪೂಜಾಪರಾಯಣರೂ, ಶಿವಾಚಾರಸಂಪನ್ನರೂ, ನನಗತಿಪ್ರಿಯಕಾರಿಗಳೂ, ಲೋಕದಲ್ಲಿ ಶಿವಾರಾಧ್ಯರೆನಿಸುವವರೂ ಯಾರುಂಟೋ ಅವರೇ ವೀರಶೈವಮತಸ್ಥರಾದ ಶುದ್ಧಶೈವರು ಎಂಬುದೇ ಶಂಕರನ ಸಿದ್ಧಾಂತವು. ಇಲ್ಲಿ ಶಿವಾರಾಧ್ಯರೆಂದರೆ ಗುರುಸ್ಥಲದವರು. "ಗುರುಸ್ಥಲಸಮಾಖ್ಯಾತಾ ಗುರವಸ್ಸರ್ವಲಿಂಗಿನಾಂ" ಎಂಬ ವೀರಶೈವಸದಾಚಾರಸಂಗ್ರಹದ ವಾಕ್ಯದಂತೆ ಇವರು ಗುರುಗಳಾಗುವರು. "ವರ್ಣಾನಾಂ ಬ್ರಾಹ್ಮಣೋ ಗುರುಃ" ಎಂಬಂತೆ ಎಲ್ಲಾ ವರ್ಣದವರಿಗೂ ಬ್ರಾಹ್ಮಣರೇ ಗುರುಗಳು. ಶುದ್ಧಶೈವರೇ ಬ್ರಾಹ್ಮಣರು. ಇವರೇ ಶಿವಾರಾಧ್ಯರು. ವೀರಶೈವಮತಸ್ಥರಾದ ಗುರುಸ್ಥಲದವರಿಗೆ ಶಿವಾರಾಧ್ಯ, ಆರಾಧ್ಯ, ಆಚಾರ್ಯ, ಶಿವಾಚಾರ್ಯ, ವೀರಮಾಹೇಶ್ವರ ಇತ್ಯಾದಿ ನಾಮಗಳು ಶಾಸ್ತ್ರಪ್ರಸಿದ್ಧಗಳಾಗಿವೆ. ಇರಲಿ; ಪ್ರಕೃತದಲ್ಲಿ ಶುದ್ಧಶೈವರೆನ್ನುವವರು ವೀರಶೈವಮತಸ್ಥರಾದ ಬ್ರಾಹ್ಮಣರು ಎಂದು ಶಂಕರನು ಸ್ಪಷ್ಟವಾಗಿ ನಿರೂಪಿಸಿದ್ದರೂ, ಈ ಶುದ್ಧಶೈವರು ವೀರಶೈವ ಬ್ರಾಹ್ಮಣರಲ್ಲವೆನ್ನುವ ಈ ಮುಂಡಿತಮುಂಡನ ಧೈರ್ಯಕ್ಕೆ ಎಣೆಯೇ ಇಲ್ಲವೆಂದು ಹೇಳಬೇಕಾಗುತ್ತದೆ. ವೀರಶೈವಾಂತಃಪಾತಿಗಳಾದ ಶುದ್ಧಶೈವರು (ಆರಾಧ್ಯರು) ವೀರಶೈವರಿಗೆ ಭಿನ್ನರಾಗಿಲ್ಲ. ವೀರಶೈವತ್ವವು ಸಾಮಾನ್ಯಧರ್ಮವು. ಶುದ್ಧಶೈವತ್ವ-ಮಿಶ್ರಶೈವತ್ವ-ಮಾರ್ಗಶೈವತ್ವ-ವೀರ

ಶೈವತ್ವ (ನಿರಾಭಾರಿವೀರಶೈವತ್ವ) ಅಂತರಶೈವತ್ವಗಳು-ವಿಶೇಷಧರ್ಮಗಳು. ಸಾಮಾನ್ಯಧರ್ಮವು ವ್ಯಾಪಕವು. ವಿಶೇಷಧರ್ಮವು ವ್ಯಾಪ್ಯವು. ವ್ಯಾಪ್ಯ ವಿದ್ದಲ್ಲಿ ವ್ಯಾಪಕವಿರುವದು ಸರ್ವಾನುಭವಸಿದ್ಧವೇ ಆಗಿದೆ. ಧೂಮವಿದ್ದಲ್ಲಿ ವಹ್ನಿಯಿರುವದೂ, ನೀಲಘಟತ್ವವಿದ್ದಲ್ಲಿ ಘಟತ್ವವಿರುವದೂ ಲೋಕಾನು ಭವಸಿದ್ಧವದೆಯಲ್ಲವೇ? ಹೀಗಿದ್ದರೂ ಈ ಮುಂಡಿಯು ತನ್ನ ಪುಸ್ತಕದ ೨೮ ನೆಯ ಪುಟದಲ್ಲಿ—

"ಶುದ್ಧಶೈವಮತವು ವೀರಶೈವಮತಕ್ಕೆ ಭಿನ್ನವಾಗಿಲ್ಲವೆಂದು ಹೇಳಲಿಕ್ಕೆ ಅವ ಕಾಶವಿಲ್ಲ. ಯಾಕೆಂದರೆ—ಅದೇ ಪಾರಮೇಶ್ವರಾಗಮದ ೧೭ನೆಯ ಪಟಲವು "ಶುದ್ಧಶೈವಂ ಮಿಶ್ರಶೈವಂ ಮಾರ್ಗಶೈವಂ ತೃತೀಯಕಂ | ಚತುರ್ಥಂ ವೀರಶೈವಂಚ ಪಂಚಮೋऽವಾಂತರಸ್ತಥಾ || ಎಂಬ ವಚನದಿಂದ ಶುದ್ಧಶೈವಮತವು ವೀರಶೈವಮತಕ್ಕಿಂತಲೂ ಭಿನ್ನವಾಗಿರುವದಾಗಿ ಸ್ಪಷ್ಟವಾಗಿ ನುಡಿಯುತ್ತದೆ ಆದ್ದರಿಂದ ಶುದ್ಧಶೈವ ಮತವು ವೀರಶೈವಮತಸ್ವರೂಪವೆನಿಸುವದಿಲ್ಲ"

ಎಂದು ಬರೆದಿರುತ್ತಾನೆ. ಈತನ ವಿಚಾರಸರಣಿಯನ್ನು ಸ್ವಲ್ಪ ವಿಮರ್ಶಿ ಸೋಣ!

ಶ್ರೀಶಂಕರನು ವಿಭಾಗವಾಕ್ಯದಲ್ಲಿರುವ ವೀರಶೈವಶಬ್ದಕ್ಕೆ ಸ್ಪಷ್ಟ ವಾಗಿ ಅರ್ಥವನ್ನು ತೋರಿಸಿದ್ದರೂ ಈತನು ವಕ್ರಮಾರ್ಗವನ್ನು ಹಿಡಿದು ಮನಸ್ಸಿಗೆ ಬಂದಂತೆ ಅಪಾರ್ಥವನ್ನು ಕಲ್ಪಿಸಿರುವದನ್ನು ನೋಡಿದರೆ ಆಶ್ಚರ್ಯವೆನಿಸುತ್ತದೆ. ಪಾಪದ ಭೀತಿಯು ಕೂಡ ಇಲ್ಲದೆ ನಿರತಿಶಯ ಸರ್ವಜ್ಞತ್ವಾದಿಗುಣಗಣಭರಿತನಾದ ಪರಮಾತ್ಮನ ವಾಕ್ಯಗಳಿಗೇನೇ ಪಕ್ಷಾಂಧತೆಯಿಂದ ಈ ರೀತಿ ಅಪಾರ್ಥವನ್ನು ಕಲ್ಪಿಸುವವರು ಇನ್ನುಳಿದ ಗ್ರಂಥಗಳ ವಾಕ್ಯಗಳಿಗೆ ಅಪಾರ್ಥ ಕಲ್ಪಿಸುವುದನ್ನು ಬಿಟ್ಟಾರೆ? ಶಂಕರನು—

ತತ್ರತತ್ರ ವಿಭೇದೇನ ಜಾತಿಭೇದೇನ ಕೇನಚಿತ್ |
ವರ್ತಂತೇ ಲಿಂಗಿನೋ ದೇವಿ ಜಾತಿಕರ್ಮಸಮಾಶ್ರಿತಾಃ ||

ಎಂಬ ತನ್ನ ಪ್ರತಿಜ್ಞಾವಾಕ್ಯಕ್ಕನುಗುಣವಾಗಿ ಜಾತಿಭೇದಗಳಿಂದ ಆಯಾಯ ವೀರಶೈವಲಕ್ಷಣಗಳನ್ನು ತೋರಿಸಿರುವನು. 'ಬ್ರಾಹ್ಮಣಾ ವೀರಶೈವಸ್ಥಾಃ' ಇತ್ಯಾದಿ ಎರಡು ಶ್ಲೋಕಗಳಿಂದ ವೀರಶೈವಮತಸ್ಥರಾದ ಶುದ್ಧಶೈವರ(ಆರಾಧ್ಯರ) ಬ್ರಾಹ್ಮಣಜಾತಿಭೇದವನ್ನೂ, ಅವರ ಶಿಖಾಸೂತ್ರಾದಿಧಾರಣಧರ್ಮಭೇದವನ್ನೂ, "ಮಿಶ್ರಶೈವಾ ಮಹಾದೇವಿ ಕ್ಷತ್ರಿಯಾ ವೈಶ್ಯಶೂದ್ರಜಾಃ ||" ಇತ್ಯಾದಿವಚನಗಳಿಂದ ಕ್ಷತ್ರಿಯ ವೈಶ್ಯ ಶೂದ್ರಜಾತಿಗಳನ್ನೂ, ಅವರ ಕರ್ಮಗಳನ್ನೂ, "ಮಾರ್ಗಶೈವಾಃ" ಇತ್ಯಾದಿ "ಬಹವೋ ಮಾರ್ಗಶೈವಾಶ್ಚ ವೀರಶೈವಾನುವರ್ತಿನಃ" ಇತ್ಯಂತವಾಗಿ ಮಾರ್ಗಶೈವರೆಂಬ ವೀರಶೈವಕ್ಷತ್ರಿಯರಾಜರನ್ನೂ, ಅವರ ಸರ್ವವರ್ಣಪರಿಪಾಲನಾದಿಧರ್ಮಗಳನ್ನೂ ಹೇಳಿರುವುದರಿಂದ "ಶೈವಭೇದೇಷು ಚಾನ್ಯೇಷು ವೀರಶೈವೋತ್ತಮೋತ್ತಮಃ" ಎಂಬುದಕ್ಕೆ ಶೈವಭೇದಗಳಲ್ಲಿಯೂ ವೀರಶೈವಭೇದಗಳಲ್ಲಿಯೂ ಎಂದು ಅರ್ಥವನ್ನು ಮಾಡಬೇಕು. ಯಾಕಂದರೆ— ಹಿಂದೆ ಶೈವಭೇದಗಳೂ ವೀರಶೈವಭೇದಗಳೂ ಉಕ್ತಗಳಾಗಿರುವವು. ಆದುದರಿಂದ ಹಿಂದೆ ಹೇಳಿದ ಶೈವಭೇದ ಹಾಗೂ ಶುದ್ಧಶೈವಾದಿ ವೀರಶೈವಭೇದಗಳಲ್ಲಿ ವೀರಶೈವವೆಂಬ ಅತ್ಯುತ್ತಮವಾದ ಧರ್ಮವು (ನಿರಾಭಾರಿಯಧರ್ಮವು) ಇರುತ್ತದೆಂದು ಸಂಕ್ಷಿಪ್ತವಾಗಿ ಹೇಳಿ, ಮುಂದೆ ಈ ವೀರಶೈವಧರ್ಮವನ್ನು ಈ ಧರ್ಮಯುತರಾದ ನಿರಾಭಾರಿವೀರಶೈವರನ್ನೂ—

> ಕಿಮತ್ರ ಬಹುನೋಕ್ತೇನ ತುರ್ಯವೀರೋತ್ತಮೋತ್ತಮಾಃ|
> ವಿರಕ್ತಾಶ್ಚ ವಿರಾಗಾಶ್ಚ ತೇ ಸರ್ವೇ ವೀರಶೈವಿನಃ ||

ಎಂಬ ಶ್ಲೋಕದಿಂದ ವೀರಶೈವಾಂತರ್ಗತವಾದ ಚತುರ್ಥವೀರಶೈವವಾವುದೆನ್ನುವದನ್ನು ಸ್ಪಷ್ಟೀಕರಿಸಿರುವನು. ಹೀಗೆ ಶಂಕರನು ಸ್ಪಷ್ಟವಾಗಿ ನುಡಿದಿದ್ದರೂ ಇದಕ್ಕೆ ವಿರುದ್ಧವಾಗಿ ಬರೆದಿರುವುದು ಪಕ್ಷಾಂಧತೆಯ ಪ್ರಭಾವವಲ್ಲದೆ ಬೇರೊಂದಲ್ಲವೆನ್ನುವುದು ಮೂರ್ಖರಿಗೂ ಸಹ ತಿಳಿಯುವಂತಿದೆ.

ಈತನು 'ವೀರಶೈವಸ್ಥಾಃ' ಎಂಬ ಪದಕ್ಕೆ ತನ್ನ ವಿಕಟ ಬುದ್ಧಿಯ ಪ್ರಭಾವದಿಂದ 'ವೀರಶೈವಾ ಇವ ತಿಷ್ಠಂತೀತಿ ವೀರಶೈವಸ್ಥಾಃ' ಎಂದು ವಿಗ್ರಹಮಾಡಿರುವದನ್ನು ನೋಡಿದರೆ ನಗೆ ಬರುತ್ತದೆ. 'ಬಹವೋ ಮಾರ್ಗಶೈವಾಶ್ಚ ವೀರಶೈವಾನುವರ್ತಿನಃ' ಎಂಬೀ ಶ್ಲೋಕದಲ್ಲಿರುವ 'ವೀರಶೈವಾನುವರ್ತಿನಃ' ಎಂಬ ಪದಕ್ಕೆ ಈತನು ಹೇಗೆ ಸಮಾಸವನ್ನು ಮಾಡುವನೋ ತಿಳಿಯದಾಗಿದೆ. 'ವೀರಶೈವೇ ತಿಷ್ಠಂತೀತಿ ವೀರಶೈವಸ್ಥಾಃ' ಎಂದು ವಿಗ್ರಹವನ್ನು ಮಾಡಿ ವೀರಶೈವಮತದಲ್ಲಿರುವಂಥವರೆಂದು ಅರ್ಥಮಾಡಿದರೆ 'ಶುದ್ಧಶೈವಾಸ್ಸಮಾಖ್ಯಾತಾಃ' ಎಂಬ ವಾಕ್ಯವು ಪ್ರತಿಬಂಧಿಸುತ್ತದಂತೆ! ಶುದ್ಧಶೈವರು ವೀರಶೈವರಲ್ಲಿರುವುದಿಲ್ಲವಂತೆ! ನೋಡಿದಿರಾ, ಈತನ ವಿಕಟವಿದ್ವತ್ತೆಯನ್ನು? ಪರಶಿವನು ಶುದ್ಧಶೈವರು ವೀರಶೈವಮತಸ್ಥರೆಂದು ಸ್ಪಷ್ಟವಾಗಿ ನುಡಿದಿದ್ದಾನೆ. ಈತನು ವೀರಶೈವಮತಸ್ಥರಲ್ಲವೆನ್ನುತ್ತಾನೆ. ಶಿವನ ವಾಕ್ಯಕ್ಕೆ ಅಪಾರ್ಥವನ್ನು ಕಲ್ಪಿಸುವ ಈ ಮುಂಡಿಯ ವಾಕ್ಯದಲ್ಲಿ ನಂಬಿಕೆಯನ್ನಿಡಬೇಕೋ? ಅಥವಾ ಆಗಮಪ್ರಣೇತೃವಾದ ಶಂಕರನ ವಾಕ್ಯದಲ್ಲಿ ನಂಬಿಕೆಯನ್ನಿಡಬೇಕೋ? ಎನ್ನುವದನ್ನು ಆಸ್ತಿಕರಾದ ವಾಚಕರೇ ಯೋಚಿಸಬೇಕು.

ವೀರಶೈವದಲ್ಲಿದ್ದ ಶುದ್ಧಶೈವನಾಮವು ಶೈವರಲ್ಲಿರುವದಕ್ಕೆ ಬಾಧಕವೇನೂ ಇಲ್ಲ. ಶುದ್ಧಶೈವವು ಶೈವದಲ್ಲಿಯೂ ಇರಲಿ, ವೀರಶೈವದಲ್ಲಿಯೂ ಇರಲಿ, ಅದು ಪ್ರತಿಬಂಧಕವಾಗಲಾರದು. ಶೈವದಲ್ಲಿದ್ದ ಶುದ್ಧಶೈವವು ಶೈವಾಂತಃಪಾತಿಯೂ, ವೀರಶೈವದಲ್ಲಿದ್ದ ಶುದ್ಧಶೈವವು ವೀರಶೈವಾಂತಃಪಾತಿಯೂ ಆಗಿರುವುದು. ವೈಷ್ಣವಮತದಲ್ಲಿದ್ದ ದೇವದತ್ತನೇ ಸ್ಮಾರ್ತಮತದಲ್ಲಿದ್ದ ದೇವದತ್ತನಲ್ಲ. ಅವನೇ ಬೇರೆ, ಇವನೇ ಬೇರೆ. ವೈಷ್ಣವಮತಸ್ಥನಾದ ದೇವದತ್ತನೆಂಬರ್ಥ ಮಾಡುವಲ್ಲಿ ದೇವದತ್ತನು ಸ್ಮಾರ್ತಮತದಲ್ಲಿರುವನು ಎಂದರೆ ಪ್ರತಿಬಂಧಕವಾಗುವುದೇನು? ಇಲ್ಲ.

ಪ್ರತಿಬಧ್ಯ ಪ್ರತಿಬಂಧಕಭಾವವು ಎಲ್ಲಿಯೆನ್ನುವದು ಗೊತ್ತಿಲ್ಲವೊ? ಎಲ್ಲಿ ವಿರೋಧವೋ ಅಲ್ಲಿಯೇ ಅಲ್ಲವೆ? ಅಹಿನಕುಲಗಳಿಗೆ ಪರಸ್ಪರ ವಿರೋಧ ವಿರುವುದು. ಆ ವಿರೋಧವು ಇವುಗಳಿಗೆ ಸಹಾನವಸ್ಥಾನರೂಪವಾಗಿರು ವುದರಿಂದ ಒಂದರಿಂದೊಂದು ಬಾಧ್ಯವೂ ಬಾಧಕವೂ ಆಗುತ್ತವೆ. ಅಂದರೆ ಪ್ರತಿಬಧ್ಯವೂ ಪ್ರತಿಬಂಧಕವೂ ಆಗುತ್ತವೆ. ಇನ್ನು ಘಟ ವತ್ತಾಬುದ್ಧಿಗೆ ಘಟಾಭಾವವತ್ತಾಬುದ್ಧಿಯು ಪ್ರತಿಬಂಧಕವು, ಘಟ ವತ್ತಾಬುದ್ಧಿಯು ಪ್ರತಿಬಧ್ಯವು ಆಗುವುದರಿಂದ ಅವು ಒಂದರಿಂದೊಂದು ನಷ್ಟಗಳಾಗುತ್ತವೆ.

ಶೈವಮತವಿಶೇಷ್ಯಕಶುದ್ಧಶೈವವತ್ತಾಬುದ್ಧಿಯು ವೀರಶೈವಮತ ವಿಶೇಷ್ಯಕ ಶುದ್ಧಶೈವವತ್ತಾಬುದ್ಧಿಗೆ ಪ್ರತಿಬಂಧಕವಾಗುವುದಿಲ್ಲ. ಆಗು ವುದೆಂದರೆ ಘಟವಿಶೇಷ್ಯಕಪೃಥಿವೀತ್ವವತ್ತಾಬುದ್ಧಿಗೆ ಪಟವಿಶೇಷ್ಯಕ ಪೃಥಿವೀತ್ವವತ್ತಾಬುದ್ಧಿಯು ಪ್ರತಿಬಂಧಕವಾಗಬೇಕಾದೀತು. ಆದುದ ರಿಂದ ಶುದ್ಧಶೈವವು ಕೇವಲ ಶೈವಮತದಲ್ಲಿಯೇ ಇಲ್ಲ; ಕಿಂತು ವೀರಶೈವ ಮತವಲ್ಲಿಯೂ ಇದೆ. ಈ ವಿಷಯದಲ್ಲಿ "ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ" ಇತ್ಯಾದಿಯಾಗಿ "ಶುದ್ಧಶೈವಾಃ ಸಮಾ ಖ್ಯಾತಾಃ" ಎಂಬುವ ವಾಕ್ಯಗಳೇ ಪ್ರಬಲಸಾಕ್ಷಿಗಳಾಗಿವೆ. "ಶುದ್ಧ ಶೈವಂ ಮಿಶ್ರಶೈವಂ ಮಾರ್ಗಶೈವಂ ತೃತೀಯಕಂ। ಚತುರ್ಥಂ ವೀರಶೈವಂಚ ಪಂಚಮೋವಾಂತರಸ್ತಥಾ ॥" ಎಂಬಲ್ಲಿಯ ವೀರ ಶೈವಪದವು "ತುರ್ಯವೀರೋತ್ತಮೋತ್ತಮಾಃ" ಇತ್ಯಾದಿಯಾಗಿ "ಸಂಗವರ್ಜಿತಾಃ" ಇತ್ಯಂತವಾಕ್ಯಗಳಿಂದ ಪರಶಿವನೇ ತುರ್ಯವೀರ ಶೈವ (ನಿರಾಭಾರಿವೀರಶೈವ) ಪರವಾದುದೆಂದು ಹೇಳುವುದರಿಂದ ಅಂಥ ನಿರಾಭಾರಿವೀರಶೈವರಿಗೂ ಶುದ್ಧಶೈವರಿಗೂ (ಬ್ರಾಹ್ಮಣಗೃಹಸ್ಥರಿಗೂ) ಭೇದಪ್ರತಿಪಾದಕತ್ವವು ಈ ಮೇಲಿನ ವಾಕ್ಯಗಳಿಗೆ ಸಂಭವಿಸುತ್ತದಾದ ಪ್ರಯುಕ್ತ "ವೀರಶೈವಸ್ಥಾಃ" ಎಂಬುದಕ್ಕೆ 'ವೀರಶೈವರಂತೆ ಇರುವ' ಎಂದು ಅರ್ಥಮಾಡುವುದು ಅತ್ಯಂತ ಅಯುಕ್ತವಾಗಿದೆ.

ಈತನು ೨೯ ನೆಯ ಪುಟದಲ್ಲಿ—

"ಬ್ರಾಹ್ಮಣಾವಿ ರಶೈವಸ್ಥಾಃ" ಇತ್ಯಾದಿ ಪ್ರಕರಣವು ವೀರಶೈವಮತವಿಭಾಗ ಪರವಾಗಿರದೆ ಕೇವಲ ಶೈವಮತವಿಭಾಗಪರವಾಗಿರುವದು. ಅಂತೆಯೇ ಶುದ್ಧಶೈವ-ಮಿಶ್ರಶೈವ-ಮಾರ್ಗಶೈವ-ವೀರಶೈವವೆಂದು ವಿಭಾಗವು ಮಾಡಲ್ಪಟ್ಟಿದೆ. ಶುದ್ಧಶೈವಾದಿಗಳು ವೀರಶೈವಭೇದೋಪಭೇದಗಳೆಂದು ಹೇಳುವದಾದರೂ ಪ್ರಾಮಾಣಿಕವಾದುದಲ್ಲ" ಎಂದು ಬರೆದಿದ್ದಾನೆ.

"ಬ್ರಾಹ್ಮಣಾ ವೀರಶೈವಸ್ಥಾಃ" ಇತ್ಯಾದಿ ಪ್ರಕರಣವು ಕೇವಲ ವೀರಶೈವಮತವಿಭಾಗಪರವಾಗಿದೆ. ಈ ಪ್ರಕರಣವು ಶೈವಮತದ ವಿಭಾಗ ಪರವಾಗಿದ್ದರೆ ಇಲ್ಲಿ ಹೇಳಿದ "ವದ ಲೋಕೋಪಕಾರಾಯ ವೀರ ಶೈವೇ ವಿಶೇಷಕಂ" ಎಂಬ ದೇವಿಯ ಪ್ರಶ್ನವೂ ಹಾಗೂ "ಬ್ರಾಹ್ಮಣಾ ವೀರಶೈವಸ್ಥಾಃ" ವೀರಶೈವಮತದಲ್ಲಿರುವ ಬ್ರಾಹ್ಮಣರು ಎಂಬಲ್ಲಿಯ ವೀರಶೈವಶಬ್ದವೂ, "ಬಹವೋ ಮಾರ್ಗಶೈವಾಶ್ಚ ವೀರಶೈವಾನುವರ್ತಿನಃ" ಬಹುಜನಮಾರ್ಗಶೈವರು ವೀರಶೈವವನ್ನನುಸರಿಸಿರುವರು ಎಂಬಲ್ಲಿಯ ವೀರಶೈವಪದವೂ, "ತುರ್ಯವೀರೋತ್ತಮೋತ್ತಮಾಃ" ಚತುರ್ಥಾಶ್ರಮಿ (ಸನ್ಯಾಸಿ) ಯಾದ ವೀರನು ಎಂಬಲ್ಲಿಯ ವೀರಶಬ್ದವೂ ಸಂಗತವಾಗಲಾರವು. ವೀರಶೈವಮತಸ್ಥರಾದ ಶುದ್ಧಶೈವರು, ಇದರಂತೆ ವೀರಶೈವಮತಸ್ಥರಾದ ಮಿಶ್ರಶೈವರು, ವೀರಶೈವಮತಸ್ಥರಾದ ಮಾರ್ಗಶೈವರು, ವೀರಶೈವಮತಸ್ಥರಾದ ತುರ್ಯವೀರಶೈವರು, ವೀರಶೈವಮತಸ್ಥರಾದ ಅಂತರಶೈವರು ಎಂದು ಹೇಳಬೇಕಾದುದರಿಂದ ಈ ಪ್ರಕರಣವು ವೀರಶೈವಮತವಿಭಾಗಪರವಾಗಿರುವದಲ್ಲದೆ ಶೈವಮತವಿಭಾಗಪರವಾಗಿಲ್ಲವೆನ್ನುವುದು ಮಂದರಿಗೂ ಸಹ ತಿಳಿಯುವಂತಿದೆ.

ಪರಶಿವನು ಶುದ್ಧವೀರಶೈವಾದಿಗಳೆಂದು ವಿಭಾಗಿಸದೆ ಶುದ್ಧಶೈವಾದಿಗಳೆಂದು ವಿಭಾಗಿಸಿರುವುದರಿಂದ ಬರುವ ಬಾಧಕವೇನು ? ಪೃಥಿವಿಯ ವಿಭಾಗದಲ್ಲಿ "ನಿತ್ಯಾನಿತ್ಯಾಚ" ಎಂದು ವಿಭಾಗಮಾಡಿರುವುದು

ಗೊತ್ತಿಲ್ಲವೋ? ಇಲ್ಲಿ ಪೃಥಿವೀಪದವು ಪ್ರಯೋಗಿಸಲ್ಪಟ್ಟಿರುವುದೇನು ? ಇದು ತರ್ಕಸಂಗ್ರಹವನ್ನೋದಿದ ಬಾಲಕರಿಗೂ ಸಹ ತಿಳಿಯುವಂತಿದೆ.

ಈತನು ಇದೇ ಪುಟದಲ್ಲಿ—

"ವಿಭಾಗಿಸುವ ಪದಾರ್ಥವನ್ನು ವಿಭಾಗದೊಳಗೆ ಸೇರಿಸಿಕೊಳ್ಳುವದು ಶಾಸ್ತ್ರವಿರೋಧವು. ವಿಭಾಗದಲ್ಲಿ ವಿಭಾಜ್ಯವಿಭಾಜಕಧರ್ಮಗಳು ಪರಸ್ಪರ ಭಿನ್ನವಾಗಿರುವದು ಅತ್ಯಾವಶ್ಯವದೆ. ಅತ ಏವ "ತದ್ಧರ್ಮಾವಾಂತರಧರ್ಮಪುರಸ್ಕಾರೇಣ ಧರ್ಮಿಪ್ರತಿಪಾದನಂ ವಿಭಾಗಃ" ಎಂದು ಶಾಸ್ತ್ರಕಾರರು ವಿಭಾಗಪದಾರ್ಥಸ್ವರೂಪವನ್ನು ಹೇಳಿರುವರು. ಆದರಿಂದ ಪ್ರಕೃತ ವೀರಶೈವಮತದ ವಿಭಾಗದಲ್ಲಿ ವೀರಶೈವಮತವನ್ನು ಸೇರಿಸಿಕೊಂಡು ಶುದ್ಧಶೈವ, ಮಿಶ್ರಶೈವ, ಮಾರ್ಗಶೈವ, ವೀರಶೈವವೆಂದು ವಿಭಾಗವನ್ನು ಮಾಡಿರುವದು ಕೇವಲ ಅಪ್ರಾಮಾಣಿಕವೆನಿಸುವದು."

ಎಂದು ಬರೆದಿರುವನು. ಇದನ್ನು ವಿಮರ್ಶಿಸೋಣ !

ಪರಮೇಶ್ವರನ ವಾಕ್ಯಗಳ ಅರ್ಥವನ್ನು ತಿಳಿಯಲು ಬುದ್ಧಿಸಾಮರ್ಥ್ಯವಿಲ್ಲದೆ ನಾಸ್ತಿಕಮಾರ್ಗವನ್ನನುಸರಿಸಿ ಶಿವೋಕ್ತಿಗಳಮೇಲೆ ಕೋಟಿಯನ್ನು ಮಾಡಿ ಅವು ಅಪ್ರಮಾಣಗಳೆಂಬ ಭಾವವನ್ನು ತೋರ್ಪಡಿಸುವ ಈ ಮುಂಡಿಯ ವಕ್ರಮಾರ್ಗಕ್ಕೆ ಶತಶಃ ಧಿಕ್ಕಾರವನ್ನೀಯಬೇಕಾಗಿದೆ. ಪರಮೇಶ್ವರನು ಸುಸ್ಪಷ್ಟವಾಗಿ—

ಕಿಮತ್ರ ಬಹುನೋಕ್ತೇನ ತುರ್ಯವೀರೋತ್ತಮೋತ್ತಮಾಃ ।
ವಿರಕ್ತಾಶ್ಚ ವಿರಾಗಾಶ್ಚ ತೇ ಸರ್ವೇ ವೀರಶೈವಿನಃ ॥
ಜ್ಞಾನಿನಃ ಕಾಮರಹಿತಾ ನಿತ್ಯಂ ಭಿಕ್ಷಾನ್ನಜೀವಿನಃ ।
ಯೇ ಚರಂತಿ ಸದಾ ದೇವಿ ತೇ ವೈ ಚರಗಣಾಃ ಸ್ಮೃತಾಃ ॥
ವಿರಕ್ತಾ ಜ್ಞಾನಸಂಪನ್ನಾಃ ಸುಶೀಲಾಚಾರಶಾಲಿನಃ ।
ತೇ ವಿರಕ್ತಾಃ ಸಮಾಖ್ಯಾತಾ ಲಿಂಗಿನಸ್ಸಂಗವರ್ಜಿತಾಃ ॥

ಈ ಶ್ಲೋಕಗಳನ್ನು ಹೇಳಿರುವನು. 'ಒಂದಲ್ಲ-ಎರಡಲ್ಲ-ಮೂರು ಶ್ಲೋಕಗಳಿಂದ ಈ ಪ್ರಕರಣದಲ್ಲಿರುವ ವೀರಶೈವಪದಕ್ಕೆ ನಿರಾಭಾರಿ

ವೀರಶೈವನೆಂದು ತಿಳಿದುಕೊಳ್ಳಲೆಂದು ಸ್ಪಷ್ಟವಾಗಿ ಹೇಳಿದ್ದರೂ, ಇದು ಮುಂಡನವಾದಿಯಾದೀ ಮುಂಡಿತಮುಂಡನ ಕಣ್ಣಿಗೆ ಕಾಣಿಸದಿರುವುದು ಪಕ್ಷಾಂಧತೆಯ ಫಲವಾಗಿದೆ.

ವೀರಶೈವಪದಕ್ಕೆ ನಿರಾಭಾರಿವೀರಶೈವನೆಂದು ಸಾಕ್ಷಾತ್ ಶಿವನೇ ಶಾಸನಮಾಡಿರುವುದರಿಂದ ಈ ಮುಂಡಿಯು ಮಹಾಬುದ್ಧಿಯನ್ನು ಖರ್ಚುಮಾಡಿ "ತದ್ಧರ್ಮಾವಾಂತರಧರ್ಮಪುರಸ್ಕಾರೇಣ ಧರ್ಮಿಪ್ರತಿಪಾದನಂ ವಿಭಾಗಃ" ಎಂದು ಹೇಳಿದ ಶಾಸ್ತ್ರಕಾರರ ವಾಕ್ಯಕ್ಕೆ ವಿರೋಧವುಂಟಾಗದೆ ಈತನ ಅಭಿಪ್ರಾಯವು ಪತ್ತೆಯಿಲ್ಲದೆ ಪಲಾಯನಮಾಡಿತು. ವೀರಶೈವತ್ವವೀರಶೈವತ್ವವ್ಯಾಪ್ಯಧರ್ಮಪುರಸ್ಕಾರದಿಂದ ಶುದ್ಧಶೈವಾದಿ ಧರ್ಮಿಪ್ರತಿಪಾದನರೂಪವಾದ ವಿಭಾಗವು ಶುದ್ಧಶೈವ, ಮಿಶ್ರಶೈವ ಮಾರ್ಗಶೈವ, ವೀರಶೈವ, ಅಂತರಶೈವವೆಂಬಲ್ಲಿ ಸಂಗತವಾಗುವುದರಿಂದ ವೀರಶೈವಮತಸ್ಥರಾದ ಶುದ್ಧಶೈವರೆಂಬ ಬ್ರಾಹ್ಮಣರಿಗೆ ಶಿಖಾಸೂತ್ರಗಳಿರಬೇಕೆಂಬುದು ಸಿದ್ಧಾಂತವಾಗುವುದು.

ಈತನು ೩೦ ನೆಯ ಪುಟದಲ್ಲಿ—

"ಶಾಸ್ತ್ರಕ್ರಮವಿಡಿದು ಪದಾರ್ಥಗಳ ವಿಭಾಗವನ್ನು ಮಾಡುವುದು ಸರ್ವರಿಗೂ ನಿಷ್ಕಲಂಕವಾದುದು. ಒಂದು ಪಕ್ಷದಲ್ಲಿ ಗ್ರಂಥಗಳಲ್ಲಿ ವ್ಯತ್ಯಾಸವಿದ್ದರೆ ಶಾಸ್ತ್ರಕ್ರಮವಿಡಿದು ತಿದ್ದಿಕೊಳ್ಳುವದು ಪಂಡಿತರ ಕರ್ತವ್ಯವಾಗಿದೆ"

ಎಂದು ಬರೆದಿರುವನು. ವಾಚಕರೇ ನೋಡಿದಿರಾ, ಈ ಮುಂಡಿಯ ಪಕ್ಷಾಂಧತೆಯನ್ನು? ಸ್ವಪಕ್ಷಸಾಧನಕ್ಕಾಗಿ ಈಶ್ವರಪ್ರಣೀತಗ್ರಂಥಗಳನ್ನೇ ತಿದ್ದಬೇಕಂತೆ! ಎಂಥ ನಾಸ್ತಿಕನಾದರೂ ಈಶ್ವರಕೃತಗ್ರಂಥದಲ್ಲಿ ವ್ಯತ್ಯಾಸವನ್ನು ಕಲ್ಪಿಸಬಹುದೋ? ತಮ್ಮ ಬುದ್ಧಿಯ ವ್ಯತ್ಯಾಸವನ್ನು ಒಪ್ಪಿಕೊಳ್ಳದೆ ಸರ್ವಜ್ಞೇಶ್ವರಕೃತಗ್ರಂಥದಲ್ಲಿ ವ್ಯತ್ಯಾಸವನ್ನು ಕಲ್ಪಿಸುವವರಿಗೆ ಪ್ರಮಾಣೈಕಶರಣರಾದ ಆಸ್ತಿಕರು ಯಾವ ಪದವಿಯನ್ನು ಕೊಡಬಹುದೆಂಬ ವಿಷಯವನ್ನು ವಾಚಕರೇ ಯೋಚಿಸಬೇಕು.

ವದ ಲೋಕೋಪಕಾರಾಯ ವೀರಶೈವೇ ವಿಶೇಷಕಂ ॥

ವೀರಶೈವಮತದಲ್ಲಿ ವಿಶೇಷ (ಭೇದ) ವನ್ನು ಹೇಳೆಂದು ಪಾರ್ವತೀ ದೇವಿಯು ಪ್ರಶ್ನೆಮಾಡಿದ್ದರಿಂದಲೂ, ಅದಕ್ಕನುಗುಣವಾಗಿ ವೀರಶೈವಸ್ಥ ಹಾಗೂ ವೀರಶೈವಾನುವರ್ತಿ, ತುರ್ಯವೀರ (ಚತುರ್ಥಾಶ್ರಮದ ವೀರಶೈವ) ಇತ್ಯಾದಿ ಶಬ್ದಗಳನ್ನು ಪ್ರಯೋಗಿಸಿ ಶಿವನು ಪ್ರತ್ಯುತ್ತರವನ್ನು ಕೊಟ್ಟಿರುವುದರಿಂದಲೂ, ವೀರಶೈವಸ್ಥ ಶುದ್ಧಶೈವ, ವೀರಶೈವಸ್ಥ ಮಿಶ್ರಶೈವ, ವೀರಶೈವಸ್ಥ ಮಾರ್ಗಶೈವ, ವೀರಶೈವಸ್ಥ ತುರ್ಯವೀರಶೈವ, ವೀರಶೈವಸ್ಥ ಅಂತರಶೈವವೆಂದು ವಿಭಾಗಮಾಡಿದ್ದು ಶಾಸ್ತ್ರಕ್ರಮವಿರುದ್ಧವಾಗುವುದಿಲ್ಲವಾದುದರಿಂದಲೂ, ಈ ಪ್ರಕರಣದಲ್ಲುಕ್ತವಾಗಿರುವ ಸಕಲರಿಗೂ ಲಿಂಗಧಾರಣವು ಹೇಳಲ್ಪಟ್ಟಿರುವುದರಿಂದಲೂ, ಈ ಪ್ರಕರಣವು ಕೇವಲ ವೀರಶೈವವಿಭಾಗಪರವಾದುದೆಂಬುದೇ ಸಿದ್ಧಾಂತವು.

ಈತನು ೩೦-೩೧ ನೆಯ ಪುಟಗಳಲ್ಲಿ—ಶುದ್ಧಶೈವದ ವಿಷಯದಲ್ಲಿ ಒಂದೆರಡು ಶ್ಲೋಕಗಳನ್ನು ಬರೆದಿರುತ್ತಾನೆ. ಆ ಶ್ಲೋಕಗಳನ್ನು ಎಲ್ಲರೂ ಒಪ್ಪುತ್ತಾರೆ. ಆದರೆ ಪಾರಮೇಶ್ವರಾಗಮದ ೧೭ನೆಯ ಪಟಲದಲ್ಲಿ ಸ್ಪಷ್ಟವಾಗಿ ವೀರಶೈವಬ್ರಾಹ್ಮಣರನ್ನುದ್ದೇಶಿಸಿ ಶಾಸನಗೊಳಿಸಲ್ಪಟ್ಟ ಶುದ್ಧಶೈವಾಭಿಧವೀರಶೈವರಿಗೂ ಆ ಶಬ್ದಕ್ಕೂ ಸಂಬಂಧವಾಗುವುದಿಲ್ಲವೆಂಬ ವಿಷಯವನ್ನು ಈತನು ಸೂಕ್ಷ್ಮಬುದ್ಧಿಯಿಂದ ಪರ್ಯಾಲೋಚಿಸಬೇಕು. ಹಾಗೆ ಮಾಡದೆ ತನ್ನ ವಕ್ರಬುದ್ಧಿಯನ್ನೇ ಉಪಯೋಗಿಸಿದ್ದಾದರೆ ಶಿವಾಜ್ಞಾಭಂಗದೋಷವು ಈತನನ್ನು ಎಂದೂ ಬಿಡಲಾರದೆಂದು ಹೇಳಬೇಕಾಗುವುದು.

ಈತನು ೩೧-೩೨ ನೆಯ ಪುಟಗಳಲ್ಲಿ ಸೂಕ್ಷ್ಮ, ವಾತುಲ, ಪಾರಮೇಶ್ವರಾಗಮಗಳಲ್ಲಿರುವ ಒಂದೊಂದು ಶ್ಲೋಕವನ್ನುದಾಹರಿಸಿ ವೀರಶೈವರಲ್ಲಿ ಸಾಮಾನ್ಯ-ವಿಶೇಷ-ನಿರಾಭಾರಿಗಳೆಂದು ೩ ಭಾಗಗಳುಂಟೆಂದು ಬರೆದಿದ್ದಾನೆ. ಇದು ಎಲ್ಲರಿಗೂ ಸಮ್ಮತವೇ ಆದೆ.

ಈತನು ೩೨ ನೆಯ ಪುಟದಲ್ಲಿ—

"ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ | ಲಿಂಗರುದ್ರಾಕ್ಷ ಭಸ್ಮಾಂಕಾಃ ಬ್ರಹ್ಮಕರ್ಮಸಮಾಶ್ರಿತಾಃ" ಇತ್ಯಾದಿ ಪ್ರಕರಣದಲ್ಲಿ ಶುದ್ಧಶೈವ-ಮಾರ್ಗ ಶೈವ-ವೀರಶೈವಾದಿಗಳ ಲಕ್ಷಣವನ್ನು ಕ್ರಮವಾಗಿ ಹೇಳಿ ಬಳಿಕ 'ಶೈವಭೇದೇಷು ಚಾನ್ಯೇಷು ವೀರಶೈವೋತ್ತಮೋತ್ತಮಃ' ಎಂಬ ವಾಕ್ಯದಿಂದ ವೀರಶೈವಮತಕ್ಕೆ ಭಿನ್ನ ವಾಗಿದ್ದ ಶೈವಮತದ ಭೇದಗಳಾದ ಶುದ್ಧಶೈವಾದಿಗಳಲ್ಲಿ ವೀರಶೈವಮತವು ಉತ್ತಮೋತ್ತಮವಾಗಿರುವದೆಂದು ಪಾರಮೇಶ್ವರಾಗಮವು ವಿಶದವಾಗಿ ಹೇಳಿದೆ."

ಎಂದು ಬರೆದಿದ್ದಾನೆ. "ಶೈವಭೇದೇಷು ಚಾನ್ಯೇಷು ವೀರಶೈವೋತ್ತಮೋತ್ತಮಃ" ಎಂಬ ವಾಕ್ಯದಿಂದ ವೀರಶೈವಮತಕ್ಕೆ ಭಿನ್ನಗಳಾದ ಶುದ್ಧಶೈವಾದಿಗಳಲ್ಲಿ ವೀರಶೈವಮತವು ಉತ್ತಮೋತ್ತಮವೆಂದು ಪಾರಮೇಶ್ವರಾಗಮವು ಹೇಳುವುದಿಲ್ಲ. ಕಿಂತು ನಿರಾಭಾರಿವೀರಶೈವಭಿನ್ನಗಳಾದ ಶೈವಭೇದಗಳೆನಿಸುವ ವೀರಶೈವಾದಿಸಪ್ತಭೇದಗಳಲ್ಲಿಯೂ, ವೀರಶೈವ ಭೇದಗಳೆನಿಸುವ ಶುದ್ಧಶೈವಾದಿಗಳಲ್ಲಿಯೂ ನಿರಾಭಾರಿ ವೀರಶೈವಧರ್ಮವು ಉತ್ತಮೋತ್ತಮವೆಂದು ಹೇಳುತ್ತದೆ. ನಿರಾಭಾರಿಧರ್ಮವು ವೀರಶೈವ ಮತಕ್ಕೆ ಭಿನ್ನವಾಗಿಲ್ಲ. ಆದ್ದರಿಂದ ವೀರಶೈವಮತಕ್ಕೆ ಭಿನ್ನಗಳಾಗಿದ್ದ ಶೈವಭೇದಗಳಾದ ಶುದ್ಧಶೈವಾದಿಗಳಲ್ಲಿ ಎಂದು ಹೇಳುವುದು ತಪ್ಪು.

ಈತನು ಇದೇ ಪುಟದಲ್ಲಿ—

"ಕೇಚಿದ್ಭಜಂತ್ಯನ್ಯದೈವಂ ಕೇಚಿನ್ನೇಚ್ಛಂತಿ ಪಾರ್ವತಿ | ಕೇಚಿದ್ವಿವಾಹಮಿಚ್ಛಂತಿ ಕೇಚಿನ್ನೇಚ್ಛಂತಿ ಶೈಲಜೇ || ಸ್ತ್ರಿಯಸ್ತು ಲಿಂಗಧಾರಿಣ್ಯಃ ಪುರುಷಾ ವಿಷ್ಣುಸೇವಕಾಃ | ಪುರುಷಾ ಲಿಂಗಿನಃ ಕೇಚಿದ್ವೈಷ್ಣವ್ಯಸ್ತು ಸ್ತ್ರಿಯಸ್ತಥಾ || ಅಲಿಂಗಿಸ್ಪೃಷ್ಟಮನ್ನಂ ಚ ಭುಂಜತೇ ಲಿಂಗಧಾರಿಣಃ | ಜಲಪಾನಂ ಚ ಸರ್ವತ್ರ ಮಹಾಶೈವಾಹಿ ಪಾರ್ವತಿ || ಹೇ ಪಾರ್ವತಿ ಮಹಾಶೈವರಲ್ಲಿ ಕೆಲವರು ಮದುವೆಯನ್ನು ಬಯಸಿದರೆ ಕೆಲವರು ಅದನ್ನು ಬಯಸುವದಿಲ್ಲ. ಕೆಲವರು ಅನ್ಯದೇವರನ್ನು ನಮಸ್ಕರಿಸಿದರೆ ಕೆಲವರು ನಮಸ್ಕರಿಸುವದಿಲ್ಲ. ಸ್ತ್ರೀಯರು ಲಿಂಗವತಿಯರಾಗಿದ್ದು ಪುರುಷರು ವಿಷ್ಣುಸೇವಕರಾಗಿರುವರು. ಪುರುಷರು ಲಿಂಗವಂತರಾಗಿದ್ದರೆ ಸ್ತ್ರೀಯರು ವಿಷ್ಣುಭಕ್ತಿಯುಳ್ಳ

ವರಾಗಿರುವವರು. ಲಿಂಗವಿಲ್ಲದ ಭವಿಗಳು ಮುಟ್ಟಿದ ಅನ್ನೋದಕಾದಿಗಳನ್ನು ಸೇವಿಸುವ ರೆಂದು ಮಹಾಶೈವಾದಿಗಳ ಲಕ್ಷಣವು "ಬ್ರಾಹ್ಮಣಾ ವೀರಶೈವಸ್ಥಾಃ" ಇತ್ಯಾದಿ ಪ್ರಕರಣದಲ್ಲಿ ಹೇಳಲ್ಪಟ್ಟಿದೆ. ಈ ಲಕ್ಷಣವು ವೀರಶೈವರಿಗೆ ಅತಿ ವಿರೋಧವಾಗಿದೆ" ಎಂದು ಬರೆದಿದ್ದಾನೆ. ಹೀಗೆ ಬರೆದಿರುವುದು ಅತ್ಯಂತ ಮಂದತನದ ಲಕ್ಷಣವಾಗಿದೆ. ವೀರಶೈವಶೂದ್ರರಲ್ಲಿ ಪಾರಮೇಶ್ವರಾಗಮದಲ್ಲಿ ಹೇಳಲ್ಪಟ್ಟಂತೆ ಆಚರಣೆಗಳು ಈಗಲೂ ಪ್ರಚಾರದಲ್ಲಿರುವುವು. ಇದು ಈತನಿಗೆ ಚನ್ನಾಗಿ ಗೊತ್ತಿದ್ದರೂ ತನ್ನ ಪಕ್ಷವನ್ನು ಸಾಧಿಸುವುದಕ್ಕೋಸ್ಕರ ಅದನ್ನು ಮರೆಮಾಚಿ ವೀರಶೈವರಿಗೆ ವಿರೋಧವಾಗಿದೆ ಎಂದು ಬರೆದಿರುವುದನ್ನು ನೋಡಿದರೆ ಸೋಜಿಗವೆನಿಸುತ್ತದೆ.

ಪಾರಮೇಶ್ವರಾಗಮದಲ್ಲಿ—

ನಾಪಿತಾ ರಜಕಾ ಗೋಪಾಃ ಕುಲಾಲಾಸ್ತಿಲಘಾತಕಾಃ ।
ವೇಶ್ಯಾದ್ಯಾಶ್ಚಾಂತ್ಯಜಾತ್ಯಂತಾಸ್ತೇನ್ಯೇಚಾಂತರಶೈವಿನಃ ॥

ಎಂಬುಕ್ತಿಯಿಂದ ಲಿಂಗಧಾರಿಗಳಾದ ನಾಪಿತಾದಿಗಳಿಗೆ ಅಂತರಶೈವರೆಂದು ಸ್ಪಷ್ಟವಾಗಿ ಹೇಳಲ್ಪಟ್ಟಿರುವುದರಿಂದ ಇದು ವೀರಶೈವಪ್ರಕರಣವೆನ್ನುವುದು ಬಾಲಕರಿಗೂ ಸಹ ತಿಳಿಯುವಂತಿದ್ದರೂ ಅಪಾರ್ಥವನ್ನು ಕಲ್ಪಿಸಿ ಮನಬಂದಂತೆ ೩-೪ ಪುಟಗಳಲ್ಲಿ ಹರಟೆಯನ್ನು ಕೊಚ್ಚಿರುವುದು ತುಚ್ಛವಾಗಿದೆ. ಈತನು ಸುಮ್ಮನೆ ಪುಟಗಳನ್ನು ಬೆಳೆಯಿಸುವುದರಲ್ಲಿ ತತ್ಪರನಾಗಿದ್ದಾನಲ್ಲದೆ ಬೇರೆಯಿಲ್ಲ. ಪಾರಮೇಶ್ವರಾಗಮದ "ಬ್ರಾಹ್ಮಣಾ ವೀರಶೈವಸ್ಥಾಃ" ಎಂಬ ಶ್ಲೋಕವು ಈತನನ್ನು ಹೆಡಮುರಿಗೆಯನ್ನು ಕಟ್ಟಿ ಕೋಟೆಯಲ್ಲಿ ಇಟ್ಟಂತೆ ಮಾಡಿದೆ. ಆ ಕೋಟೆಯಿಂದ ತಪ್ಪಿಸಿಕೊಳ್ಳುವುದಕ್ಕೋಸ್ಕರ ಬಹು ಪ್ರಯತ್ನಪಡಹತ್ತಿದ್ದಾನೆ. ಆದರೂ ಬೆಲ್ಜಿಯಂ ದೇಶದ ಕೋಟೆಯಂತೆ ಭದ್ರವಾದ ಕೋಟೆಯಾಗಿರುವುದರಿಂದ ತಪ್ಪಿಸಿಕೊಂಡು ಹೋಗಲಿಕ್ಕೆ ಸಾಧ್ಯವಿಲ್ಲದಾಗಿದೆ. ಆದುದರಿಂದ ಮನಸ್ಸಿಗೆ ಬಂದಂತೆ ಪೇಚಾಡಲಿಕ್ಕೆ ಹತ್ತಿದ್ದಾನೆ. ಇದರಿಂದ ಯಾವ ಪ್ರಯೋ

ಜನವೂ ಈತನಿಗೆ ದೊರೆಯುವುದಿಲ್ಲ. ಇನ್ನುಮೇಲಾದರೂ ಈತನು ಸ್ವಪಕ್ಷಸಾಧನಕ್ಕಾಗಿ ಶಿವೋಕ್ತಿಗಳಿಗೆ ಅಸಾರ್ಥವನ್ನು ಕಲ್ಪಿಸಿ ದೋಷ ಭಾಗಿಯಾಗದೆ ಸ್ವಭಾವೋಕ್ತಿಯಂತೆ ನಡೆದು ಧನ್ಯಜೀವಿಯಾಗಲೆಂದಾ ಶಿಸುತ್ತೀವೆ.

ಈತನು ೩೬ ನೆಯ ಪುಟದಲ್ಲಿ—

"ಬ್ರಾಹ್ಮಣಾ ವೀರಶೈವಸ್ಥಾ ಲಿಂಗಯಜ್ಞೋಪವೀತಿನಃ" ಇತ್ಯಾದಿ ಪಾರಮೇಶ್ವರಾಗಮವಾಕ್ಯದಲ್ಲಿರುವ ಶಿಖಾಸೂತ್ರಶಬ್ದಗಳಿಗೆ ಕ್ರಮವಾಗಿ ಕರ್ಮಾಂಗವಾದ ಜಟ್ಟು ಜನಿವಾರಗಳೆಂದು ಅರ್ಥವನ್ನು ಮಾಡದೆ, ವೀರಶೈವಮತಸಮ್ಮತವಾದ ಜ್ಞಾನಶಿಖಾ, ರುದ್ರಾಕ್ಷಯಜ್ಞೋಪವೀತಗಳೆಂದು ಅರ್ಥವನ್ನು ಮಾಡುವೆವು. ವೀರಶೈವರಿಗೆ ಕರ್ಮಾಂಗವಾದ ಜುಟ್ಟು ಜನಿವಾರಗಳು ಅನರ್ಹವಾಗಿರುವವೆಂಬುದನ್ನು ಇತಃ ಪೂರ್ವದಲ್ಲಿ ಸಪ್ರಮಾಣವಾಗಿ ಪ್ರತಿಪಾದಿಸಿರುವೆವು. ಆದುದರಿಂದ "ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ' ಇತ್ಯಾದಿ ಪಾರಮೇಶ್ವರಾಗಮವಚನದಿಂದ ವೀರಶೈವರಿಗೆ ಕರ್ಮಾಂಗಭೂತವಾದ ಶಿಖಾಸೂತ್ರಗಳು ಸಿದ್ಧವಾಗುವದಿಲ್ಲ."

ಎಂದು ಬರೆದಿರುತ್ತಾನೆ. ಈತನ ಈ ತರಹದ ಬರವಣಿಗೆಯು ವೀರಶೈವಧರ್ಮಶಾಸ್ತ್ರಕ್ಕೆ ಅತ್ಯಂತ ವಿರೋಧವಾಗಿರುವುದೆಂಬ ವಿಷಯವು ಈ ಮೊದಲು ನಮ್ಮಿಂದ ವಿಸ್ತಾರವಾಗಿ ಖಂಡಿಸಲ್ಪಟ್ಟಿದೆ. ಜ್ಞಾನಶಿಖಾದಿಗಳು ಸನ್ಯಾಸಿಗಳಿಗಲ್ಲದೆ ಎಲ್ಲರಿಗೂ ಸಂಬಂಧಿಸುವುದಿಲ್ಲವೆನ್ನುವುದು ಸರ್ವರಿಗೂ ಸಿದ್ಧಾಂತವಾಗಿದೆ. ಆದುದರಿಂದ—

ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ ।
ಲಿಂಗರುದ್ರಾಕ್ಷಭಸ್ಮಾಂಕಾ ಬ್ರಹ್ಮಕರ್ಮಸಮಾಶ್ರಿತಾಃ ॥

ಎಂಬ ಶ್ಲೋಕದಲ್ಲಿರುವ ಶಿಖಾಸೂತ್ರಗಳು ಪತಿಕರ್ಮಾಂಗಭೂತಗಳನ್ನೆವುದೇ ಸಿದ್ಧಾಂತವು. ಪಾರಮೇಶ್ವರಾಗಮದ ಇದೇ ಪ್ರಕರಣದಲ್ಲಿ ಅಂತರಶೈವರೆಂಬ ನಾಪಿತರಜಕಾಂತ್ಯಜಾತ್ಯಾದಿಗಳಿಗೆ ಮುಂಡನವು ಕಂಠತಃ ಹೇಳಲ್ಪಟ್ಟಿದೆ. ಈ ಮುಂಡನವು ವೀರಶೈವಬ್ರಾಹ್ಮಣರೆಂಬ ಶಿವಾರಾಧ್ಯರಿಗೂ ಇರಬೇಕೆಂದು ಈಶ್ವರನ ತಾತ್ಪರ್ಯವಿದ್ದರೆ, ಶಿಖಾ

ಶಬ್ದಕ್ಕೆ ಬದಲಾಗಿ ಮುಂಡನವು ಅವಶ್ಯವಾಗಿ ಹೇಳಲ್ಪಡುತ್ತಿತ್ತು. ಆದುದರಿಂದ ವೀರಶೈವಬ್ರಾಹ್ಮಣರಿಗೆ ಮುಂಡನವಿರಕೂಡದೆಂಬ ತಾತ್ಪರ್ಯದಿಂದಲೇ ಶಿಖೆಯು ಕಂಠತಃ ಹೇಳಲ್ಪಟ್ಟದೆ. ಹೀಗೆ ಈಶ್ವರನ ತಾತ್ಪರ್ಯವಿದ್ದರೂ ಆಗಸ, ಕ್ಷೌರಿಕ ಮೊದಲಾದ ಅಂತರಶೈವರಂತೆ ವೀರಶೈವಬ್ರಾಹ್ಮಣರನ್ನು ಸಹ ಮುಂಡಿಗಳನ್ನಾಗಿ ಮಾಡುವ ಈ ಮುಂಡಿಯ ಪ್ರಯತ್ನವು ತುಚ್ಛವಾಗಿದೆ. ಇನ್ನು ಈತನು ಯಜ್ಞೋಪವೀತ ಶಬ್ದಕ್ಕೆ ರುದ್ರಾಕ್ಷ ಯಜ್ಞೋಪವೀತವೆಂದು ಅರ್ಥಮಾಡಿರುವುದನ್ನು ನೋಡಿದರೆ ಈತನಂಥ ದೀಡಪಂಡಿತರೇ ಜಗತ್ತಿನಲ್ಲಿಲ್ಲವೆಂದು ಹೇಳಬೇಕಾಗುತ್ತದೆ. ಯಜ್ಞೋಪವೀತಕ್ಕೆ ಈ ಪ್ರಪಂಚವು ನಿರ್ಮಾಣವಾದಂದಿನಿಂದ ಇಲ್ಲಿಯವರೆಗೆ ಯಾರೂ ಈತನಂತೆ ಅರ್ಥಮಾಡಿಲ್ಲ. ಸರ್ವರೂ ಉಪವೀತ-ಸೂತ್ರ ಎಂದೇ ಅರ್ಥಮಾಡಿದ್ದಾರೆ. ಇದರಂತೆ ಲೋಕರೂಢಿಯೂ ಪ್ರಸಿದ್ಧವಾಗಿದೆ. ಅಲ್ಲದೆ—

ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ ।
ಲಿಂಗರುದ್ರಾಕ್ಷಭಸ್ಮಾಂಕಾ ಬ್ರಹ್ಮಕರ್ಮಸಮಾಶ್ರಿತಾಃ ॥

ಎಂಬ ಶ್ಲೋಕದಲ್ಲಿ ಯಜ್ಞೋಪವೀತ ಶಬ್ದವೂ ಹಾಗೂ ರುದ್ರಾಕ್ಷ ಶಬ್ದವೂ ಬೇರೆಬೇರೆಯಾಗಿ ಪ್ರಯೋಗಿಸಲ್ಪಟ್ಟಿರುವುದರಿಂದ ಈತನು ರುದ್ರಾಕ್ಷಯಜ್ಞೋಪವೀತವೆಂದು ಬರೆದಿರುವುದು ಕೇವಲ ಹಾಸ್ಯಾಸ್ಪದವಾಗಿದೆ. ಅಸ್ತು !

ಈತನು ಸೂಕ್ಷ್ಮಾದ್ಯಾಗಮಗಳು ವೀರಶೈವರಲ್ಲಿ ಮೂರುಭೇದಗಳನ್ನು ಮಾಡಿರುವುವೆಂದು ಹೇಳಿ ಇಲ್ಲಿ ೫ ಭೇದಗಳಿರುವುದರಿಂದ ಇದು ವೀರಶೈವಪ್ರಕರಣವಲ್ಲವೆಂದು ಬರೆದಿದ್ದಾನೆ. ಹೀಗೆ ಬರೆದಿರುವುದು ಧರ್ಮಶಾಸ್ತ್ರದ ಗಂಧಸೋಂಕದವರ ಮಾತಾಗಿದೆ. ಮುಂಡಿಯೇ? ಪಾರಮೇಶ್ವರಾಗಮದಲ್ಲುಕ್ತಗಳಾದ ೫ ಭೇದಗಳು ಸಾಮಾನ್ಯಾದಿ ಮೂರುಭೇದಗಳಲ್ಲಿಯೇ ಅಡಗಿರುತ್ತವೆ. ಪರಶಿವನು ೫ ಭೇದಗಳಿಂದ

ಸ್ಪಷ್ಟೀಕರಿಸಿದ್ದಾನೆನ್ನುವುದು ನಿನಗೆ ಗೊತ್ತಿದ್ದಂತೆ ಕಾಣುವುದಿಲ್ಲ. ತಿಳು ಹಿಸುತ್ತೇವೆ ನೋಡು.

ಶುದ್ಧಶೈವರೆಂಬ ವೀರಶೈವಬ್ರಾಹ್ಮಣರು ವಿಶೇಷವೀರಶೈವಾಂತರ್ಗತರಾಗುವರು. ಮಿಶ್ರಶೈವರು, ಮಾರ್ಗಶೈವರು ಮತ್ತು ಅಂತರಶೈವರು ಸಾಮಾನ್ಯವೀರಶೈವಾಂತರ್ಗತರಾಗುವರು. ವೀರಶೈವರೆಂಬ ಸನ್ಯಾಸಿಗಳು ನಿರಾಭಾರಿವೀರಶೈವಾಂತರ್ಗತರಾಗುವರು. ಈ ರಹಸ್ಯವು ವೀರಶೈವೋತ್ಕರ್ಷಪ್ರದೀಪಿಕೆಯಲ್ಲಿ—

"ತದನುಗತಸಂಪ್ರದಾಯಸಿದ್ಧತಯಾ ವಿಚಾರ್ಯಮಾಣೇ ಕ್ಷತ್ರಿಯವೈಶ್ಯಾದಯೋ ಲಿಂಗಿನಃ ಸಾಮಾನ್ಯವೀರಶೈವಾಃ । ಭಕ್ತಮಾಹೇಶ್ವರಾರಾಧ್ಯಾಭಿಧಬ್ರಾಹ್ಮಣಾ ಲಿಂಗಧಾರಿಣಃ ವಿಶೇಷವೀರಶೈವಾಃ । ಲಿಂಗಾಂಗಿಬ್ರಾಹ್ಮಣಯತಿನೋ ನಿರಾಭಾರಾ ಇತಿ ನಿರ್ಣೀಯತೇ ॥"

ಎಂದು ಹೇಳಲ್ಪಟ್ಟಿದೆ. ಈ ವಿಷಯವನ್ನು ಈತನು ಚನ್ನಾಗಿ ತಿಳಿದುಕೊಂಡು ವಕ್ರಮಾರ್ಗದಿಂದ ದೂರನಾಗಬೇಕು. ಇಲ್ಲಿಯವರೆಗೆ ಈತನು ದುರಾಗ್ರಹದಿಂದ ಸಾಧಿಸಿದ ವಿಷಯವು ಖಂಡಿಸಲ್ಪಟ್ಟಿತು. ಇನ್ನು ಮುಂದಿನ ವಿಷಯವನ್ನು ವಿಮರ್ಶಿಸೋಣ!

ಈತನು ೩೮ ನೆಯ ಪುಟದಲ್ಲಿ—

"ಪೀಠಾಚಾರ್ಯೈಃ ಸಂಧೃತೇಷ್ಟಲಿಂಗಬ್ರಹ್ಮಸಮಾಯುತಃ" ಇತ್ಯಾದಿ ಶ್ಲೋಕವು ಉಕ್ತವಾಗಿರುವದು ನಿಜವು. ಆದರೆ ಆ ಶ್ಲೋಕವು ವೀರಶೈವಮತಪರವಾಗಿರದೆ ಕೇವಲ ಶುದ್ಧಶೈವಮತಪರವಾಗಿರುವದೆಂದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಯಾಕಂದರೆ ಶುದ್ಧಶೈವ (ಆರಾಧ್ಯ) ರಲ್ಲಿ ಶಿಖಾಸೂತ್ರಗಳನ್ನು ಲಿಂಗವನ್ನು ಧರಿಸುವ ಸಾಂಪ್ರದಾಯವು ಈಗಲೂ ವ್ಯವಹಾರದಲ್ಲಿದೆ. ವೀರಶೈವರಲ್ಲಿ ತಂತುಮಯಸೂತ್ರವನ್ನು ಧರಿಸುವ ಸಾಂಪ್ರದಾಯವು ಎಂದೆಂದಿಗೂ ಇರುವುದಿಲ್ಲ. ಅಂಥವರನ್ನು ಯಾರೂ ಎಂದೂ ಕಂಡಿಲ್ಲವೆಂದು ಧಾರಾಳವಾಗಿ ಹೇಳಬಹುದು"

ಎಂದು ಬರೆದಿರುತ್ತಾನೆ. ವೀರಶೈವಸದಾಚಾರಸಂಗ್ರಹದ ೫೪ ನೆಯ ಪುಟದಲ್ಲಿರುವ—

**ಪೀಠಾಚಾರ್ಯೈಸ್ಸಂಧೃತೇಷ್ಟಲಿಂಗಬ್ರಹ್ಮಸಮಾಯುತಃ ।**
**ಶಿಖಾಸೂತ್ರಜಟಾಭಸ್ಮ ಶಿವಲಾಂಛನಲಾಂಛಿತಃ ॥**

ಎಂಬೀ ಶ್ಲೋಕವು ವೀರಶೈವಪರವಾಗಿಲ್ಲವಂತೆ! ಶುದ್ಧಶೈವಪರವಾಗಿರುವುದಂತೆ! ನೋಡಿದಿರಾ, ಈತನ ಬೆಪ್ಪತನದ ಬರವಣಿಗೆಯನ್ನು ? ವೀರಶೈವಸದಾಚಾರಸಂಗ್ರಹಕಾರರು ಈ ಶ್ಲೋಕವನ್ನು ಸ್ಪಷ್ಟವಾಗಿ ವೀರಶೈವ ಲಕ್ಷಣದಲ್ಲಿ ಬರೆದಿದ್ದರೂ ಗ್ರಂಥಕಾರರ ಅಭಿಪ್ರಾಯವನ್ನೇ ಹಾರಿಸಿರುವುದನ್ನು ನೋಡಿದರೆ ಈತನ ಧೂರ್ತತನಕ್ಕೆ ಬೆಲೆಯೇ ಇಲ್ಲವೆಂದು ಹೇಳಬೇಕಾಗುತ್ತದೆ. ನಿಜತತ್ತ್ವಾಭಿಲಾಷಿಗಳೆಲ್ಲರೂ ಆ ಗ್ರಂಥವನ್ನು ಓದಿ ನೋಡಿದರೆ ಈತನ ಧೂರ್ತತನಕ್ಕೆ ತಕ್ಕ ಪದವಿಯನ್ನು ಕೊಡದಿರಲಾರರು. ಶಿಖಾಸೂತ್ರಗಳನ್ನು ಧರಿಸುವ ಪದ್ಧತಿಯು ವೀರಶೈವರಲ್ಲಿಲ್ಲವೆಂದು ಈತನು ಬಹು ಧೈರ್ಯದಿಂದ ಬರೆದಿರುತ್ತಾನೆ. ಈ ಪದ್ಧತಿಯು ವೀರಶೈವದ್ವಿಜರಲ್ಲಿ ಅನಾದಿಕಾಲದಿಂದ ಬಂದಿರುತ್ತದೆ. ಶೂದ್ರರಲ್ಲಿ ಮಾತ್ರ ಬಂದಿರುವುದಿಲ್ಲ. ಇದು ಈತನಿಗೆ ಗೊತ್ತಿದ್ದರೂ ದುರಭಿಮಾನವನ್ನು ವಹಿಸಿ ಆದರಂತೆ ಸಾಧಿಸಿದ್ದಾನೆ. ಪಾಪ! ಸ್ವಾಭಿಮಾನವು ಪ್ರತಿಯೊಬ್ಬರಿಗೂ ಇರಬೇಕಲ್ಲವೇ ? ಅಸ್ತು !

ಈತನು ಇದೇ ಪುಟದಲ್ಲಿ—

"ನವತಂತುಮಯಂ ದೂಷ್ಯಂ ಪವಿತ್ರಮಿತಿ ಯೇ ಬುಧಾಃ । ವದಂತಿ ತೇ ದ್ವಿಜಾಸ್ಸರ್ವೇ ವ್ರಜಂತಿ ಯಮಮಂದಿರಂ ॥ ಯಜ್ಞೋಪವೀತಂ ಭೂರುಪ ಪದಸೇವಾ ಪ್ರವರ್ತಕಾಃ ॥ ನಿರಾಸಯಂತಿ ಸತತಂ ಭಕ್ತಸಂಘಾಃ ಪರಾತ್ಪರಾಃ ॥ ಇತ್ಯಾದಿ ಶಿವಾಗಮವಚನಗಳು ವೀರಶೈವರು ತಂತುಮಯ ಯಜ್ಞೋಪವೀತವನ್ನು ಧರಿಸಕೂಡದೆಂದು ಘಂಟಾಘೋಷವಾಗಿ ಸಾರುತ್ತವೆ"

ಎಂದು ಬರೆದಿದ್ದಾನೆ. ಈ ಶ್ಲೋಕಗಳು ಶಿವಾಗಮವಚನಗಳಂತೆ! ಯಾವ ಶಿವಾಗಮದಲ್ಲಿರುವುವೆಂಬುದನ್ನು ಬರೆದಿಲ್ಲ. ಈ ಶ್ಲೋಕಗಳನ್ನು

ಯಮಲೋಕದ ನರಕಕುಂಡದಲ್ಲಿ ವಾಸಮಾಡಿ ಬಂದ ಯಾವನೋ ಒಬ್ಬ ಮಹಾಪಾಪಾತ್ಮನು ರಚಿಸಿರುವನಲ್ಲದೆ ಬೇರೆಯಿಲ್ಲ. ಇಂಥ ಶ್ಲೋಕಗಳನ್ನು ಬರೆದಿರುವುದು ಮಾತ್ಸರ್ಯದ ಪ್ರಭಾವವಾಗಿದೆ.

ಯಾವ ದ್ವಿಜರು ಯಜ್ಞೋಪವೀತವನ್ನು ಪವಿತ್ರವೆಂದು ತಿಳಿಯುತ್ತಾರೆಯೋ ಅವರೆಲ್ಲರೂ ಯಮಮಂದಿರವನ್ನು ಸೇರುತ್ತಾರೆಂದೂ, ಆದುದರಿಂದ ಭೂರುದ್ರಸೇವಾಸಕ್ತರಾದ ಭಕ್ತರು ಯಜ್ಞೋಪವೀತವನ್ನು ಧಿಕ್ಕರಿಸುತ್ತಾರೆಂದೂ ಈ ಶ್ಲೋಕಗಳ ಅಭಿಪ್ರಾಯವಿರುತ್ತದೆ. "ಯಜ್ಞೋಪವೀತಂ ಪರಮಂಪವಿತ್ರಂ" ಎಂಬೀ ವೇದಮಂತ್ರದಲ್ಲಿರುವ ಯಜ್ಞೋಪವೀತ ಶಬ್ದಕ್ಕೆ ಕ್ರಿಯಾಸಾರ-ಲಿಂಗಧಾರಣ ಚಂದ್ರಿಕಾ ಮೊದಲಾದ ಗ್ರಂಥಕಾರರು ವೇದಪುರುಷನ ಅಭಿಪ್ರಾಯದಂತೆ ಪವಿತ್ರವೆಂದು ಹೇಳಿರುವರು. ಈ ಶ್ಲೋಕಾಭಿಪ್ರಾಯದಂತೆಯೇ ಹೋದರೆ ಇವರೆಲ್ಲರೂ, ವೇದಪುರುಷನೂ ಹಾಗೂ ಸ್ಮಾರ್ತ ವೈಷ್ಣವಾದ್ಯಾಚಾರ್ಯರೂ ಸಹ ಯಮಮಂದಿರವನ್ನು ಪ್ರವೇಶಿಸಬೇಕಾಯಿತು. ಇಂಥ ನೀಚಾರ್ಥವುಳ್ಳ ಶ್ಲೋಕವನ್ನು ಪ್ರಮಾಣವೆಂದು ಹೇಳುವವರಿಗೆ ಯಾವಗತಿಯಾಗುವುದೋ ದೇವರೇ ಬಲ್ಲ; ಶಾಂತಂಪಾಪಂ! ಶಾಂತಂ ಪಾಪಂ !!

ಈತನು ೩೯ ನೆಯ ಪುಟದಲ್ಲಿ—

"ವೀರಶೈವ ಸದಾಚಾರ ಸಂಗ್ರಹದ ೫೪ ನೆಯ ಪುಟದಲ್ಲಿ ವಿವರಿಸಿದ ವೀರಶೈವಮತಪ್ರಕರಣದಲ್ಲಿ ಕೇವಲ ಪಾಶುಪತತಂತ್ರವೇ ಮೂಲಾಧಾರವಾಗಿರುವದರಿಂದ ಅದು ಸ್ವತಂತ್ರಪ್ರಮಾಣವೆನಿಸುವದಿಲ್ಲ. ಪಾಶುಪತತಂತ್ರದಲ್ಲಿ ವೀರಶೈವಮತವು ಸಾಮಾನ್ಯವೀರಶೈವ, ವೀರಶೈವ, ವಿಶೇಷವೀರಶೈವ, ನಿರಾಭಾರಿವೀರಶೈವವೆಂದು ಚತುರ್ವಿಧವಾಗಿ ವಿಭಾಗಿಸಲ್ಪಟ್ಟಿರುವದು ಶಾಸ್ತ್ರವಿರೋಧವಾಗಿದೆ. ವಿಭಾಗಿಸುವ ಪದಾರ್ಥವನ್ನು ಪುನಃ ವಿಭಾಗದೊಳಗೆ ಸೇರಿಸಿಕೊಂಡು ವಿಭಾಗಮಾಡುವದು ಯಾವ ಶಾಸ್ತ್ರಕಾರರಿಗೂ ಅಭಿಮತವಾಗಿರುವದಿಲ್ಲ."

ಎಂದು ಬರೆದಿದ್ದಾನೆ. ಪಾಶುಪತತಂತ್ರದಲ್ಲಿ ವೀರಶೈವಮತವು, ಸಾಮಾನ್ಯ ವೀರಶೈವ, ವೀರಶೈವ, ವಿಶೇಷವೀರಶೈವ, ನಿರಾಭಾರಿವೀರಶೈವ ಎಂದು ಚತುರ್ವಿಧವಾಗಿ ವಿಭಾಗಮಾಡಿರುವದು ಶಾಸ್ತ್ರವಿರೋಧವಂತೆ! ಇದು ಯಾವ ಶಾಸ್ತ್ರಕ್ಕೂ ವಿರೋಧವಾಗುವುದಿಲ್ಲ. ಈ ದೀಡಪಂಡಿತನಿಗೆ ಮಾತ್ರ ವಿರೋಧವಾಗಬಹುದು.

ಪಾಶುಪತತಂತ್ರ ವೀರಶೈವಸದಾಚಾರಸಂಗ್ರಹಾದಿಗ್ರಂಥಗಳಲ್ಲಿ—

ಸಿದ್ಧಾಂತೋ ವೀರಶೈವಶ್ಚ ಪುನಶ್ಚಾಪಿ ಚತುರ್ವಿಧಃ ।
ಧರ್ಮಾರ್ಥಕಾಮಮೋಕ್ಷೇತಿ ಯಥಾ ಮುಕ್ತೇಶ್ಚತುರ್ವಿಧಂ ॥
ಸಾಮಾನ್ಯವೀರಶೈವೇತಿ ವೀರಶೈವಮತಃಪರಂ ।
ವಿಶೇಷವೀರಶೈವೇತಿ ನಿರಾಭಾರೀ ತಥೈವಚ ॥

ಎಂದು ವೀರಶೈವವು ನಾಲ್ಕು ಪ್ರಕಾರವಾಗಿ ವಿಭಾಗಿಸಲ್ಪಟ್ಟಿರುವುದು. "ಶಿವಸ್ಸರ್ವೋತ್ತಮೋ ಯತ್ರ ಸಿದ್ಧಾಂತೋ ವೀರಶೈವಕಃ" ಎಂಬ ವೀರಶೈವಸದಾಚಾರಸಂಗ್ರಹದ ವಾಕ್ಯದಂತೆ ಶಿವನೇ ಸರ್ವೋತ್ತಮನೆಂಬ ಸಿದ್ಧಾಂತರೂಪವಾದ ವೀರಶೈವವು—ಸಾಮಾನ್ಯವೀರಶೈವ, ವೀರಶೈವ, ವಿಶೇಷವೀರಶೈವ, ನಿರಾಭಾರಿವೀರಶೈವವೆಂದು ಚತುರ್ವಿಧವಾಗಿದೆ. ಈ ವಿಭಾಗದಲ್ಲಿ ಸಿದ್ಧಾಂತಪದವಾಚ್ಯವಾದ ವೀರಶೈವವು ಸೇರಲಿಲ್ಲ. ಸಿದ್ಧಾಂತತ್ವವು ಸಾಮಾನ್ಯಧರ್ಮವು. ವಿಭಾಗದೊಳಗಿನ ವೀರಶೈವತ್ವವು ವಿಶೇಷಧರ್ಮವು. ಈ ಶಿವಸರ್ವೋತ್ತಮತ್ವವೆಂಬ ಸಿದ್ಧಾಂತರೂಪವೀರಶೈವತ್ವವು ಚತುರ್ವಿಧವೀರಶೈವಗಳಲ್ಲಿರುವುದರಿಂದ ವ್ಯಾಪಕವೆನಿಸುವುದು. ಸಾಮಾನ್ಯವೀರಶೈವತ್ವ ವೀರಶೈವತ್ವಾದಿಗಳು ವ್ಯಾಪ್ಯಧರ್ಮಗಳಾಗಿರುವವು. ಆದುದರಿಂದ "ತದ್ಧರ್ಮತದ್ವ್ಯಾಪ್ಯಧರ್ಮಪುರಸ್ಕಾರೇಣ ಧರ್ಮಿಪ್ರತಿಪಾದನಂ ವಿಭಾಗಃ" ಎಂಬ ವಿಭಾಗವು ಸಂಗತವಾಗುತ್ತದೆ. ಹೀಗೆ ವಿಭಾಗವು ಸಂಗತವಾಗುತ್ತಿದ್ದರೂ ಈಶ್ವರಕೃತಪಾಶುಪತತಂತ್ರದ ಮೇಲೆ ಆಕ್ಷೇಪಿಸುವುದು ನಾಸ್ತಿಕ್ಯಬುದ್ಧಿವಿಲಸಿತವೇ ಸರಿ!

ಅಪ್ಪಾ ಮುಂಡಿಯೇ! ಸೂಕ್ಷ್ಮಾಗಮದ ೮ ನೆಯ ಪಟಲದಲ್ಲಿರುವ—

ನೋಹೀ ಭಕ್ತಃ ಪೂಜಕಶ್ಚ ವೀರಶೈವಃ ಪ್ರಸಾದವಾನ್ ।
ಪ್ರಾಣೀಚಾಚಾರಲಿಂಗಾದಿಷ್ವೇವಂ ಭಕ್ತೋಽಪಿ ಷಡ್ವಿಧಃ ॥

ಎಂಬ ಶ್ಲೋಕದಲ್ಲಿ ಭಕ್ತಪದಾರ್ಥದ ವಿಭಾಗದಲ್ಲಿ ಭಕ್ತಪದಾರ್ಥವು ಸೇರಿಸಲ್ಪಟ್ಟು ವಿಭಾಗಮಾಡಲ್ಪಟ್ಟಿರುವುದನ್ನು ಕಣ್ದೆರೆದು ನೋಡು! ಈತನು 'ಹಾಡಿದ್ದು ಹಾಡೋ ಕಿಸಬಾಯಿದಾಸ!' ಎಂಬಂತೆ ಹಿಂದೆ ತೋರಿಸಿದ ಶವಾಗಮಶ್ಲೋಕಗಳನ್ನೇ ಪುನಃ ನಿಷ್ಪ್ರಯೋಜನವಾಗಿ ಬರೆದುಕೊಂಡಿದ್ದಾನೆ. ಅದರ ಖಂಡನವು ಈ ಮೊದಲೇ ಆಗಿರುವುದರಿಂದ ವಾಚಕರು ಆ ವಿಷಯವನ್ನು ಅಲ್ಲಿಯೇ ಓದಿಕೊಳ್ಳಬೇಕು.

ಈತನು ೪೧ ನೆಯ ಪುಟದಲ್ಲಿ—

"ಶಿಖಾಹೀನಸ್ಯ ಭಕ್ತಸ್ಯ ನಚ ವಕ್ತ್ರಾವಲೋಕನಂ" ಎಂಬ ವಚನವು ಮುದ್ರಿತವಾದ ಪಾರಮೇಶ್ವರಾಗಮದಲ್ಲಿರುವದಿಲ್ಲ. ಇತರ ಪಾರಮೇಶ್ವರಾಗಮದಲ್ಲಿದ್ದರೂ ಅದರಿಂದ ವೀರಶೈವರಿಗೆ ಕರ್ಮಾಂಗವಾದ ಶಿಖೆಯು ಸಿದ್ಧವಾಗುವದೆಂತಲೂ ಶಿಖೆಯಿಲ್ಲದ ಭಕ್ತನ ಮುಖವನ್ನು ನೋಡಕೂಡದೆಂತಲೂ ನೋಡಿದರೆ ಪಾಪವೆಂತಲೂ ಹೇಳುವದು ಯುಕ್ತವಲ್ಲ. ಯಾಕಂದರೆ, ಶಿಖೆಯಿಲ್ಲದ ಭಕ್ತನ ಮುಖವನ್ನು ನೋಡಕೂಡದು ನೋಡಿದರೆ ಪಾಪವೆಂದಮೇಲೆ, ವೀರಶೈವರಲ್ಲಿ ಸರ್ವರೂ ಶಿಖೆಯನ್ನು ಬಿಟ್ಟೇತೀರಬೇಕೆಂದು ನಿಯಮವನ್ನು ಮಾಡಿದಂತಾಗುವದು"

ಎಂದು ಬರೆದಿರುತ್ತಾನೆ. ವಾಚಕರೇ! ನೋಡಿದಿರಾ, ಈ ಮುಂಡಿಯ ವಿಚಾರಸರಣಿಯನ್ನು? ಶಿಖಾಹೀನನಾದ ಭಕ್ತನ ಮುಖವನ್ನು ನೋಡಬಾರದೆಂದರೆ, ವೀರಶೈವರಲ್ಲಿ ಸರ್ವರೂ ಶಿಖೆಯನ್ನು ಬಿಟ್ಟೇತೀರಬೇಕೆಂದು ನಿಯಮಮಾಡಿದಂತಾಗುವುದಂತೆ! ಪಾರಮೇಶ್ವರಾಗಮದಲ್ಲಿರುವ

ಬ್ರಾಹ್ಮಣಾ ವೀರಶೈವಸ್ಥಾಃ ಶಿಖಾಯಜ್ಞೋಪವೀತಿನಃ ॥

ಇತ್ಯಾದಿವಚನಗಳಿಂದ, ವೀರಶೈವಬ್ರಾಹ್ಮಣರಿಗೆ ಶಿಖಾಸೂತ್ರಧಾರಣವು ಹೇಳಲ್ಪಟ್ಟಿರುವುದಲ್ಲದೆ ಶೂದ್ರಾದಿಗಳಿಗೆ ಹೇಳಲ್ಪಟ್ಟಿಲ್ಲ.

ಪಾರಮೇಶ್ವರಾಗಮದ ೧೭ನೆಯ ಪಟಲದಲ್ಲಿ—

**ಶಿರೋ ಮುಂಡಂ ಮುಖೇ ಮಂತ್ರಃ ಕಂಠೇ ರುದ್ರಾಕ್ಷಧಾರಣಂ।**
**ಲಿಂಗಪೂಜಾ ಸದಾ ದೇವಿ ತೇ ವೈ ಚಾಂತರಶೈವಿನಃ ॥**
**ನಾಪಿತಾ ರಜಕಾ ಗೋಪಾಃ ಕುಲಾಲಾಸ್ತಿಲಘಾತಕಾಃ ।**
**ವೇಶ್ಯಾದ್ಯಾಶ್ಚಾಂತ್ಯಜಾತ್ಯಂತಾಸ್ತೇವೈ ಚಾಂತರಶೈವಿನಃ ॥**

ಇತ್ಯಾದಿ ವಚನಗಳಿಂದ ನಾಪಿತ (ಕ್ಷೌರಿಕ) ರಜಕ (ಅಗಸ) ಮೊದಲಾದ ಲಿಂಗಧಾರಿ ಅಂತರಶೈವರಿಗೆ ಶಿರೋಮುಂಡನವು ಹೇಳಲ್ಪಟ್ಟಿರುವುದರಿಂದ ಎಲ್ಲರೂ ಶಿಖೆಯುಳ್ಳವರಾಗಬೇಕೆಂದು ಧರ್ಮಶಾಸ್ತ್ರವು ಶಾಸನಮಾಡುವುದಿಲ್ಲವೆಂದು ಸ್ಪಷ್ಟವಾಗುತ್ತದೆ. ಈ ವಿಷಯವನ್ನು ಈತನು ಚನ್ನಾಗಿ ತಿಳಿದುಕೊಳ್ಳಬೇಕು.

ಶಿವಭಕ್ತದ್ವಿಜರು ಧರ್ಮಜ್ಞಾನಶೂನ್ಯತೆಯಿಂದಾಗಲಿ ಶೂದ್ರಾದಿಗಳ ಸಂಸರ್ಗದಿಂದಾಗಲಿ ಶಿಖಾಹೀನರಾದರೆ ಅವರ ಮುಖವನ್ನು ನೋಡಬಾರದೆಂದು ಆ ಶ್ಲೋಕದ ತಾತ್ಪರ್ಯವಿರುವುದು.

ಇದೇ ಅಭಿಪ್ರಾಯವನ್ನು—

**ಅಂಗಹೀನಂಚಾಧಿಕಾಂಗಂ ಕೇಶಹೀನಂ ತಥೈವಚ ।**
**ಅರ್ಚನಾದಿಕ್ರಿಯಾಕಾಲೇ ದೀಕ್ಷಿತೋ ನೈವ ದರ್ಶಯೇತ್॥೩೪॥**

(ವೀರಾಗಮ. ಪಟಲ. ೨೫)

ಎಂದು ವೀರಾಗಮವು ಸಾರುತ್ತದೆ. ದೀಕ್ಷಿತನಾದವನು ಶಿವಪೂಜಾಕಾಲದಲ್ಲಿ ಅವಯವಹೀನನನ್ನೂ, ಅಧಿಕಾವಯವಗಳುಳ್ಳವನನ್ನೂ, ಶಿಖಾಹೀನನನ್ನೂ ಅರ್ಥಾತ್ ಬೋಳುದಲೆಯವನನ್ನೂ ನೋಡಬಾರದೆಂದು ಈ ಶ್ಲೋಕದ ಅಭಿಪ್ರಾಯವಿರುವುದು. ವೀರಾಗಮವೂ ಹಾಗೂ ಪಾರಮೇಶ್ವರಾಗಮವೂ ಶಿಖಾಹೀನನಾದ ಭಕ್ತನ ಮುಖವನ್ನು ನೋಡಬಾರದೆಂದು ಏಕಕಂಠದಿಂದ ಸಾರಿರುವುದರಿಂದ ಶಿಖಾಶೂನ್ಯಭಕ್ತರ ಮುಖವನ್ನು ನೋಡಬಾರದೆನ್ನುವುದೇ ಶಾಸ್ತ್ರಸಿದ್ಧಾಂತವು.

ಈತನು ಈ ಸಂದರ್ಭದಲ್ಲಿ—" ಶಿಖೀ ಮುಂಡೀ ಜಟೀ ವಾಪಿ " ಎಂಬೀ ಶ್ಲೋಕವನ್ನುದಾಹರಿಸಿ ವೀರಶೈವರಿಗೆ ಮುಂಡನವು ವಿಕಲ್ಪ ವಾಗಿ ಹೇಳಲ್ಪಟ್ಟಿರುವುದೆಂದು ಬರೆದಿದ್ದಾನೆ. ಹೀಗೆ ಬರೆದಿರುವುದು ಮಂದತನವು. ಏಕೆಂದರೆ—ಈ ಶ್ಲೋಕವು ಎಲ್ಲಾ ವೀರಶೈವರನ್ನು ದ್ದೇಶಿಸಿ ಹೇಳಲ್ಪಟ್ಟಿರದೆ ಕೇವಲ ನಿರಾಭಾರಿಗಳನ್ನುದ್ದೇಶಿಸಿ ಹೇಳಲ್ಪಟ್ಟಿ ರುವುದು. ಆದುದರಿಂದ ಈತನ ಅಭಿಪ್ರಾಯವು ತುಚ್ಛವಾಗಿದೆ. ವೈದಿಕಕರ್ಮಾಧಿಕಾರವುಳ್ಳ ಶಿವಭಕ್ತದ್ವಿಜ (ಬ್ರಹ್ಮ ಕ್ಷತ್ರ ವೈಶ್ಯ) ರಿಗೆ ಶಿಖಾಸೂತ್ರಗಳಿರಬೇಕೆಂಬ ವಿಷಯವು ಶೈವಮಹಾಪುರಾಣವಾಯವೀಯ ಸಂಹಿತೆಯಲ್ಲಿ—

ಅಥ ವಕ್ಷ್ಯಾಮಿ ದೇವೇಶಿ ಭಕ್ತಾನಾಮಧಿಕಾರಿಣಾಂ ।
ವಿದುಷಾಂ ದ್ವಿಜಮುಖ್ಯಾನಾಂ ವರ್ಣಧರ್ಮಂ ಸಮಾಸತಃ ॥
ತ್ರಿಸ್ನಾನಂ ಚಾಗ್ನಿಕಾರ್ಯಂಚ ಲಿಂಗಾರ್ಚನಮನುತ್ತಮಂ ।
ದಾನಮೀಶ್ವರಭಾವಶ್ಚ ದಯಾ ಸರ್ವತ್ರ ಸರ್ವದಾ ॥
ಸತ್ಯಂ ಸಂತೋಷಮಾಸ್ತಿಕ್ಯಂ ಅಹಿಂಸಾ ಸರ್ವಜಂತುಷು ।
ಹ್ರೀಶ್ಶ್ರದ್ಧಾಽಧ್ಯಾಪನಂ ಯೋಗಃ ಸದಾಧ್ಯಯನಮೇವಚ ॥
ವ್ಯಾಖ್ಯಾನಂ ಬ್ರಹ್ಮಚರ್ಯಂ ಚ ಶ್ರವಣಂ ಚ ತಪಃ ಕ್ಷಮಾ ।
ಶೌಚಂ ಶಿಖೋಪವೀತಂಚ ಉಷ್ಣೀಷಂಚೋತ್ತರೀಯಕಂ ॥

ಇತ್ಯಾದಿ ವಚನಗಳಿಂದ ಶಾಸನಮಾಡಲ್ಪಟ್ಟಿದೆ. ಈ ಧರ್ಮಗಳಲ್ಲಿ— "ಶಿಖೋಪವೀತಂಚ" ಎಂದು ಶಿಖಾಸೂತ್ರಧಾರಣವು ಸಾಕ್ಷಾತ್ ಶಿವನಿಂದಲೇ ಹೇಳಲ್ಪಟ್ಟಿರುವುದರಿಂದ ಶಿಖಾಸೂತ್ರಧಾರಣವು ಶಿವಭಕ್ತ ದ್ವಿಜರಿಗೆ ಮುಖ್ಯಧರ್ಮವೆಂದು ತಿಳಿಯತಕ್ಕದ್ದು. ಮುಂದೆ ಈತನು ರೇಣುಕಾಚಾರ್ಯರ ವಿಷಯವನ್ನೆತ್ತಿಕೊಂಡು ಅವರಿಗೆ ಶಿಖೆಯಿದ್ದಿಲ್ಲ ವೆಂದೂ ಅವರು ಜಟಾಧಾರಿಗಳಾಗಿದ್ದರೆಂದೂ ಬರೆದಿರುತ್ತಾನೆ. ಜಟಾ ಧಾರಣವು ಸರ್ವಶ್ರೇಷ್ಠವಾಗಿರುವುದರಿಂದಲೂ ಆದರಲ್ಲಿಯೇ ಶಿಖಾಧಾ

ರಣವು ಅಂತರ್ಭೂತವಾಗಿರುವುದರಿಂದಲೂ ಆ ಆಚರಣೆಯು ಶಿವ ಪ್ರೀತಿಕರವಾಗಿದೆ. ಈ ಧರ್ಮಶಾಸ್ತ್ರರಹಸ್ಯವನ್ನು ತಿಳಿಯದೆ ಹುಚ್ಚ ರಂತೆ ಬರೆದಿರುವುದನ್ನು ನೋಡಿದರೆ ಈತನಿಗೆ ಧರ್ಮಶಾಸ್ತ್ರದ ಗಂಧವೇ ಅಂಟಿಕೊಂಡಿಲ್ಲವೆಂದು ಹೇಳಬೇಕಾಗುತ್ತದೆ. ಈತನು "ಶಿಖಾಹೀನಸ್ಯ ಭಕ್ತಸ್ಯ" ಎಂಬ ಶ್ಲೋಕವನ್ನು "ಶಿಖಾಯುಕ್ತಸ್ಯ ಭಕ್ತಸ್ಯ" ಎಂದು ತಿದ್ದಿಕೊಳ್ಳಬೇಕೆಂದು ಬರೆದಿರುವುದು ಉನ್ಮತ್ತಪ್ರಲಾಪಸದೃಶವಾಗಿದೆ. ವೀರಶೈವದ್ವಿಜರಿಗೆ ಶಿಖಾಸೂತ್ರಗಳಿರಬೇಕೆಂದು ಶಿವಾಗಮಗಳೂ ಅನೇಕ ಮತಗ್ರಂಥಗಳೂ ಘಂಟಾಘೋಷವಾಗಿ ಸಾರುತ್ತಿರಲು, ಆ ಅಭಿಪ್ರಾಯಕ್ಕೆ ವಿರುದ್ಧವಾಗಿ ತಿದ್ದಿಕೊಳ್ಳಬೇಕೆಂದು ಬರೆದಿರುವ ಈತನ ಬರವಣಿಗೆಗೆ ಎಷ್ಟು ಧಿಕ್ಕಾರವನ್ನಿಟ್ಟರೂ ಅಲ್ಪವೇ ಸರಿ!

ಈತನು ೪೪ ನೆಯ ಪುಟದಲ್ಲಿ—

> ವೀರಮಾಹೇಶ್ವರಾಣಾಂ ತು ತದ್ಭಕ್ತಾನಾಂ ತು ಪಾರ್ವತಿ |
> ಪಟ್ಟಾಧಿಕಾರಿಣಾಂ ನೈವ ಶಿಖಾಧಾರಣಮೀರಿತಂ ||

ಎಂಬ ಶ್ಲೋಕವನ್ನುದಾಹರಿಸಿದ್ದಾನೆ. ಇದು ಕಾಮಿಕಶಿವಾಗಮಶ್ಲೋಕ ವಂತೆ! ಈ ಆಗಮವು ಮದ್ರಾಸ್‌ಪಟ್ಟಣದಲ್ಲಿ ಮುದ್ರಿತವಾಗಿದೆ. ಆ ಆಗಮದಲ್ಲಿ ಈ ಶ್ಲೋಕವು ಕೋಟಿ ಕೋಟಿ ವರ್ಷಗಳವರೆಗೆ ಹುಡುಕಿದರೂ ಸಿಗುವಂತಿಲ್ಲ. ಈ ಶ್ಲೋಕವನ್ನು ಯಾವನೋ ಒಬ್ಬ ಶೂದ್ರನು ಮಾಹೇಶ್ವರರನ್ನೆಲ್ಲಾ ಸ್ವಧರ್ಮಭ್ರಷ್ಟರನ್ನಾಗಿ ಮಾಡುವ ಉದ್ದೇಶದಿಂದ ಬರೆದಿರುವನಲ್ಲದೆ ಬೇರೆಯಲ್ಲ. ಯಾವುದಾದರೊಂದು ಶ್ಲೋಕವನ್ನು ಯಾವುದಾದರೊಂದು ಆಗಮಾಂತರ್ಗತವೆಂದು ಬರೆದರೆ ಕೇಳುವರಾರು? ಎಂಬ ದೃಢಬುದ್ಧಿಯಿಂದ ಈ ಮುಂಡಿಯು ಹೀಗೆ ಅನೇಕ ಶ್ಲೋಕಗಳನ್ನು ಬರೆದಿರುವಂತೆ ಕಾಣುತ್ತದೆ. ಮುಂಡಿಯೇ? ಹಿಂದಿನ ಕಾಲದಂತೆ ಇದು ಮಬ್ಬಿನಕಾಲವಲ್ಲ. ಪ್ರತಿಯೊಂದು ವಿಷಯವನ್ನೂ ಕೂಲಂಕಷವಾಗಿ ವಿಚಾರಿಸುವ ಕಾಲವಿದು. ಎಲ್ಲಾ ಆಗಮ

ಗಳೂ ಮುದ್ರಿತಗಳಾಗಿವೆ. ಮೋಸದಿಂದ ಏನಾದರೂ ಬರೆದರೆ ಅದು ಈ ಕಾಲದಲ್ಲಿ ಸಫಲವಾಗುವಂತಿಲ್ಲ. ಇರಲಿ; ಈ ಮುಂಡಿಯು ಬರೆದ ಶ್ಲೋಕಗಳೆಲ್ಲವೂ ಕೃತ್ರಿಮಗಳಿದ್ದು ಶಿವಾಗಮಗಳಲ್ಲಿ ಹೇಳಲ್ಪಟ್ಟವಲ್ಲವೆಂಬ ವಿಷಯುವನ್ನು ಈತನ ಬರವಣಿಗೆಯಿಂದಲೇ ಹೊರಪಡಿಸುತ್ತೇವೆ. ವಾಚಕರು ಈ ವಿಷಯುವನ್ನು ಚನ್ನಾಗಿ ಪರಾಮರ್ಶಿಸಬೇಕು. ಈತನು ಮೇಲುದಾಹರಿಸಿದ "ವೀರಮಾಹೇಶ್ವರಾಣಾಂತು" ಎಂಬ ಶ್ಲೋಕವನ್ನು ೪೪ನೆಯ ಪುಟದಲ್ಲಿ ಇದು ಕಾಮಿಕಾಗಮಶ್ಲೋಕವೆಂದು ಬರೆದಿದ್ದಾನೆ. ಪುನಃ ಇದೇ ಶ್ಲೋಕವನ್ನು ೮೩ನೆಯ ಪುಟದಲ್ಲಿ ಬರೆದು ವಾತುಲಾಗಮಶ್ಲೋಕವೆಂದು ಬರೆದಿದ್ದಾನೆ. ಹೀಗೆ ಆಗಮಗಳ ಹೆಸರುಗಳೇ ಬದಲಾಯಿಸಿರುವುದರಿಂದ ಈತನ ವಂಚಕತನವು ಎಷ್ಟರಮಟ್ಟಿಗಿರಬಹುದೆನ್ನುವದನ್ನು ಕುಶಲರೇ ಯೋಚಿಸಬೇಕು. ಇಂಥ ಕೃತ್ರಿಮದುಷ್ಟ ಶ್ಲೋಕಗಳನ್ನುದಾಹರಿಸಿ ಲೋಕವನ್ನು ವಂಚಿಸುತ್ತಿರುವ ಈತನ ವರ್ತನಕ್ಕೆ ಧಿಕ್ಕಾರವಿರಲಿ.

ಈತನು ೪೫-೪೬-೪೭ ನೆಯ ಪುಟಗಳಲ್ಲಿ—"ವಿಶಿಖಾಸಃ" ಎಂಬ ಪದಕ್ಕೆ ವಿವಿಧಶಿಖೆಯೆಂದು ಅರ್ಥಮಾಡಿರುವುದು ಪ್ರಮಾಣವಲ್ಲವೆಂದೂ, ಭಟ್ಟಭಾಸ್ಕರನು ಅನ್ಯಮತದವನಾಗಿರುವುದರಿಂದ ತನ್ನ ಮತಕ್ಕೆ ಅನುಸಾರವಾಗಿ ಬರೆದಿರುವನೆಂದೂ ಬರೆದುಕೊಂಡು ನಿಷ್ಪ್ರಯೋಜಿನವಾಗಿ ಹರಟಿಯನ್ನು ಕೊಚ್ಚಿದ್ದಾನೆ. ಇದು ಮತಗ್ರಂಥಗಳನ್ನು ಕಣ್ದೆರೆದು ನೋಡದೆ ಇದ್ದುದರ ಫಲವಾಗಿದೆ. ಮುಂಡಿಯೇ? ಅನೇಕ ಜನ ವೀರಶೈವಗ್ರಂಥಕಾರರು ಪರಮತೀಯರು ಬರೆದ ಗ್ರಂಥಗಳನ್ನು ಪ್ರಮಾಣವನ್ನಾಗಿ ತೆಗೆದುಕೊಂಡಿಲ್ಲವೇನು? ಅವರು ಮೂರ್ಖರೇನು? ಹೀಗೆ ಬಾಲಕರಂತೆ ನುಡಿದರೆ ಜನರು ಏನಂದಾರೆಂಬ ಭೀತಿಯಾದರೂ ಇರಬಾರದೇ? ಅಸ್ತು! ನೀನಾದರೂ ನಿನ್ನ ಅಮಂಗಲಪುಸ್ತಕದಲ್ಲಿ ಜ್ಞಾನಶಿಖಾ ಜ್ಞಾನಯಜ್ಞೋಪವೀತಗಳೆಂದು ದುರಾಗ್ರಹದಿಂದ ಸಾಧಿಸುವ

ಸಮಯದಲ್ಲಿ ಶಂಕರಾಚಾರ್ಯರ ದೃಷ್ಟಾಂತವನ್ನೂ, ಪಾರಾಶರಸ್ಮೃತಿ ವಚನವನ್ನೂ ಏಕೆ ತೆಗೆದುಕೊಂಡಿರುವಿ ? ಇಷ್ಟು ಪೂರ್ವಾಪರಪರಿಜ್ಞಾನ ವಿಲ್ಲದೆ ಬರೆದಿರುವ ಈತನ ಮಬ್ಬುಬರವಣಿಗೆಯನ್ನು ಎಷ್ಟು ಬಣ್ಣಿಸಿದರೂ ಅಲ್ಪವೇ ಸರಿ! ಶಿವಾಗಮಗಳಲ್ಲಿಯೂ ವೀರಶೈವಮತಗ್ರಂಥಗಳಲ್ಲಿಯೂ ಶಿಖಾಸೂತ್ರಧಾರಣವು ಘಂಟಾಘೋಷವಾಗಿ ಹೇಳಲ್ಪಟ್ಟಿರುವುದರಿಂ ದಲೂ ಆ ಮಾರ್ಗವನ್ನನುಸರಿಸಿಯೇ ಭಟ್ಟಭಾಸ್ಕರಾಚಾರ್ಯರು 'ವಿವಿಧಶಿಖಾಃ' ಎಂದು ಅರ್ಥಮಾಡಿರುವುದರಿಂದಲೂ ಅವರ ಅರ್ಥವು ವೀರಶೈವದ್ವಿಜರಿಗೆ ಸರ್ವರೀತಿಯಿಂದಲೂ ಮಾನ್ಯವಾಗಿದೆ.

ಈತನು ೪೮ ನೆಯ ಪುಟದಲ್ಲಿ—

> "ಶಿಖಾಯಾಮೇಕಮೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ" ಎಂಬ ಸಿದ್ಧಾಂತಶಿಖಾಮಣಿವಚನವು ವೀರಶೈವರಿಗೆ ಕರ್ಮಾಂಗಭೂತವಾದ ಶಿಖಾಧಾರಣವನ್ನು ಬೋಧಿಸುವ ವಿಧಿವಾಕ್ಯವಾಗಿರದೆ ಕೇವಲ ರುದ್ರಾಕ್ಷಧಾರಣಪ್ರತಿಪಾದಕವಾದ ವಿಧಿ ವಾಕ್ಯವಾಗಿದೆ."

ಎಂದು ಬರೆದಿದ್ದಾನೆ. ಈ ವಿಷಯವನ್ನು ವಿಮರ್ಶಿಸೋಣ!

"ಶಿಖಾಯಾಮೇಕಮೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ" ಎಂಬ ವಾಕ್ಯವು ಶಿಖಾನುಯೋಗಿಕೈಕಾಸ್ಯರುದ್ರಾಕ್ಷ ಕರ್ಮಕಧಾರಣವಿಧಾಯಕವಾಗಿಲ್ಲವೋ ? ಆಗಿರುವುದೆಂದರೆ ಶಿಖೆಯು ಪರಂಪರಾವಿಧಿವಿಷಯವಾಗಲಿಲ್ಲವೇ ? ವಿಧಿವಿಷಯವಾದಮೇಲೆ ಈ ವಾಕ್ಯವು ಶಿಖೆಗೂ ವಿಧಾಯಕವೇ ಆಯಿತಲ್ಲವೇ ? ಈ ವಿಧಿವಾಕ್ಯಘಟಕ ಗಳಾದ ಶಿಖಾದಿಗಳು "ಧಾರಯೇತ್" ಎಂಬ ವಿಧಿಗೆ ವಿಷಯಗಳಾಗಿ ರುವುದರಿಂದ ಈ ವಾಕ್ಯವು ವೀರಶೈವರಿಗೆ ಶಿಖೆಯನ್ನು ಬೋಧಿಸುವ ವಿಧಿವಾಕ್ಯವೇ ಆಗುವುದಷ್ಟೆ? ವೀರಶೈವರಿಗೆ ಶಿಖೆಯೇ ಇಲ್ಲದಿರಲು ಶಿಖಾನುಯೋಗಿಕತ್ವವೂ ರುದ್ರಾಕ್ಷಕರ್ಮಕತ್ವವೂ ಧಾರಣದಲ್ಲಿ ಬಾಧಿತ ಗಳಾಗುವುದಿಲ್ಲವೆ? ಆದುದರಿಂದ ಈತನು ಈ ವಾಕ್ಯವು ವೀರಶೈವರಿಗೆ

ಶಿಖಾಧಾರಣವನ್ನು ಬೋಧಿಸುವ ವಿಧಿವಾಕ್ಯವಾಗಿರದೆ, ಕೇವಲ ರುದ್ರಾಕ್ಷ ಧಾರಣವನ್ನು ಬೋಧಿಸುವ ವಿಧಿವಾಕ್ಯವಾಗಿದೆಯೆಂದು ಹೇಳುವುದು ಅಜ್ಞಾನವಿಲಸಿತವೇ ಸರಿ! ಯಾಕಂದರೆ— "ಏತತ್ಸೋಮಸ್ಯ ಸೂರ್ಯಸ್ಯಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" ಎಂಬ ಮಂತ್ರವು ಇಷ್ಟಲಿಂಗಧಾರಣವಿಧಾಯಕವಾಗಿದ್ದರೂ ಈ ಮಂತ್ರ ಘಟಕಪವಿತ್ರತ್ವಾದಿಗಳಿಗೂ ವಿಧಾಯಕವಾಗಿದೆಯೆನ್ನುವದು ಸರ್ವ ಜನಾನುಭವಸಿದ್ಧವೇ ಆಗಿದೆ. "ಯಜ್ಞೋಪವೀತಂ ಪರಮಂ ಪವಿತ್ರಂ" ಎಂಬೀ ಮಂತ್ರವು ಯಜ್ಞೋಪವೀತಧಾರಣವಿಧಾಯಕ ವಾಗಿದ್ದರೂ ತದ್ಘಟಕಪವಿತ್ರತ್ವಾದಿಗಳಿಗೂ ವಿಧಾಯಕವಾಗಿದೆ. ಆದು ದರಿಂದಲೇ ಶ್ರೀಮನ್ನೀಲಕಂಠಶಿವಾಚಾರ್ಯರೇ ಮೊದಲಾದ ಪ್ರಸಿದ್ಧ ಪಂಡಿತರು "ಪವಿತ್ರಮಿತ್ಯನೇನ ಯಜ್ಞೋಪವೀತಂ ಪರಮಂ ಪವಿತ್ರಂ ಇತಿವತ್ ಶೌಚಾಚಮನಾದ್ಯಪಾವಿತ್ರ್ಯಸಮಯೇ ಪವಿತ್ರತ್ವವಿಧಾನಾತ್ ಯಜ್ಞೋಪವೀತವತ್ಸರ್ವದಾ ಧಾರ್ಯಂ" ಇತ್ಯಾದಿವಾಕ್ಯಗಳಿಂದ ಇಷ್ಟಲಿಂಗಧಾರಣ ಹಾಗೂ ಯಜ್ಞೋಪವೀತ ಧಾರಣವಿಧಾಯಕವಾಕ್ಯಘಟಕಪವಿತ್ರತ್ವಕ್ಕೂ ಕೂಡ ವಿಧಿವಿಷಯತೆ ಯನ್ನು ಮನ್ನಿಸಿ ಈ ವಾಕ್ಯಗಳು ಸ್ವಘಟಕಪವಿತ್ರತ್ವಾದಿಗಳಿಗೂ ವಿಧಾಯ ಕಗಳಾಗಿರುವುದರಿಂದ ವೀರಶೈವೇಷ್ಟಲಿಂಗನಿಷ್ಠಪವಿತ್ರತ್ವಾದಿಗಳನ್ನೂ ಯಜ್ಞೋಪವೀತನಿಷ್ಠಪವಿತ್ರತ್ವಾದಿಗಳನ್ನೂ ಬೋಧಿಸುವ ವಿಧಿವಾಕ್ಯ ಗಳಾಗಿರುವುವೆಂದು ಅಭಿಪ್ರಾಯಪಡುವರು. ಆದುದರಿಂದ "ಶಿಖಾಯಾ ಮೇಕಮೇಕಾಸ್ಯಂ" ಎಂಬೀ ವಾಕ್ಯವು ವೀರಶೈವರಿಗೆ ಶಿಖಾವಿಧಾಯ ಕವಾಗಿದೆನ್ನುವದನ್ನು ತಿಳಿದುಕೊಳ್ಳಬೇಕಲ್ಲದೆ ವಿಧಾಯಕವಾಗಿಲ್ಲವೆಂದು ತಿಳಿದುಕೊಂಡಿರುವುದು ತಪ್ಪು.

ಪುನಃ ಈತನು ಇದೇ ಪುಟದಲ್ಲಿ—

"ಈ ವಿಧಿವಾಕ್ಯದಲ್ಲಿರುವ ಶಿಖಾ ಶಬ್ದಕ್ಕೆ ಕರ್ಮಾಂಗಭೂತವಾದ ಜುಟ್ಟೆಂದು ಅರ್ಥವನ್ನು ಮಾಡುವದು ವಿಹಿತವಲ್ಲ. ಹಾಗೆ ಮಾಡಲಿಕ್ಕೆ ಅವಕಾಶವಿಲ್ಲ. ಪ್ರಕೃತ

ಶಿಖಾಶಬ್ದಕ್ಕೆ ಕರ್ಮಾಂಗಭೂತವಾದ ಜುಟ್ಟೆಂದು ಅರ್ಥವನ್ನು ಮಾಡಿದ ಪಕ್ಷದಲ್ಲಿ ಪ್ರತಿಯೊಬ್ಬ ವೀರಶೈವನೂ ಜುಟ್ಟನ್ನು ಬಿಟ್ಟೇ ಶಿವಪೂಜೆಯನ್ನು ಮಾಡಬೇಕಾಗುವದು. ಅದರಿಂದ ವೀರಶೈವರು ಜಟಾಧಾರಿಗಳಾಗಿಯೂ ಅಥವಾ ಮುಂಡಿಗಳಾಗಿಯೂ ಇರಬಹುದೆಂದು ಪ್ರತಿಪಾದಿಸುವ 'ಜಟೀಮುಂಡೀ—ಜಟಿನೋ ಮುಂಡಿನೋ ಭೂತ್ವಾ ವರ್ತಂತೇ ಮಹಿಮಾನ್ವಿತಾಃ |' ಇತ್ಯಾದಿಶಿವಾಗಮವಚನಗಳು ಅಪ್ರಮಾಣವೆನಿಸುವವು. ಪ್ರಮಾಣವಾದ ಪಕ್ಷದಲ್ಲಿ 'ಶಿಖಾಯಾಮೇಕಮೇಕಾಸ್ಯಂ' ಇತ್ಯಾದಿ ವಾಕ್ಯದಲ್ಲಿರುವ ಶಿಖಾ ಶಬ್ದಕ್ಕೆ ಕರ್ಮಾಂಗಭೂತವಾದ ಜುಟ್ಟೆಂದು ಅರ್ಥಮಾಡುವದು ವಿರೋಧವು. ಜಟಾಧಾರಿಗಳೂ ಅಥವಾ ಮುಂಡಿಗಳೂ ಆದ ವೀರಶೈವರಲ್ಲಿ ಕರ್ಮಾಂಗಭೂತವಾದ ಜುಟ್ಟಿರುವದಿಲ್ಲ."

ಎಂದು ಬರೆದಿರುತ್ತಾನೆ. ಮುಂಡಿಯೇ ! "ಶಿಖಾಯಾಮೇಕಮೇಕಾಸ್ಯಂ" ಎಂಬೀ ವಾಕ್ಯದಲ್ಲಿರುವ ಶಿಖಾಶಬ್ದಕ್ಕೆ ಪತಿಕರ್ಮಾಂಗಭೂತವಾದ ಶಿಖೆಯೆಂದು ಅರ್ಥಮಾಡುವುದೇ ಸರ್ವಸಮ್ಮತವು. ಶಿಖೆಯು ಈ ವಿಧಿವಾಕ್ಯಘಟಕವಾಗಿರುವುದರಿಂದ ಅದಕ್ಕೆ ಶಿಖೆಯೆಂದು ಅರ್ಥಮಾಡುವುದು ವಿಹಿತವಲ್ಲವೆನ್ನುವುದು ಭ್ರಮೆಯು. ಹೀಗೆ ಜುಟ್ಟೆಂದು ಅರ್ಥಮಾಡಿದ ಪಕ್ಷದಲ್ಲಿ "ಜಟೀ ಮುಂಡೀ ಶಿಖೀ ವಾಪಿ ಕೀರ್ಣಕೇಶೋ ದಿಗಂಬರಃ" ಎಂಬ ಪಾರಮೇಶ್ವರಾಗಮದ ೧೭ನೆಯ ಪಟಲದ ಶ್ಲೋಕವೂ, "ಜಟೀ ಮುಂಡೀ ಶಿಖೀ ವಾಪಿ ಕಾಷಾಯವಸನಾನ್ವಿತಃ" ಎಂಬ ಸೂಕ್ಷ್ಮಾಗಮದ ೭ ನೆಯ ಪಟಲದ ಶ್ಲೋಕವೂ ಅಪ್ರಮಾಣಗಳೆನಿಸುವುದಿಲ್ಲ. ಏಕೆಂದರೆ—ನಿರಾಭಾರಿಗಳಿಗೆ ವಿಕಲ್ಪವಾಗಿ ಜಟಾಮುಂಡನಗಳು ಹೇಳಲ್ಪಟ್ಟಿರುವಂತೆ ಶಿಖೆಯೂ ಹೇಳಲ್ಪಟ್ಟಿರುವುದರಿಂದ, ಯಾವ ಸನ್ಯಾಸಿಗಳು ಶಿಖೆಯುಳ್ಳವರೋ ಅವರು ಶಿಖೆಯಲ್ಲಿ ಏಕಮುಖದ ರುದ್ರಾಕ್ಷಿಯನ್ನು ಧರಿಸಿಕೊಂಡು ಶಿವಪೂಜೆಯನ್ನು ಮಾಡಬೇಕು. ಯಾವ ಸನ್ಯಾಸಿಗಳು ಜಡೆಯುಳ್ಳವರೋ ಅವರು ಜಟಾಂತರ್ಗತವಾದ ಮಧ್ಯಶಿಖೆಯಲ್ಲಿ ಏಕಮುಖದ ರುದ್ರಾಕ್ಷಿಯನ್ನು ಧರಿಸಿಕೊಂಡು ಶಿವಪೂಜೆಯನ್ನು ಮಾಡಬೇಕು. ಇನ್ನು ಯಾವ ಸನ್ಯಾಸಿಗಳು ಮುಂಡಿಗಳೋ (ಬೋಳುದಲೆ

ಯವರೋ) ಅವರು ಮಾತ್ರ ಶಿಖಾರುದ್ರಾಕ್ಷಧಾರಣದಲ್ಲಿ ವಿನಿಯುಕ್ತವಾದ ಮಂತ್ರೋಚ್ಚಾರಣಮಾತ್ರದಿಂದ ಶಿವಪೂಜೆಯನ್ನು ಮಾಡಬೇಕು. ಮಂತ್ರೋಚ್ಚಾರಣಮಾತ್ರದಿಂದ ಅವರಿಗೆ ಏಕಮುಖರುದ್ರಾಕ್ಷಧಾರಣದ ಫಲವು ದೊರೆಯುತ್ತದೆ. ಈ ವಿಷಯದಲ್ಲಿ "ಮಂತ್ರೋಚ್ಚಾರಣಮರ್ಥವದಿತಿಸಂಭವದರ್ಥವ್ಯತಿರಿಕ್ತಕರ್ಮಣಿ ಮಂತ್ರಾದೇವ ತದನುಷ್ಠಾನಫಲನಿಯಮಸ್ಯ ಪೂರ್ವತಂತ್ರೇ ಸ್ಥಿತತ್ವಾತ್" ಎಂಬ ಕ್ರಿಯಾಸಾರಕಾರರ ವಾಕ್ಯವು ಪ್ರಮಾಣವಾಗಿದೆ. ಮುಂಡಿಗಳಾದ ಸನ್ಯಾಸಿಗಳಿಗೆ ಶಿಖೆಯಲ್ಲಿ ಏಕಮುಖದ ಒಂದು ರುದ್ರಾಕ್ಷಧಾರಣವು ಸಂಭವದರ್ಥವ್ಯತಿರಿಕ್ತಕರ್ಮವಾಗಿರುವುದರಿಂದ ತದ್ವಿನಿಯುಕ್ತ ಮಂತ್ರೋಚ್ಚಾರಣಮಾತ್ರದಿಂದ ತದನುಷ್ಠಾನ (ಶಿಖೆಯಲ್ಲಿ ಒಂದು ಮುಖ ರುದ್ರಾಕ್ಷಧಾರಣ)ದ ಫಲವು ಸಿದ್ಧಿಸುತ್ತದೆ. ಮಂತ್ರೋಚ್ಚಾರಣಮಾತ್ರದಿಂದಲೇ ಫಲಸಿದ್ಧಿಯಾಗುತ್ತದೆಂದಮೇಲೆ ಎಲ್ಲಾ ವೀರಶೈವರಿಗೂ ಮಂತ್ರೋಚ್ಚಾರಣದಿಂದಲೇ ಶಿಖೆಯಲ್ಲಿ ರುದ್ರಾಕ್ಷಧಾರಣಫಲವು ಸಿದ್ಧಿಸುವುದರಿಂದ ಶಿಖೆಯನ್ನು ಏಕೆ ಧರಿಸಬೇಕೆಂದು ಈತನು ನುಡಿಯಬಹುದು. ನಿರಾಭಾರಿ (ಸನ್ಯಾಸಿ) ಗಳಲ್ಲದ ಇತರಾಶ್ರಮಿಗಳಾದ ವೀರಶೈವದ್ವಿಜರಿಗೆ ಶಿಖೆಯು ವಿಧಿವಿಹಿತವಾಗಿದ್ದು ಇವರಿಗೆ ಶಿಖೆಯಲ್ಲಿ ರುದ್ರಾಕ್ಷಧಾರಣಕರ್ಮವು ಸಂಭವದರ್ಥವ್ಯತಿರಿಕ್ತಕರ್ಮವಲ್ಲವಾದುದರಿಂದ ಇವರು ಶಿಖೆಯಲ್ಲಿ ಒಂದು ರುದ್ರಾಕ್ಷವನ್ನು ಧರಿಸಿಕೊಂಡೇ ಶಿವಪೂಜೆಯನ್ನು ಮಾಡಬೇಕು. ವಾಚಕರೇ "ಜಟೀ ಮುಂಡೀ ಶಿಖೀ ವಾಪಿ" ಇತ್ಯಾದಿ ವಾಕ್ಯಗಳು ಸನ್ಯಾಸಿಗಳ ಪರವಾಗಿ ಪಾರಮೇಶ್ವರಾಗಮ ಸೂಕ್ಷ್ಮಾಗಮಗಳಲ್ಲಿ ಹೇಳಲ್ಪಟ್ಟಿದ್ದರೂ, ಜನರನ್ನು ವಂಚಿಸುವುದಕ್ಕೋಸ್ಕರ ಆ ವಾಕ್ಯಗಳಲ್ಲಿರುವ 'ಶಿಖೀ' ಎಂಬ ಶಬ್ದವನ್ನು ಗಪ್ಪನೆ ನುಂಗಿಬಿಟ್ಟು "ಜಟೀಮುಂಡೀ" ಎಂದು ಇಷ್ಟೇ ಬರೆದಿರುವುದೂ, ಹಾಗೂ ನಿರಾಭಾರಿ ವೀರಶೈವರಲ್ಲಿ ಎಂದು ಬರೆಯದೆ "ಜಟಾಧಾರಿಗಳಾಗಿಯೂ ಮುಂಡಿಗಳಾಗಿಯೂ ಇರುವ ವೀರಶೈವರಲ್ಲಿ" ಎಂದು ಬರೆದಿರುವುದೂ

ಅತ್ಯಂತ ಮೋಸದ ಕೃತಿಯಾಗಿದೆ. ಹೀಗೆ ಗ್ರಂಥಘಾತವನ್ನು ಮಾಡಿಸಿ ಇದ್ದಕ್ಕಿದ್ದ ಹಾಗೆಯೇ ಬರೆಯುವುದು ಈತನಿಗೆ ಭೂಷಣವು.

ಈತನು ೪೮ನೆಯ ಪುಟದಲ್ಲಿ—

"ವೀರಶೈವಮತದಲ್ಲಿ ಪುರುಷರಂತೆ ಸ್ತ್ರೀಯರಿಗೂ ಸಹ ಶಿವಪೂಜೆಯನ್ನು ಮಾಡುವ ಅಧಿಕಾರವಿರುವದು. ಈ ವಿಷಯದಲ್ಲಿ ಲಿಂಗಾರ್ಚನರತಾ ನಾರೀ ಸೂತಕೀಷು ರಜಸ್ವಲಾ | ರವಿರಗ್ನಿರ್ಯಥಾ ವಾಯುಸ್ತದ್ವತ್ಸ್ಪೋಟಿಶುಚಿರ್ಭವೇತ್ || ಲಿಂಗಪೂಜೆಯಲ್ಲಿ ಆಸಕ್ತಳಾದ ಶಿವಭಕ್ತಸ್ತ್ರೀಯು ಮಾಸಿಕ ರಜಸ್ವಲೆಯಾದರೂ ದೀಕ್ಷೆಯಿಂದ ಮಂತ್ರಪಿಂಡಳಾದುದರಿಂದ ಅವಳಿಗೆ ರಜಸ್ಸೂತಕವಿಲ್ಲ. ರವಿ ಅಗ್ನಿ ವಾಯುಗಳು ಅಶುಚಿ ವಸ್ತುಗಳ ಸಂಬಂಧವಾದರೂ ಮುಟ್ಟಲಿಕ್ಕೆ ಹೇಗೆ ಶುದ್ಧವಾಗಿರುವವೋ ಹಾಗೆ ಮುಟ್ಟಲಿಕ್ಕೆ ಅವಳು ಶುದ್ಧಳಿರುವಳೆಂದು ಸಾರುವ ಶಿವಾಗಮವಚನವು ಪ್ರಮಾಣವಾಗಿದೆ" ಎಂದು ಬರೆದಿರುತ್ತಾನೆ.

ಸ್ತ್ರೀಯರಿಗೆ ಲಿಂಗಪೂಜಾಧಿಕಾರವುಂಟೆಂಬುದನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ "ಲಿಂಗಾರ್ಚನರತಾ ನಾರೀ" ಎಂಬ ಶ್ಲೋಕವನ್ನು ಉದಾಹರಿಸಿ ಮುಟ್ಟಾದ ಸ್ತ್ರೀಯಳನ್ನು ಮುಟ್ಟಬೇಕೆಂಬ ಶೂದ್ರಾಚರಣೆಯನ್ನು ಸಾಧಿಸುವುದಕ್ಕಾಗಿ ಈತನು ಪ್ರಯತ್ನಪಟ್ಟಿದ್ದಾನೆ. ರವಿ-ಅಗ್ನಿ-ವಾಯುಗಳು ಅಶುಚಿವಸ್ತುಗಳ ಸಂಬಂಧವಾದರೂ ಹೇಗೆ ಮುಟ್ಟಲಿಕ್ಕೆ ಶುದ್ಧಗಳಾಗಿರುವವೋ ಹಾಗೆ ಅವಳು (ಸೂತಕಿಯು) ಮುಟ್ಟಲಿಕ್ಕೆ ಶುದ್ಧಳಿರುವಳೆಂದು ಈತನು ಬರೆದಿರುವುದನ್ನು ನೋಡಿದರೆ ಆಶ್ಚರ್ಯವೆನಿಸುತ್ತದೆ. ಮುಂಡಿಯೇ! ಆ ಶ್ಲೋಕದಲ್ಲಿ "ಲಿಂಗಾರ್ಚನರತಾ" ಎಂಬ ವಿಶೇಷಣವಿರುವುದರಿಂದ ಅವಳು ಲಿಂಗಪೂಜೆಯಲ್ಲಿ ಮಾತ್ರ ಪರಿಶುದ್ಧಳಾಗುವಳಲ್ಲದೆ ಅನ್ಯಸ್ಪರ್ಶನಾದಿಗಳಲ್ಲಿ ಎಂದೂ ಪರಿಶುದ್ಧಳಾಗುವುದಿಲ್ಲ. ಲಿಂಗಪೂಜೆಯ ವಿಷಯದಲ್ಲಿ ಮಾತ್ರ ಅವಳಿಗೆ ರವಿ ವಾಯು ಅಗ್ನಿಗಳ ದೃಷ್ಟಾಂತವು ಕೊಡಲ್ಪಟ್ಟಿರುವುದಲ್ಲದೆ ಬೇರೆಯಿಲ್ಲ. ದಂತಧಾವನಾದಿಗಳಿಂದ ಪರಿಶುದ್ಧವಾದ ನಾಲಗೆಯು ಮಂತ್ರೋಚ್ಚಾರಣಕ್ಕೆ ಯೋಗ್ಯವಾಗುವುದಲ್ಲದೆ, ಅನ್ಯರಮೇಲೆ ಉಗುಳು

ವದಕ್ಕೆ ಯೋಗ್ಯವಾಗುವುದಿಲ್ಲವಷ್ಟೆ! ಅದರಂತೆ ಶಿವದೀಕ್ಷೆಯಿಂದ ಪರಿಶುದ್ಧಳಾದ ಸ್ತ್ರೀಯಳು ಸೂತಕಿಯಾದರೆ ಇಷ್ಟಲಿಂಗಪೂಜೆಗೆ ಮಾತ್ರ ಯೋಗ್ಯಳಾಗುವಳಲ್ಲದೆ, ಅನ್ಯಸ್ಪರ್ಶನಪಾಕಾದಿಕಾರ್ಯಗಳಿಗೆ ಯೋಗ್ಯಳಾಗುವುದಿಲ್ಲ. ಈ ವಿಷಯದಲ್ಲಿ—

ಸ್ವೇಷ್ಟಲಿಂಗೈಕಪೂಜಾಯಾಂ ನೈವಾಶೌಚಂ ವಿಧೀಯತೇ।
ಪೌಂಡರೀಕೇ ಯಥಾ ಸ್ತ್ರೀಣಾಮಗ್ನಿಹೋತ್ರೇ ಯಥಾತಥಾ ||
ಅಕರಸ್ಪರ್ಶಯೋಗ್ಯಾಪಿ ಯಥಾ ಜಿಹ್ವಾ ಮಹೇಶ್ವರಿ।
ಮಂತ್ರೋಚ್ಚಾರಣಮಾತ್ರಸ್ಯ ಪೂತಾ ಭವತಿ ಭೂತಲೇ ||
ತಥಾ ಸೂತಕಿನಃ ಶೈವಾಃ ಪೂಜಾಮಾತ್ರಸುನಿರ್ಮಲಾಃ।
ನಾನ್ಯಸ್ಪರ್ಶಾನುಕೂಲಾಸ್ಸ್ಯುರಿತಿ ವೇದಾನುಶಾಸನಂ ||

ಎಂಬ ಸಿದ್ಧಾಂತಾಗಮವಾಕ್ಯಗಳು ಪ್ರಮಾಣಗಳಾಗಿವೆ. ಶ್ರೀಕರಭಾಷ್ಯದಲ್ಲುದಾಹೃತಗಳಾದ ಈ ಪ್ರಮಾಣಗಳನ್ನು ಈತನು ನೋಡಿ ಪವಿತ್ರಾತ್ಮನಾಗಲಿ.

ಈತನು ೪೯ ನೆಯ ಪುಟದಲ್ಲಿ—

"ಸ್ತ್ರೀಯರಲ್ಲಿ ಕರ್ಮಾಂಗಭೂತವಾದ ಶಿಖೆಯಿಲ್ಲವೆಂಬುದು ಪ್ರತ್ಯಕ್ಷವು. ಸ್ತ್ರೀಯರಲ್ಲಿ ಪೂರ್ಣ ಶಿಖೆಯಿದ್ದರೂ ಅದು ಕರ್ಮಾಂಗಭೂತವಾದ ಶಿಖೆ (ಜುಟ್ಟು) ಗಿಂತಲೂ ಸ್ವತಂತ್ರಭಿನ್ನವು. ಆದುದರಿಂದ ಸ್ತ್ರೀಯರಲ್ಲಿ ಕರ್ಮಾಂಗಭೂತವಾದ ಶಿಖೆಯನ್ನು ಕಲ್ಪಿಸುವದು ಯುಕ್ತವಲ್ಲ."

ಎಂದು ಬರೆದಿರುತ್ತಾನೆ. ಸ್ತ್ರೀಯರಿಗೆ ವಿಧ್ಯುಕ್ತಶಿಖೆಯಾಗಲಿ ವಪನವಾಗಲಿ ಎರಡೂ ಇರುವುದಿಲ್ಲ. ಈ ವಿಷಯವನ್ನು ಎಲ್ಲರೂ ಒಪ್ಪುತ್ತಾರೆ. ಅವರಿಗೆ ಏಕಮುಖದ ರುದ್ರಾಕ್ಷಧಾರಣವು ಇದ್ದೇತೀರಬೇಕೆಂದು ಯಾವ ಗ್ರಂಥಕಾರರೂ ನಿರ್ಣಯಮಾಡಿಲ್ಲ. ಏಕಮುಖರುದ್ರಾಕ್ಷಧಾರಣದ ಫಲವನ್ನಪೇಕ್ಷಿಸುವವರು ಆ ರುದ್ರಾಕ್ಷಧಾರಣದಲ್ಲಿ ವಿನಿಯುಕ್ತವಾದ ಮಂತ್ರೋಚ್ಚಾರಣಮಾತ್ರದಿಂದ ಆದರ ಫಲವನ್ನು ಪಡೆಯಬೇಕು.

ಈ ವಿಷಯವನ್ನು ಸಪ್ರಮಾಣವಾಗಿ ೮೩ ನೆಯ ಪುಟದಲ್ಲಿ ಪ್ರತಿಪಾದಿಸಿದ್ದೇವೆ. ಅಲ್ಲಿ ನೋಡಿಕೊಳ್ಳಬೇಕು.

ಈತನು ೫೦ ನೆಯ ಪುಟದಲ್ಲಿ—

"ವೀರಶೈವರು ಕರ್ಮಾಂಗಭೂತವಾದ ಜುಟ್ಟನ್ನು ಬಿಟ್ಟು ಅದರಲ್ಲಿ ಏಕಮುಖದ ರುದ್ರಾಕ್ಷವನ್ನು ಕಟ್ಟಿಕೊಂಡು ಲಿಂಗಪೂಜೆಯನ್ನು ಮಾಡಬೇಕೆಂದು 'ಶಿಖಾಯಾಮೇಕಮೇಕಾಸ್ಯಂ' ಇತ್ಯಾದಿ ವಾಕ್ಯದಿಂದ ಶ್ರೀ ರೇಣುಕರು ಉಪದೇಶಮಾಡಿರುವರೆಂದು ಶಿಖಾವಾದಿಗಳು ಹೇಳುವದಾದರೂ ಶ್ರೀ ರೇಣುಕರಿಗೆ ಕಲಂಕಪ್ರದವಾದುದಲ್ಲದೆ ಬೇರೊಂದಿಲ್ಲ."

ಎಂದು ಬರೆದಿರುತ್ತಾನೆ. ಶಿಖಾವಾದಿಗಳು ಹೀಗೆ ಹೇಳುವುದು ರೇಣುಕಭಗವತ್ಪಾದರಿಗೆ ಕಲಂಕಪ್ರದವೆಂದು ಬರೆದಿರುವುದು ಈತನ ಕಲಂಕಹೃದಯದ ಪ್ರಭಾವವಲ್ಲದೆ ಬೇರೆಯಲ್ಲ. ಕಲಂಕಹೃದಯರು ಸರ್ವರನ್ನೂ ಕಲಂಕಿತರನ್ನಾಗಿ ಮಾಡುವುದು ಅವರ ಸ್ವಭಾವವಾಗಿದೆ. ರೇಣುಕಗುರುಸಾರ್ವಭೌಮರ ಅಭಿಪ್ರಾಯವು ಈ ಮುಂಡಿಯ ಅಭಿಪ್ರಾಯದಂತಿದ್ದರೆ ಅವರು ಮುಂಡಿತಮುಂಡಾಗ್ರದಲ್ಲಿ (ಬೋಳತಲೆಯ ತುದಿಯಲ್ಲಿ) ಏಕಮುಖದ ರುದ್ರಾಕ್ಷವನ್ನು ಕಟ್ಟಿಕೊಂಡು ಶಿವಪೂಜೆಯನ್ನು ಮಾಡಬೇಕೆಂದು ಸ್ಪಷ್ಟವಾಗಿ ಅಪ್ಪಣೆಕೊಡಿಸುತ್ತಿದ್ದರು. ಹಾಗೆ ಅಪ್ಪಣೆ ಕೊಡಿಸದೆ ಶಿಖೆಯಲ್ಲಿ ಏಕಮುಖದ ರುದ್ರಾಕ್ಷವನ್ನು ಧರಿಸಿಕೊಂಡು ಶಿವಪೂಜೆಯನ್ನು ಮಾಡಬೇಕೆಂದು ಶಾಸನ ಮಾಡಿರುವುದರಿಂದ ಅವರ ತಾತ್ಪರ್ಯವು ಲೋಕಪ್ರಸಿದ್ಧವೂ ವಿಧಿವಿಹಿತವೂ ಆದ ಮಸ್ತಕಾಗ್ರದಲ್ಲಿರುವ ಕೇಶಸಮೂಹದಲ್ಲಿಯೇ ಇರುವುದೆಂದು ತಿಳಿದುಕೊಂಡು ಈತನು ಪರಿಶುದ್ಧಹೃದಯನಾಗಬೇಕು.

ಈತನು ಇದೇ ಪುಟದಲ್ಲಿ—

"ಅಪ್ರಾಕೃತಮತಸ್ಥಾಪಕರಾದ ಶ್ರೀ ರೇಣುಕರು ಪ್ರಾಕೃತಮತಚಿಹ್ನವಾಗಿಯೂ ಕರ್ಮಾಂಗವಾಗಿಯೂ ಇರುವ ಜುಟ್ಟನ್ನು ಅಪ್ರಾಕೃತರಾದ ವೀರಶೈವರಿಗೆ ಧರಿಸಲು ಅಪ್ಪಣೆಯನ್ನು ಕೊಟ್ಟಿಲ್ಲವೆಂದು ನಾವು ಧಾರಾಳವಾಗಿ ಹೇಳುವೆವು."

ಎಂದು ಬರೆದಿರುತ್ತಾನೆ. ಇದನ್ನು ನೋಡಿದರೆ ಈತನ ಧಿಟ್ಟತನಕ್ಕೆ ಪಾರವೇ ಇಲ್ಲವೆಂದು ಹೇಳಬೇಕಾಗುತ್ತದೆ. ಮುಂಡಿಯೇ! ಶಿಖೆಯು ಕೇವಲ ಪ್ರಾಕೃತಮತಚಿಹ್ನವಾಗಿದೆ ಎಂಬಲ್ಲಿ ಪ್ರಮಾಣವೇನಾದರೂ ಉಂಟೋ ಅಥವಾ ನಿನ್ನ ಮಾತೇ ಪ್ರಮಾಣವೋ? ಅಸಂಖ್ಯಜನ ವೀರಶೈವಮತಗ್ರಂಥಕಾರರು ಮತಾಚಾರ್ಯರ ಶಾಸನದಂತೆ ವೀರಶೈವ ದ್ವಿಜರಿಗೆ ಶಿಖಾಧಾರಣವನ್ನು ಹೇಳಿರುವುದರಿಂದ ರೇಣುಕಭಗವತ್ಪಾದರು ವಿಧ್ಯುಕ್ತಶಿಖೆಯಲ್ಲಿಯೇ ರುದ್ರಾಕ್ಷಧಾರಣವನ್ನು ಬೋಧಿಸಿರುವರೆಂದು ನಾವು ಕೈಯೆತ್ತಿಸಾರುವೆವು.

ಶ್ರೀಪತಿಪಂಡಿತರು "ಸರ್ವತ್ರಪ್ರಸಿದ್ಧೋಪದೇಶಾತ್" ಎಂಬ ಬ್ರಹ್ಮಸೂತ್ರದ ಭಾಷ್ಯದಲ್ಲಿ ಇದೇ ವಿಷಯವನ್ನೆತ್ತಿಕೊಂಡು "ಶಿಖಾಯಾಮೇಕಮೇಕಾಸ್ಯಮಿತ್ಯಾದಿನಾ ತೇಷಾಂ ವಿಧ್ಯುಕ್ತಶಿಖಾಶೂನ್ಯತ್ವಾತ್ ರುದ್ರಾಕ್ಷಧಾರಣಂ................ನ ಸಂಭವತಿ" ಎಂದು ಉಲ್ಲೇಖಿಸಿರುತ್ತಾರೆ. ವೀರಶೈವಮತದಲ್ಲಿರುವ ಶೂದ್ರ ಮತ್ತು ಸಂಕರ ಜಾತಿಯವರಿಗೆ ವಿಧ್ಯುಕ್ತವಾದ ಶಿಖೆಯಿಲ್ಲದಿರುವುದರಿಂದ ಅವರಿಗೆ ಶಿಖೆಯಲ್ಲಿ ರುದ್ರಾಕ್ಷಧಾರಣವು ಸಂಭವಿಸುವುದಿಲ್ಲವೆಂದು ಈ ಭಾಷ್ಯ ವಾಕ್ಯದ ತಾತ್ಪರ್ಯವಿದೆ. ಶ್ರೀ ಜಗದ್ಗುರು ರೇಣುಕಾಚಾರ್ಯರು ಅಪ್ಪಣೆ ಕೊಡಿಸಿರುವ "ಶಿಖಾಯಾಮೇಕಮೇಕಾಸ್ಯಂ" ಎಂಬ ವಾಕ್ಯವು ವಿಧ್ಯುಕ್ತಶಿಖೆಯಲ್ಲಿ ರುದ್ರಾಕ್ಷವನ್ನು ಧರಿಸಬೇಕೆಂದು ಶಾಸನಮಾಡುವುದಾಗಿ ಈ ಭಾಷ್ಯವಾಕ್ಯವು ಸ್ಪಷ್ಟರೀತಿಯಿಂದ ಬೋಧಿಸುತ್ತದೆ. ವೀರಶೈವಮತಭಾಷ್ಯಕಾರರೇ ರೇಣುಕಭಗವತ್ಪಾದರ ವಾಕ್ಯವನ್ನು ಉದಾಹರಿಸಿ ಶಿಖೆಯಲ್ಲಿ ಒಂದು ಮುಖದ ಒಂದು ರುದ್ರಾಕ್ಷಧಾರಣವನ್ನು ಸ್ಪಷ್ಟಗೊಳಿಸಿದ್ದರೂ ಈತನು ಮನಬಂದಂತೆ ಜಿಗಿದಾಡಿರುವುದು ಮಂದತನವಲ್ಲವೇ?

ಈತನು ೫೦-೫೧ ನೆಯ ಪುಟಗಳಲ್ಲಿ—

"ರೇಣುಕಭಗವತ್ಪಾದರು "ಜಟಾಮುಕುಟಸಂಯುಕ್ತಂ" ಎಂದು ಸಿದ್ಧಾಂತ ಶಿಖಾಮಣಿಯಲ್ಲುಕ್ತವಾಗಿರುವಂತೆ ಶಿಖೆಯನ್ನು ಧರಿಸದೆ ಕೇವಲ ಜಡೆಯನ್ನು ಧರಿಸಿ

ದ್ದರೆಂದೂ, "ಆಚಿನೋತಿ ಚ ಶಾಸ್ತ್ರಾರ್ಥಾನಾಚಾರೇ ಸ್ಥಾಪಯತ್ಯಪಿ | ಸ್ವಯಮಾಚರತೇ ಯಸ್ಮಾದಾಚಾರ್ಯಸ್ತೇನ ಕಥ್ಯತೇ ||" ಎಂಬ ಪ್ರಮಾಣದಂತೆ ನುಡಿದು ನಡೆಯುವುದೇ ಆಚಾರ್ಯರ ಲಕ್ಷಣವೆಂದೂ ಬರೆದಿರುತ್ತಾನೆ.

ಇದು ನಿಜವು. ಧರ್ಮಶಾಸ್ತ್ರಾನುಸಾರವಾಗಿ ಶಿಖೆಯೂ ಜಡೆಯೂ ಶಿವಲಾಂಛನಗಳಾಗಿರುವುವು. ಜಟಾಧಾರಣದಲ್ಲಿ ಶಿಖಾಧಾರಣವು ಅಂತರ್ಗತವಾಗಿರುವುದರಿಂದ ಆ ಮಹಾತ್ಮರಿಗೆ ಶಿಖಾಧಾರಣವಿಲ್ಲವೆಂದು ತಿಳಿದುಕೊಂಡಿರುವುದು ಧರ್ಮಶಾಸ್ತ್ರತತ್ತ್ವವನ್ನು ತಿಳಿಯದಿದ್ದುದರಫಲವಾಗಿದೆ. ಜಟಾಧಾರಿಗಳು ಶಿವಪೂಜಾಕಾಲದಲ್ಲಿ ಮಸ್ತಕದ ಮಧ್ಯಭಾಗದಲ್ಲಿರುವ ಕೇಶಗಳಿಗೆ ಗಂಟುಹಾಕಿ ಶಿವಪೂಜೆಯನ್ನು ಮಾಡುವುದನ್ನು ಈತನು ನೋಡಿದಂತೆ ಕಾಣಲಿಲ್ಲ. ಈತನಿಗೆ ಸಂಪ್ರದಾಯಸಿದ್ಧವಾದ ಆಚರಣೆಯು ಗೊತ್ತೇ ಇರುವುದಿಲ್ಲ. ಜಟಾಧಾರಣದಲ್ಲಿ ಶಿಖಾಧಾರಣವು ಅಂತರ್ಗತವಾಗಿರುವುದರಿಂದ ರೇಣುಕಭಗವತ್ಪಾದರು ಸಶಾಸ್ತ್ರವಾಗಿಯೇ ಜಡೆಯನ್ನು ಧರಿಸಿದ್ದರು. ಜಟಾಧಾರಣದಿಂದ ಈ ಮುಂಡಿತ ಮುಂಡನ ಅಭಿಪ್ರಾಯಕ್ಕೇನೂ ಬಲಬರುವುದಿಲ್ಲ. ಆದರೆ ರೇಣುಕಭಗವತ್ಪಾದರ ವರ್ಣನೆಯಲ್ಲಿ ಇವರು ಮುಂಡಿತಮುಂಡರಾಗಿದ್ದರೆಂಬ ವಿಶೇಷಣವಿದ್ದರೆ ಮಾತ್ರ ಈತನಿಗೆ ಬಲಬರುತ್ತಿತ್ತು. ಈ ಗುರುಸಾರ್ವಭೌಮರು ಮುಂಡಿತಮುಂಡರಾಗಿದ್ದರೆಂಬ ವಿಷಯವನ್ನು ಈತನು ಎಲ್ಲಿಯಾದರೂ ತೋರಿಸಬಲ್ಲನೋ? ಅಸ್ತು! ನುಡಿದಂತೆ ನಡೆಯುವುದೇ ಆಚಾರ್ಯರ ಲಕ್ಷಣವಾಗಿದ್ದರೂ ಇದನ್ನು ಸರ್ವತ್ರ ಹೇಳಲಿಕ್ಕೆ ಬರುವುದಿಲ್ಲ. ಯಾಕಂದರೆ—ಆಚಾರ್ಯರಾದವರು ಚತುರ್ವಿಧವರ್ಣಾಶ್ರಮ ಧರ್ಮಗಳನ್ನು ಬೋಧಿಸುವುದರಿಂದ ಅವರು ಗೃಹಸ್ಥಾದಿಗಳ ಮತ್ತು ಶೂದ್ರಾದಿಜಾತಿಗಳ ಧರ್ಮಗಳನ್ನು ಆಚರಿಸಬೇಕಾಗುವ ಪ್ರಸಂಗವು ಬರುವುದಲ್ಲವೇ? ಹೀಗೆ ಆಚರಿಸುವುದು ಎಲ್ಲಿಯಾದರೂ ಸಾಧ್ಯವೇ? ಈತನು ಉದಾಹರಿಸಿದ ಆ ಶ್ಲೋಕದ ಅರ್ಥವೇ ಬೇರೆಯಾಗಿರುತ್ತದೆ.

ಅದರ ನಿಜಸ್ವರೂಪವನ್ನು ಈತನು ತಿಳಿದಂತೆ ತೋರಲಿಲ್ಲ. ತಿಳಿದಿದ್ದರೆ ಹೀಗೆಂದಿಗೂ ಬರೆಯುತ್ತಿದ್ದಿಲ್ಲ.

ಈತನು ೫೧ನೆಯ ಪುಟದಲ್ಲಿ—

"ಯದ್ಯಪಿ ಸಿದ್ಧರಾದ ಶ್ರೀ ರೇಣುಕರಿಗೆ ಕರ್ಮಾಂಗಭೂತವಾದ ಶಿಖಾಧಾರಣವು ಅನಾವಶ್ಯಕವೆಂದು ಶಿಖಾವಾದಿಗಳು ಹೇಳಬಹುದು. ತಥಾಪಿ ಸಿದ್ಧರಾದ ಶ್ರೀ ರೇಣುಕರಿಗೆ ವೀರಶೈವಮತಚಿಹ್ನವಾದ ಲಿಂಗಧಾರಣಾದಿಕವು ಅತ್ಯಾವಶ್ಯಕವಾಗಿರುವಂತೆ ವೀರಶೈವಮತಚಿಹ್ನವಾದ ಪಕ್ಷದಲ್ಲಿ ಕರ್ಮಾಂಗಭೂತವಾದ ಶಿಖಾಧಾರಣವಾದರೂ ಅತ್ಯಾವಶ್ಯಕವೆಂಬುದು ಸಿದ್ಧಾಂತವು."

ಎಂದು ಬರೆದಿದ್ದಾನೆ. ಸಿದ್ಧಕುಲತಿಲಕರಾದ ರೇಣುಕಭಗವತ್ಪಾದರಿಗೆ ಶಿಖಾಧಾರಣವು ಅನಾವಶ್ಯಕವಾದುದೆಂದು ಶಿಖಾವಾದಿಗಳು ಹೇಳದೆ ಆವಶ್ಯಕವಾದುದೆಂದೇ ಹೇಳುವರು. ಜಟಾಂತರ್ಗತವಾದ ಶಿಖೆಯೇ ಶಿಖಾಧಾರಣವೆನಿಸುವುದು. ಇದೇ ಅಭಿಪ್ರಾಯವನ್ನೇ ಶಿವಾಧಿಕ್ಯ ಶಿಖಾಮಣಿಗ್ರಂಥಕಾರರು "ಶಿಖಾಲಂಬಿತಮಸ್ತಕಸ್ಯ" ಎಂಬ ವಿಶೇಷಣವನ್ನು ರೇಣುಕಭಗವತ್ಪಾದರಿಗೆ ಕೊಟ್ಟು ಸ್ಪಷ್ಟೀಕರಿಸಿರುವರು. ಇದರಿಂದ ರೇಣುಕಾಚಾರ್ಯರಿಗೆ ಜಟಾಂತರ್ಗತಶಿಖಾಧಾರಣವು ಸಿದ್ಧವಾಗುತ್ತದೆ.

ಈತನು ಲಿಂಗವು ಮತಚಿಹ್ನವಾಗಿರುವಂತೆ ಶಿಖೆಯೂ ಮತ ಚಿಹ್ನವೆಂದು ಬರೆದಿದ್ದಾನೆ. ಇದರಿಂದ ಈತನಿಗೆ ಮತ ಮತ್ತು ಜಾತಿಗಳ ಸ್ವರೂಪವೇ ಗೊತ್ತಿದ್ದಂತೆ ಕಾಣುವುದಿಲ್ಲ. ವಿಧಿವಿಹಿತಶಿಖಾ ಧಾರಣವು ವೀರಶೈವಮತಸ್ಥರೆಲ್ಲರಿಗೂ ಚಿಹ್ನವಾಗಿರದೆ ವೀರಶೈವಮತ ಸ್ಥರಾದ ಬ್ರಾಹ್ಮಣಾದಿತ್ರೈವರ್ಣಿಕರಿಗೆ ಮಾತ್ರ ಚಿಹ್ನವಾಗಿದೆ. ಲಿಂಗ ಧಾರಣವು ಮಾತ್ರ ವೀರಶೈವಮತಸ್ಥರೆಲ್ಲರಿಗೂ (ಶೂದ್ರಾದಿಗಳಿಗೂ) ಚಿಹ್ನವಾಗಿದೆ. ಆದುದರಿಂದ ಮತಚಿಹ್ನವಾದ ಲಿಂಗಧಾರಣಕ್ಕೂ ಜಾತಿ ಚಿಹ್ನವಾದ ಶಿಖಾಧಾರಣಕ್ಕೂ ಈತನು ಸಮಾನತ್ವವನ್ನು ಹೇಳಿರುವುದು ಧರ್ಮಶಾಸ್ತ್ರರಹಸ್ಯವನ್ನು ತಿಳಿಯದೆ ಇದ್ದುದರ ಫಲವಾಗಿದೆ.

ಈತನು ೫೧-೫೨-೫೩ ನೆಯ ಪುಟಗಳಲ್ಲಿ—

"ಲಿಂಗಧಾರಣ-ಭಸ್ಮಧಾರಣ-ರುದ್ರಾಕ್ಷಧಾರಣಾದಿಗಳು ಕೇವಲ ಶರೀರಾವಯವಗಳಿಗೆ ವಿಹಿತವಾಗಿರುವಂತೆ ಕೂದಲಗಳಿಗೆ ವಿಹಿತವಾಗಿರುವದಿಲ್ಲ. ಅಂತೆಯೇ "ಮೂರ್ಧ್ನಿ ವಾ ಕಂಠದೇಶೇ" ಇತ್ಯಾದಿಯಾಗಿರುವ ವಾಕ್ಯಗಳು ಲಿಂಗಧಾರಣವು ಶರೀರಾವಯವಗಳಿಗೆ ವಿಹಿತವಾಗಿರುವದೆಂಬುವಲ್ಲಿ ಪ್ರಮಾಣಗಳೆಂದೂ, "ಉತ್ತಮಾಂಗೇ ಲಲಾಟೇಚ" ಇತ್ಯಾದಿಯಾಗಿರುವ ವಾಕ್ಯಗಳು ಭಸ್ಮಧಾರಣವು ಶರೀರಾವಯವಗಳಿಗೆ ವಿಹಿತವಾಗಿದೆಂಬುವಲ್ಲಿ ಪ್ರಮಾಣಗಳೆಂದೂ, "ಶಿಖಾಯಾಮೇಕಮೇಕಾಸ್ಯಂ" ಇತ್ಯಾದಿಯಾಗಿರುವ ವಾಕ್ಯಗಳು ರುದ್ರಾಕ್ಷಧಾರಣವು ಶರೀರಾವಯವಗಳಿಗೆ ವಿಹಿತವಾಗಿರುವದೆಂಬುವಲ್ಲಿ ಪ್ರಮಾಣಗಳೆಂದೂ ಬರೆದು ನಿರರ್ಥಕವಾಗಿ ಹರಟೆಯನ್ನು ಕೊಚ್ಚಿದ್ದಾನೆ.

ಈ ವಿಷಯವನ್ನು ವಿಮರ್ಶಿಸೋಣ! ಈತನು ರುದ್ರಾಕ್ಷಧಾರಣ ವಿಷಯದಲ್ಲಿರುವ "ಶಿಖಾಯಾಮೇಕಮೇಕಾಸ್ಯಂ" ಇತ್ಯಾದಿ ಶ್ಲೋಕಗಳನ್ನು ಕ್ರಮವಾಗಿ ಬರೆಯದೆ, ಮಧ್ಯದಲ್ಲಿರುವ ರುದ್ರಾಕ್ಷಯಜ್ಞೋಪವೀತಧಾರಣಪ್ರತಿಪಾದಕ ಶ್ಲೋಕವನ್ನು ಬಿಟ್ಟು ಇದರ ಹಿಂದಿನ ಹಾಗೂ ಮುಂದಿನ ಶ್ಲೋಕಗಳನ್ನು ಉದಾಹರಿಸಿರುವುದರಿಂದ, ಈತನು ತನ್ನ ವಂಚಕತನವನ್ನು ತಾನೇ ಹೊರಗೆ ಹಾಕಿಕೊಂಡಿರುತ್ತಾನೆ. ಪ್ರತಿಯೊಂದು ಅವಯವಗಳಿಗೂ ರುದ್ರಾಕ್ಷಧಾರಣವನ್ನು ಹೇಳುವ ಈತನು ರುದ್ರಾಕ್ಷಯಜ್ಞೋಪವೀತಧಾರಣವನ್ನು ಯಾವ ಅವಯವಕ್ಕೆ ಹೇಳುತ್ತಾನೆ? ಇದು ಹೇಳಲಿಕ್ಕಾಗುವುದಿಲ್ಲವೆಂದೇ ತಿಳಿದು ರುದ್ರಾಕ್ಷಯಜ್ಞೋಪವೀತಧಾರಣದ ಶ್ಲೋಕವನ್ನೇ ಹಾರಿಸಿಬಿಟ್ಟಿದ್ದಾನೆ. ಹೀಗೆ ಮಾಡಿರುವುದು ಗ್ರಂಥದ್ರೋಹವಲ್ಲವೇ? ಆದುದರಿಂದ ಅನಿರ್ದಿಷ್ಟಾವಯವದಲ್ಲಿ ರುದ್ರಾಕ್ಷಯಜ್ಞೋಪವೀತಧಾರಣವು ಸಿದ್ಧವಾಗುವಂತೆ ಕೇಶಮಯಶಿಖೆಯಲ್ಲಿ ಏಕಮುಖದ ರುದ್ರಾಕ್ಷಧಾರಣವು ಧರ್ಮಶಾಸ್ತ್ರಾನುಸಾರವಾಗಿ ಸಿದ್ಧವಾಗುವುದು.

ಈತನು ೫೩ನೆಯ ಪುಟದಲ್ಲಿ—

"ಕೇಶವು ಲಿಂಗಧಾರಣಕ್ಕೆ ನಿಷಿದ್ಧವಾಗಿರುವಂತೆ ಭಸ್ಮರುದ್ರಾಕ್ಷಧಾರಣಕ್ಕಾದರೂ ನಿಷಿದ್ಧವಾಗಿದೆ. ಇಂತಹ ನಿಷಿದ್ಧವಾದ ಕೇಶದಲ್ಲಿ ಲಿಂಗವನ್ನಾಗಲಿ ಭಸ್ಮವನ್ನಾಗಲಿ ರುದ್ರಾಕ್ಷವನ್ನಾಗಲಿ ಧರಿಸುವದು ವೀರಶೈವಮಾರ್ಗವಲ್ಲ"

ಎಂದು ಬರೆದಿದ್ದಾನೆ. ಹೀಗೆ ಬರೆದಿರುವುದನ್ನು ನೋಡಿದರೆ ನಗೆಬರುತ್ತದೆ. ಕೇಶದಲ್ಲಿ ಭಸ್ಮರುದ್ರಾಕ್ಷಗಳನ್ನು ಧರಿಸಬಾರದಂತೆ! ಧರಿಸಿದರೆ ಅದು ವೀರಶೈವಮಾರ್ಗವಲ್ಲವಂತೆ! ಘನಬುದ್ಧಿ! ಘನಬುದ್ಧಿ!! ನಿತ್ಯದಲ್ಲಿಯೂ ಶಿವಪೂಜಾಕಾಲಕ್ಕೆ ಸರ್ವರೂ ಮಸ್ತಕಾದಿವಿಧಿವಿಹಿತಸ್ಥಾನಗಳಲ್ಲಿ ಭಸ್ಮರುದ್ರಾಕ್ಷಧಾರಣವನ್ನು ಮಾಡಿಯೇತೀರಬೇಕಾಗುತ್ತದೆ. ಶರೀರದಲ್ಲಿರುವ ಅವಯುವಗಳೆಲ್ಲವೂ ಕೇಶಗಳಿಂದ ಆಚ್ಛಾದಿತಗಳಾಗಿವೆ. ಯಾವ ಸ್ಥಾನದಲ್ಲಿ ಧರಿಸಿದರೂ ಅಲ್ಲಿ ಕೇಶಗಳೂ ಇದ್ದೇ ಇವೆ. ಕೇಶದ ಮೇಲ್ಭಾಗದಲ್ಲಿಯೇ ಇವುಗಳ ಧಾರಣವಾಗುತ್ತಿರುವುದು ಪ್ರತಿಯೊಬ್ಬರಿಗೂ ಅನುಭವದಲ್ಲಿದೆ. ಅಂದಮೇಲೆ ಈತನ ಅಮಂಗಲಾಭಿಪ್ರಾಯವು ಹೇಗೆ ಸಂಗತವಾಗುವುದು? ಕೇಶಗಳಿಗೆ ಭಸ್ಮರುದ್ರಾಕ್ಷಗಳನ್ನು ಖಂಡಿತವಾಗಿಯೂ ಸ್ಪರ್ಶಮಾಡಬಾರದೆಂದು ಈತನು ದುರಾಗ್ರಹಪಟ್ಟರೆ, ಭಸ್ಮರುದ್ರಾಕ್ಷಗಳನ್ನು ಧರಿಸುವವರೆಲ್ಲರೂ ಕೇಶಗಳಿಂದ ಕೂಡಿದ ಶರೀರದ ಚರ್ಮವನ್ನೆಲ್ಲಾ ಸುಲಿಸಿಕೊಂಡು ಆದರಮೇಲೆ ಭಸ್ಮರುದ್ರಾಕ್ಷಗಳನ್ನುಧರಿಸಿ ಶಿವಪೂಜೆಯನ್ನು ಮಾಡಬೇಕಾಗುತ್ತದೆ. ಇದರಂತೆ ಈತನು ಮೊದಲು ತಾನು ಆಚರಿಸಬಲ್ಲನೋ? ಹಾಗೆ ಆಚರಿಸಿದರೆ ಈತನು ತನ್ನ ಮಾತಿನಂತೆ ನಡೆದಂತಾಗುತ್ತದೆ. ಇದನ್ನೆಲ್ಲಾ ಪೂರ್ವಾಪರ ವಿಚಾರಮಾಡದೆ ಹುಂಬರಂತೆ ಬರೆದಿರುವುದು ಹಾಸ್ಯಾಸ್ಪದವಲ್ಲದೆ ಬೇರೆಯಲ್ಲ. ಅಸ್ತು!

ಇನ್ನು ಈತನು ಕೂದಲುಗಳಲ್ಲಿ ಲಿಂಗವನ್ನು ಧರಿಸಬಾರದೆಂಬ ಬಗ್ಗೆ—"ಜಟಾಗ್ರೇ ತ್ರಿಕಭಾಗೇ ತು ಮಲಸ್ಥಾನೇ ನ ಧಾರಯೇತ್" ಎಂಬ ಶ್ಲೋಕವನ್ನುದಾಹರಿಸಿದ್ದಾನೆ. ಈ ಶ್ಲೋಕದಲ್ಲಿ ಜಡೆಯ ತುದಿ

ಯಲ್ಲಿ ಲಿಂಗವನ್ನು ಧರಿಸಬಾರದೆಂದು ಸ್ಪಷ್ಟವಾಗಿದ್ದರೂ, ಈತನು ಇದಕ್ಕೆ ಜಟಾದಿ ಕೂದಲುಗಳ ತುದಿಯಲ್ಲಿ ಎಂದು ಅರ್ಥಮಾಡಿರುವು ದನ್ನು ನೋಡಿದರೆ ಈತನಂಥ ದೀಡಪಂಡಿತರು ಈ ಪ್ರಪಂಚದಲ್ಲಿಯೇ ಇಲ್ಲವೆಂದು ಹೇಳಬೇಕಾಗುತ್ತದೆ. ರೇಣುಕಭಗವತ್ಪಾದರು ಪರಮ ಪೂಜ್ಯವಾದ ಲಿಂಗಮೂರ್ತಿಯನ್ನು ಜಟಾಗ್ರದಲ್ಲಿ ಧರಿಸಿದರೆ ಎಲ್ಲರೂ ನೋಡುವರೆಂಬ ಕಾರಣದಿಂದ ಅಲ್ಲಿ ಧರಿಸಿಕೊಳ್ಳಬಾರದೆಂಬ ಅಭಿಪ್ರಾಯ ವನ್ನು ತೋರ್ಪಡಿಸಿರುವರಲ್ಲದೆ, ಈ ಮುಂಡಿಯ ಅಭಿಪ್ರಾಯದಂತೆ ಕೇಶ ಗಳು ನಿಷಿದ್ಧವೆಂದು ತಿಳಿದು ಅಲ್ಲಿ ಧರಿಸಬಾರದೆಂದು ಬೋಧಿಸಿಲ್ಲ. ಕೇಶಗಳೇ ನಿಷಿದ್ಧವಾಗಿದ್ದ ಪಕ್ಷದಲ್ಲಿ " ಉತ್ತಮಾಂಗೇ ಗಲೇವಾಪಿ " ಎಂಬುದರಿಂದ ಉತ್ತಮಾಂಗದಲ್ಲಿ ಧರಿಸಬೇಕೆಂದು ಅವರು ಎಂದೂ ಅಪ್ಪಣೆಕೊಡಿಸುತ್ತಿದ್ದಿಲ್ಲ. ಯಾಕಂದರೆ—ಉತ್ತಮಾಂಗದಲ್ಲಿ ಕೇಶಗ ಳಿರುವುವಷ್ಟೆ! ಆದುದರಿಂದ ಈತನು ಭಗವತ್ಪಾದರ ಅಭಿಪ್ರಾಯವನ್ನು ತಿಳಿಯದೆ ಮನಸ್ಸಿಗೆ ಬಂದಂತೆ ಅರ್ಥಮಾಡಿರುವುದು ದ್ರೋಹಕರವಾಗಿದೆ.

" ಮೋಕ್ಷಾರ್ಥಿನಶ್ಶಿಖಾದೇಶೇ ಬಾಹುಮಧ್ಯೇ ತು ಧರ್ಮಿಣಃ "

ಎಂದು ಪಾರಮೇಶ್ವರಾಗಮದ ಪಂಚಮಪಟಲದಲ್ಲಿಯೂ,

ಶಿಖಾಯಾಂ ಬಾಹುಮೂಲೇ ವಾ ಕಂಠದೇಶೇ ಹೃದಂಬುಜೇ।
ಹೃದಯೇ ಶ್ಲಾಘ್ಯಮುದಿತಂ ಶಿವಲಿಂಗಸ್ಯ ಧಾರಣಂ ॥

ಎಂದು ಕ್ರಿಯಾಸಾರದ ೨೦ ನೆಯ ಉಪದೇಶದಲ್ಲಿಯೂ ಶಿಖೆಯಲ್ಲಿ ಲಿಂಗಧಾರಣವು ಹೇಳಲ್ಪಟ್ಟಿರುವುದರಿಂದ ಕೇಶಗಳು ಲಿಂಗಧಾರಣಕ್ಕೆ ನಿಷಿದ್ಧಗಳಾಗಿರದೆ ವಿಹಿತಗಳಾಗಿರುವುವೆಂದು ನಂಬಿ ಆ ಲಿಂಗಮೂರ್ತಿಯ ಕೃಪೆಗೆ ಪಾತ್ರನಾಗಬೇಕು.

ಈತನು ಇದೇ ಪುಟದಲ್ಲಿ—

" ಶಿಖಾಶಬ್ದಕ್ಕೆ ಕರ್ಮಾಂಗಭೂತವಾದ ಶಿಖೆಯೆಂದು ಅರ್ಥವಾಗುವದಿಲ್ಲ. ಹಾಗಾದಪಕ್ಷದಲ್ಲಿ ಶ್ರೀರೇಣುಕರಾದರೂ "ಶಿಖಾಯಾಮೇಕಮೇಕಾಸ್ಯಂ ರುದ್ರಾಕ್ಷಂ

ಧಾರಯೇದ್ಬುಧಃ '' ಎಂದು ಸರ್ವಥಾ ಅಪ್ಪಣೆಕೊಡುತ್ತಿದ್ದಿಲ್ಲ. ಶಿಖಾಶಬ್ದಕ್ಕೆ ಹರಿಸ್ಕಂಧವಾದಿ ಶಬ್ದಗಳಂತೆ ನಾನಾರ್ಥಗಳಾಗುವವು. ಅತ ಏವ "ಶಿಖಾ ಶಿಫಾಕೇಕಿಮೌಲ್ಯೋರ್ಜ್ವಾಲಾಶಾಖಾಗ್ರಮೌಲಿಷು ''........ಇತ್ಯಾದಿ ಕೋಶವಾಕ್ಯಗಳನ್ನು ಉದಾಹರಿಸಿ ಶಿಖಾಶಬ್ದಕ್ಕೆ ನಾನಾರ್ಥವಾಗುತ್ತದೆಂದು ಹೇಳಿ ಇದರಿಂದ ಶಿಖಾಶಬ್ದಕ್ಕೆ ಜುಟ್ಟಿನ ಹೊರತು ಬೇರೆ ಅರ್ಥವನ್ನು ಮಾಡಲಿಕ್ಕೆ ಬರುವದಿಲ್ಲವೆಂದು ಹೇಳಲು ಅವಕಾಶವಿಲ್ಲವಾಯಿತು ''

ಎಂದು ಬರೆದಿದ್ದಾನೆ. ಶಿಖಾಶಬ್ದವು ಪತಿಕರ್ಮಾಂಗಭೂತವಾದ ಶಿಖೆಯಲ್ಲಿಯೇ ವಿಹಿತವಾಗಿರುವುದೆಂದು ಇಲ್ಲಿಯವರೆಗೆ ಶಾಸ್ತ್ರಾನುಸಾರವಾಗಿ ಸಿದ್ಧಗೊಳಿಸಿರುವುದನ್ನು ಈತನು ಚನ್ನಾಗಿ ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. ಈತನು ಉದಾಹರಿಸಿದ " ಶಿಖಾಶಿಫಾಕೇಕಿಮೌಲ್ಯೋರ್ಜ್ವಾಲಾಶಾಖಾಗ್ರಮೌಲಿಷು" ಎಂಬ ಶ್ಲೋಕದಿಂದ ಶಿಖೆಗೆ ಅನೇಕ ಅರ್ಥಗಳಾಗುತ್ತಿರುವುದನ್ನು ಎಲ್ಲರೂಒಪ್ಪಿಕೊಳ್ಳುತ್ತಾರೆ. ಶಿಖೆಗೆ ಬೇರೆ ಅರ್ಥವು ಆಗುವುದೇ ಇಲ್ಲವೆಂದು ನಾವು ಹೇಳುವುದಿಲ್ಲ. ಆದರೆ ರುದ್ರಾಕ್ಷಧಾರಣಕ್ಕುಚಿತವಾದ ಶಿಖೆಯು " ಶಿಖಾ ಚೂಡಾ ಕೇಶಪಾಶೀ " ಎಂಬ ಅಮರಕೋಶಪ್ರಮಾಣಾನುಸಾರವಾಗಿ ಮಸ್ತಕಾಗ್ರವರ್ತಿವಿಧಿವಿಹಿತಕೇಶಸಮೂಹದಲ್ಲುಕ್ತವಾಗಿರುವುದೆಂದು ಹೇಳುತ್ತೇವೆ. ಇದೇ ಗುರುಸಾರ್ವಭೌಮರಾದ ರೇಣುಕ ಭಗವತ್ಪಾದರ ಅಭಿಪ್ರಾಯವು. ಇದೇ ಶಾಸ್ತ್ರಸಿದ್ಧಾಂತವು.

ಈತನು ೫೪ನೆಯ ಪುಟದಲ್ಲಿ—

" ಮಸ್ತಕಾಗ್ರರೂಪಶಿಖಾಶಬ್ದಾರ್ಥವು ಕರ್ಮಾಂಗಭೂತವಾದ ಶಿಖೆಯಿಲ್ಲದ ವೀರಶೈವಸ್ತ್ರೀಯರಲ್ಲಿಯೂ ಜಟಾಧಾರಿಗಳೂ ಮುಂಡಿಗಳೂ ಆದ ಪುರುಷರಲ್ಲಿಯೂ ಅಬಾಧಿತವಾಗಿರುವದರಿಂದ ಇತರ ಯಾವ ದೋಷಗಳಿಗೂ ಆಸ್ಪದವಾಗುವದಿಲ್ಲ ''

ಎಂದು ಬರೆದಿರುತ್ತಾನೆ.

ರುದ್ರಾಕ್ಷಧಾರಣಪ್ರಕರಣದಲ್ಲಿ ಪಠಿತವಾದ ಶಿಖೆಗೆ ಇಲ್ಲಿಯವರೆಗೂ ಯಾವ ಮತದವರೂ ಪ್ರಸಿದ್ಧಾರ್ಥವನ್ನು ಬಿಟ್ಟು ಈತನು

ಹೇಳುವಂತೆ ಅಪ್ರಸಿದ್ಧಾರ್ಥವನ್ನು ಮಾಡದಿರುವುದರಿಂದಲೂ, ಬೋಳುದಲೆಯೆಂದು ಹೇಳುವುದು ಶೂದ್ರಧರ್ಮವಾಗಿರುವುದರಿಂದಲೂ ಈ ದುರಭಿಪ್ರಾಯವು ವೈದಿಕರಿಗೆ ಅತ್ಯಂತ ಹೇಯವಾಗಿದೆ. ರುದ್ರಾಕ್ಷ ಧಾರಣವು ಜಟಾಧಾರಿಗಳಿಗೆ ಸಿದ್ಧಿಸಿಯೇ ಸಿದ್ಧಿಸುತ್ತದೆ. ಸ್ತ್ರೀಯರೂ, ಮುಂಡಿಗಳಾದ ಸನ್ಯಾಸಿಗಳೂ ಮಂತ್ರೋಚ್ಚಾರಣಮಾತ್ರದಿಂದ ಅದರ ಫಲವನ್ನು ಪಡೆಯಬೇಕು. ಈ ವಿಷಯವನ್ನು ೮೨-೮೩ ನೆಯ ಪುಟಗಳಲ್ಲಿ ಸ್ಪಷ್ಟೀಕರಿಸಿರುತ್ತೇವೆ. ಅಲ್ಲಿ ನೋಡಿಕೊಳ್ಳಬೇಕು. ಇದರಿಂದ ಯಾವ ಆಪತ್ತಿಯೂ ಸಂಭವಿಸುವುದಿಲ್ಲವಾದುದರಿಂದ, ಶಿಖಾಶಬ್ದಕ್ಕೆ ವಿಧಿವಿಹಿತಕೇಶಸಮೂಹವೆಂದೇ ಅರ್ಥವನ್ನು ಮಾಡಬೇಕಲ್ಲದೆ ಬೇರೆ ಮಾರ್ಗವೇ ಇಲ್ಲವೆಂದು ತಿಳಿಯಬೇಕು.

ಈತನು ಇದೇ ಪುಟದಲ್ಲಿ—

"ಮಂದಮತಿಗಳಾದ ಶಿಖಾವಿರೋಧಿಗಳಲ್ಲಿ ಕೆಲವರು "ಶಿಖಾಯಾಮೇಕಮೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ" ಎಂಬ ವಾಕ್ಯದಲ್ಲಿರುವ ಶಿಖಾಶಬ್ದಕ್ಕೆ ಶಿಖಾಸ್ಥಾನವೆಂದು ಲಕ್ಷ್ಯಾರ್ಥವನ್ನು ಮಾಡುವರು; ಇದು ಕೇವಲ ಮೂಢತನವು. ಯಾಕಂದರೆ—ಯಾವ ಸ್ಥಲದಲ್ಲಿ ಅನ್ವಯಾನುಪಪತ್ತಿಯು ಜಾಗರೂಕವಾಗಿರುವದೋ ಆ ಸ್ಥಲದಲ್ಲಿಯೇ ಲಕ್ಷಣಾವೃತ್ತಿಯನ್ನು ಸ್ವೀಕರಿಸಿ ತಜ್ಜನ್ಯವಾದ ಲಕ್ಷ್ಯಾರ್ಥವನ್ನು ಅಂಗೀಕರಿಸುವದು ಶಾಸ್ತ್ರಸಮ್ಮತವಾದುದು." ................"ಶಿಖಾ ಶಬ್ದಕ್ಕೆ ವಿಧಿವಿಹಿತಮಸ್ತಕಾಗ್ರವರ್ತಿಕೇಶಸಮೂಹವೆಂದು ವಾಚ್ಯಾರ್ಥವನ್ನು ಮಾಡಬೇಕಲ್ಲದೆ ಶಿಖಾಸ್ಥಾನವೆಂದು ಲಕ್ಷ್ಯಾರ್ಥವನ್ನು ಮಾಡಕೂಡದೆಂದು ಶಿಖಾವಾದಿಗಳಲ್ಲಿ ಕೆಲವರು ಅಭಿಪ್ರಾಯಪಡುವದಾದರೂ ಕೇವಲ ಅವಿಚಾರರಮಣೀಯವಾಗಿದೆ."

ಎಂದು ಬರೆದಿರುತ್ತಾನೆ. ಈತನ ಅವಿಚಾರರಮಣೀಯತ್ವವನ್ನು ಸ್ವಲ್ಪ ವಿಮರ್ಶಿಸೋಣ!

ಶಿಖಾವಾದಿಪಂಡಿತಪ್ರಕಾಂಡರು ತಮ್ಮ ಗ್ರಂಥದಲ್ಲಿ—

"ಶಿಖಾಯಾಂ (ವಿಧಿವಿಹಿತಮಸ್ತಕಾಗ್ರಸ್ಥಿತಕೇಶಸಮೂಹೇ) ಶಿಖಾ ಚೂಡಾಕೇಶಪಾಶೀ ವ್ರತಿನಸ್ತು ಜಟಾಸಟಾ- ಇತ್ಯಮ

ರೋಕ್ತೇಃ-ಅನೇನ ಕೇಷಾಂಚಿನ್ಮಂದಾನಾಂ ಶಿಖಾಶಬ್ದಸ್ಯ ನವಾ ಚ್ಯಾರ್ಥತಾ ಕಿಂತು ಲಕ್ಷ್ಯಾರ್ಥತೈವ ಯುಕ್ತಾ । ವೀರಶೈವಾನಾಂ ಶಿಖಾನರ್ಹತ್ವಾದಿತಿವಾದೋ ನಿರಸ್ತಃ ಪ್ರಸಿದ್ಧಶಕ್ಯಾರ್ಥಪರಿ ತ್ಯಾಗೇ ಬೀಜಾಭಾವಾತ್ । ಗಂಗಾಯಾಂ ಘೋಷ ಇತ್ಯಾದಾ ಗಂಗಾಪದಸ್ಯೇವ ಅನ್ವಯಾದ್ಯನುಪಪತ್ತ್ಯಭಾವಾತ್ ಶಕ್ಯಾರ್ಥ ತೈವಾತ್ರ ಶಿಖಾಶಬ್ದಸ್ಯ ಯುಜ್ಯತೇ । ಕಿಂಚ ಕಥಂವಾ ಶಿಖಾಶೂ ನ್ಯಮಸ್ತಕೇ ರುದ್ರಾಕ್ಷೋ ಧಾರ್ಯಃ ಶಿಖಾಸಂಬಂಧಿಮಸ್ತಕಭಿನ್ನ ಪದಾರ್ಥೇಧಾರಣಯೋಗ್ಯತ್ವೇ ಕಿಂನಸ್ಯಾತ್ ಘಟಇತ್ಯುಕ್ತೇ ಪಟ ಸ್ಯ ಬೋಧಃ? ಪಟೇಽಪಿ ಘಟಪದಶಕ್ತಿತತ್ಸಂಬಂಧಯೋರಭಾ ವಾತ್ ತಸ್ಮಾತ್ತ್ರೋಕ್ಕೇಶಪ್ರಸಿದ್ಧಶಿಖಾಯಾಮೇಕೋ ರುದ್ರಾಕ್ಷಃ ಧಾರ್ಯಃ ॥ ”

ಈ ರೀತಿಯಾಗಿ ಬರೆದಿರುವರು. ಈ ವಾಕ್ಯಗಳ ಗೂಢಾರ್ಥವನ್ನು ಈತನು ತಿಳಿಯಲು ಸಮರ್ಥನಾಗದೆ—

> “ಯಾವ ಸ್ಥಲದಲ್ಲಿ ಅನ್ವಯಾನುಪಪತ್ತಿಯು ಜಾಗರೂಕವಾಗಿರುವದೋ ಆ ಸ್ಥಲದಲ್ಲಿಯೇ ಲಕ್ಷಣಾವೃತ್ತಿಯನ್ನು ಸ್ವೀಕರಿಸಿ ತಜ್ಜನ್ಯವಾದ ಲಕ್ಷ್ಯಾರ್ಥವನ್ನು ಅಂಗೀಕರಿಸುವದು ಶಾಸ್ತ್ರಸಮ್ಮತವಾದುದು ”

ಎಂದು ಬರೆದಿರುತ್ತಾನೆ. ಇದು ಸಿದ್ಧಾಂತಶಿಖೋಪನಿಷದ್ವೀರಶೈವಭಾಷ್ಯ ಕಾರರ ಅಭಿಪ್ರಾಯವಲ್ಲ. ಕಿಂತು ಯಾವ ಸ್ಥಲದಲ್ಲಿ ಅನ್ವಯಾದ್ಯನು ಪಪತ್ತಿಗಳು ಜಾಗರೂಕಗಳಾಗಿವೆಯೋ ಆ ಸ್ಥಲದಲ್ಲಿಯೇ ಲಕ್ಷಣಾ ವೃತ್ತಿಯನ್ನು ಸ್ವೀಕರಿಸಿ ತದ್ವಿಶಿಷ್ಟವಾದ ಲಕ್ಷ್ಯಾರ್ಥವನ್ನು ಅಂಗೀಕರಿ ಸುವುದು ಶಾಸ್ತ್ರಸಮ್ಮತವಾದುದೆಂಬುದೇ ಅವರ ಅಭಿಪ್ರಾಯವು. ಅವರು “ಅನ್ವಯಾದ್ಯನುಪಪತ್ತ್ಯಭಾವಾತ್” ಎಂದು ಸ್ಪಷ್ಟವಾಗಿ ಅನ್ವ ಯಶಬ್ದದ ಮುಂದೆ “ ಆದಿ ” ಎಂಬ ಪದವನ್ನಿಟ್ಟದ್ದರೂ ಅದನ್ನು ಈ ಮುಂಡಿಯು ಕೈಬಿಟ್ಟು ತನ್ನ ದುರುದ್ದೇಶವನ್ನು ಸಾಧಿಸಲು ಪ್ರಯತ್ನ

ಪಟ್ಟಿರುವುದು ಅತ್ಯಂತ ನಿಂದ್ಯವೂ ತುಚ್ಛವೂ ಆಗಿದೆ. ಈತನು ಭಾಷ್ಯ ಕಾರರ ಅಭಿಪ್ರಾಯವನ್ನು ತಿಳಿಯದೆ ಲಕ್ಷಣಾವೃತ್ತಿಯನ್ನು ಸ್ವೀಕರಿಸಿ ತಜ್ಜನ್ಯವಾದ ಲಕ್ಷ್ಯಾರ್ಥವನ್ನು ಅಂಗೀಕರಿಸುವುದು ಶಾಸ್ತ್ರಸಮ್ಮತ ವಾದುದೆಂದು ಬರೆದಿರುತ್ತಾನೆ. ಹೀಗೆ ಬರೆದಿರುವುದು ಶುದ್ಧ ತಪ್ಪು. ಯಾಕೆಂದರೆ—ಲಕ್ಷ್ಯಾರ್ಥವು ಲಕ್ಷಣಾವೃತ್ತಿಜನ್ಯವಲ್ಲ. ಲಕ್ಷಣಾವೃತ್ತಿ ಯು (ಶಕ್ಯಾರ್ಥಸಂಬಂಧವು) "ಗಂಗಾಯಾಂ ಘೋಷಃ" ಎಂಬಲ್ಲಿ ಗಂಗಾಪದಶಕ್ಯಾರ್ಥವು ಪ್ರವಾಹವು. ಇದರ ಸಾಮೀಪ್ಯಸಂಬಂಧವೇ ಲಕ್ಷಣಾವೃತ್ತಿಯು. ಈ ಸಾಮೀಪ್ಯರೂಪವಾದ ಸಂಬಂಧದಿಂದ ಗಂಗಾ ತೀರವು ಜನ್ಯವಾಗಿಲ್ಲ. ಕಿಂತು ತನಗೆ ಕಾರಣಗಳಾದವುಗಳಿಂದ ಜನ್ಯ ವಾಗಿದೆ. ಪ್ರವಾಹಸಾಮೀಪ್ಯಕ್ಕೂ ತೀರವೆಂಬ ಲಕ್ಷ್ಯಾರ್ಥಕ್ಕೂ ಜನ್ಯ ಜನಕಭಾವವಿಲ್ಲ. ಪ್ರವಾಹದ ಸಾಮೀಪ್ಯರೂಪವಾದ ಲಕ್ಷಣಾವೃತ್ತಿಯು (ಲಕ್ಷಣೆಯು) ತೀರದಲ್ಲಿ ಉಂಟು. ಈತನು ಇಂಥ ಸ್ಥೂಲ ವಿಷಯವನ್ನು ಸಹ ತಿಳಿಯಲು ಸಮರ್ಥನಾಗದಿದ್ದರೂ, ಆ ಪ್ರತಿವಾದಿಗಜಕೇಸರಿಗಳ ಅಭಿಪ್ರಾಯವನ್ನು ಖಂಡಿಸಲು ಹವಣಿಸಿರುವುದು ಸಪ್ತಸಮುದ್ರಗಳನ್ನೇ ಒಣಗಿಸಿಬಿಡುವೆನೆಂದೆನ್ನುವ ಹುಚ್ಚನ ಹವಣಿಕೆಯಂತಿರುವುದು.

ಈತನು ೫೫ ನೆಯ ಪುಟದಲ್ಲಿ—

"ಶಿಖಾ ಚೂಡಾ ಕೇಶಪಾಶೀ" ಎಂದು ಅಮರವಚನವಿರದೆ "ಶಿಖಾ ಚೂಡಾ ಕೇಶಪಾಶೀ" ಎಂದಿದೆ "ಕೇಶಸಮೂಹೋಽತ್ರಾಸ್ತೀತಿ ಕೇಶಪಾಶೀ" ಎಂಬ ವ್ಯುತ್ಪತ್ತಿ ಯಿಂದ ಕೇಶಸಮೂಹವುಳ್ಳದ್ದೆಂಬ ಅರ್ಥವು ಲಿಂಗಭಟ್ಟಿಯಲ್ಲಿ ಸ್ಪಷ್ಟವಾಗಿ ಮಾಡಲ್ಪ ಟ್ಟಿದೆ. ಆದರಿಂದ ವಿಧಿವಿಹಿತಮಸ್ತಕಾಗ್ರವರ್ತಿಕೇಶ ಸಮೂಹವೆಂದು ಅರ್ಥವಾಗುವದಿಲ್ಲ. ಆದರೂ ಅದು ವಾಚ್ಯಾರ್ಥವೆನಿಸುವದಿಲ್ಲ. ಅಥವಾ ಶಿಖಾವಾದಿಗಳ ಅಭಿಪ್ರಾಯದಂತೆ 'ಶಿಖಾ ಚೂಡಾ ಕೇಶಪಾಶೆ' ಎಂದು ಅಮರವಚನವಿರುವದೆಂದು ಒಪ್ಪಿದರೂ ಅದರಿಂದ ಕೇಶಪಾಶಶಬ್ದಕ್ಕೆ ಸಾಮಾನ್ಯವಾಗಿ ಶಿರೋವರ್ತಿಕೇಶಸಮೂಹವೆಂದು ವಾಚ್ಯಾರ್ಥ ವಾಗುವದಲ್ಲದೆ ವಿಧಿವಿಹಿತಮಸ್ತಕಾಗ್ರವರ್ತಿಕೇಶಸಮೂಹವೆಂದು ವಾಚ್ಯಾರ್ಥವಾಗುವ ದಿಲ್ಲ. ಯಾಕಂದರೆ ಅಮರಸಿಂಹನು 'ಚಿಕುರಃ ಕುಂತಲೋ ವಾಲಃ ಕಚಃ ಕೇಶಶ್ಶಿರೋರುಹಃ' ಎಂಬ ವಾಕ್ಯದಿಂದ

ಕೇಶಶಬ್ದಕ್ಕೆ-ಶಿರೋವರ್ತಿಕೇಶತ್ವಾವಚ್ಛಿನ್ನದಲ್ಲಿ ಶಕ್ತಿಯನ್ನು ಅಂಗೀಕರಿಸಿರುವನಲ್ಲದೆ ವಿಧಿವಿಹಿತಮಸ್ತಕಾಗ್ರವರ್ತಿಕೇಶತ್ವಾವಚ್ಛಿನ್ನದಲ್ಲಿ ಶಕ್ತಿಯನ್ನು ಅಂಗೀಕರಿಸಿರುವದಿಲ್ಲ. ಅತ ಏವ ಗುರುಬಾಲಪ್ರಬೋಧಿಕಾಕಾರನು-ಕೆ-ಶಿರಸಿ-ಶೇತೆ-ಇತಿಕೇಶಃ! ಎಂಬ ವ್ಯುತ್ಪತ್ತಿಯನ್ನು ತೋರಿಸಿರುವನು ''

ಎಂದು ಬರೆದಿದ್ದಾನೆ. ಈ ವಿಷಯವನ್ನು ವಿಮರ್ಶಿಸೋಣ!

ಸಿದ್ಧಾಂತಶಿಖೋಪನಿಷದ್ಭಾಷ್ಯದಲ್ಲಿ—" ಕೇಶಪಾಶೀ ' ಎಂಬುದಕ್ಕೆ ಬದಲಾಗಿ ‹‹ ಕೇಶಪಾಶಿ '' ಎಂದು ವ್ಯತ್ಯಸ್ತವಾಗಿ ಮುದ್ರಿತವಾಗಿರುವುದು. ಇದನ್ನು ಗ್ರಂಥಕಾರರ ಮೇಲೆ ಆರೋಪಿಸಿರುವುದು ಮಂದತನವಲ್ಲವೇ? ಈತನ ಪುಸ್ತಕದ ೪೭ ನೆಯ ಪುಟದಲ್ಲಿ ‹‹ ಶರೀರಾವಚ್ಛೇದೇನ'' ಎಂಬುದಕ್ಕೆ ಬದಲಾಗಿ ‹‹ ಶರೀರಾವಚ್ಛೇನ'' ಎಂದು ಮುದ್ರಿತವಾಗಿದೆ. ಇದರಂತೆ ನೂರಾರು ದೋಷಗಳು ಈತನ ಪುಸ್ತಕದಲ್ಲಿ ಪ್ರಕಾಶಿಸುತ್ತವೆ. ಈ ವಿಷಯವನ್ನರಿಯದೆ ಮನಬಂದಂತೆ ಹಾರಾಡಿರುವದು ಹೇಯವಲ್ಲದೆ ಬೇರೆಯಲ್ಲ. " ಶಿಖಾ ಚೂಡಾ ಕೇಶಪಾಶೀ ವ್ರತಿನಸ್ತು ಸಟಾಜಟಾ'' ಈ ಅಮರಕೋಶವಚನದಿಂದ ಶಿಖಾಶಬ್ದಕ್ಕೆ ವಿಧಿವಿಹಿತಮಸ್ತಾಕಾಗ್ರವರ್ತಿಕೇಶಸಮೂಹವೆಂದು ಅರ್ಥವಾಗುವುದಿಲ್ಲವಂತೆ! ಸಮುದ್ರವು ಜಲಸಮೂಹವಷ್ಟೆ! ಆದರೂ ಅದು ಉದನ್ವಾನ್= (ಉದಕವುಳ್ಳದ್ದು) ಎಂದು ಹೇಳಿಸಿಕೊಳ್ಳುವಂತೆಯೂ, ಸೂರ್ಯನು ಪ್ರಕಾಶಪುಂಜನು ಆದರೂ ಭಾಸ್ವಾನ್= (ಪ್ರಕಾಶವುಳ್ಳವನು) ಎಂದು ಹೇಳಿಸಿಕೊಳ್ಳುವಂತೆಯೂ, ಶಿಖೆಯು ವಸ್ತುತಃ ಕೇಶಾತಿರಿಕ್ತವಾಗಿಲ್ಲವಾದರೂ ಕೇಶಸಮೂಹವುಳ್ಳದ್ದೆಂದು ಅಮರಸಿಂಹನು ಲೋಕಾನುಭವದಂತೆ (ಕೇಶಪಾಶೀ) ಎಂದು ಪ್ರಯೋಗಿಸಿರುವನು. ಕೇಶಸಮೂಹವುಳ್ಳ ಶಿಖೆಯು ಕೇಶಗಳ ಸಮೂಹಕ್ಕೆ ಭಿನ್ನವಾಗಿಲ್ಲವಾದಪ್ರಯುಕ್ತ ಸಿದ್ಧಾಂತಶಿಖೋಪನಿಷತ್ತಿನ ವೀರಶೈವ ಭಾಷ್ಯಕಾರರು ವಿಧಿವಿಹಿತಮಸ್ತಕಾಗ್ರಸ್ಥಿತಕೇಶಸಮೂಹವೆಂದು ಅರ್ಥಮಾಡಿರುವರು. ಹೀಗೆ ಅರ್ಥಮಾಡಿರುವುದು

ಕೇಶಸಮೂಹಕ್ಕೂ ಕೇಶಸಮೂಹವುಳ್ಳ ಶಿಖೆಗೂ ಅಭೇದದೃಷ್ಟಿ ಯೆಂದು ತಿಳಿಯದೆ ಆಶಂಕಿಸಿರುವುದು ಮಂದತನವು. ಇಲ್ಲಿ ವಿಧಿ ವಿಹಿತಮಸ್ತಕಾಗ್ರಸ್ಥಿತಕೇಶಸಮೂಹವೆಂದು ವಾಚ್ಯಾರ್ಥವಾಗುವದಿಲ್ಲ ವೆಂದರೆ, ಇನ್ನಾವುದು ವಾಚ್ಯಾರ್ಥವಾಗುವುದೋ ಈ ಘನಪಂಡಿತ ನಿಗೇ ಗೊತ್ತು! ಕೋಶಕಾರರು ಕೇಶಶಬ್ದಕ್ಕೆ ಕೇಶತ್ವಾವಚ್ಛಿನ್ನದಲ್ಲಿ ಶಕ್ತಿಯನ್ನು ತೋರಿಸಿರುವುದು ಸಾಧುವಾಗಿದೆ. ಆದರೆ ವಿಧಿವಿಹಿತಮಸ್ತ ಕಾಗ್ರವರ್ತಿಕೇಶತ್ವಾವಚ್ಛಿನ್ನವು (ಕೇಶಗಳು) ಶಿರೋವರ್ತಿಕೇಶತ್ವಾವ ಚ್ಛಿನ್ನಕೇಶಗಳಲ್ಲವೇ? ಕೇಶತ್ವಾವಚ್ಛಿನ್ನಭೇದವನ್ನು ವಿಧಿವಿಹಿತ ಕೇಶತ್ವಾವಚ್ಛಿನ್ನದಲ್ಲಿ ಒಪ್ಪುವದಾದರೆ "ವಹ್ನಿರ್ನ ವಿಧಿವಿಹಿತಾಗ್ನಿಃ" ಎಂಬ ವ್ಯವಹಾರದ ಆಪತ್ತಿಯು ಬರುವುದಷ್ಟೆ! ಇದನ್ನು ಈತನು ಹೇಗೆ ವಾರಣಮಾಡುವನೋ ತಿಳಿಯದಾಗಿದೆ. ಈ ಆಪತ್ತಿಯು ಈತನಿಗೆ ಇಷ್ಟವಾದಪಕ್ಷದಲ್ಲಿ—ವಹ್ನಿಭಿನ್ನಗಳಾದ ಜಲಾದಿಗಳಿಂದ ಶೀತನಿವಾರಣ ಪಾಕದಾಹಪ್ರಕಾಶಾದಿಗಳಾಗದಿರುವಂತೆ ಯಾಜ್ಞಿಕಾಗ್ನಿಮಹಾನಸೀಯಾ ಗ್ನಿಗಳಿಂದಲೂ ಆಗದೇ ಹೋಗಬೇಕಾಗುವುದು. ವಹ್ನಿತ್ವಾವಚ್ಛಿನ್ನ ಭೇದವನ್ನು ಮಹಾನಸೀಯಾದಿವಹ್ನಿಗಳಲ್ಲಿ ಯಾವ ತಾರ್ಕಿಕರೂ ಮಾನಿ ಸುವುದಿಲ್ಲ. ಆದರೆ ಕೇಶತ್ವಾವಚ್ಛಿನ್ನಭೇದವನ್ನು ವಿಧಿವಿಹಿತಕೇಶದಲ್ಲಿ ಮಾನಿಸುವ ಈತನು ಯಾವ ಘನಪಾಠಶಾಲೆಯಲ್ಲಿ ತರ್ಕವನ್ನೋದಿರು ವನೋ ತಿಳಿಯದಾಗಿದೆ. ಇರಲಿ; ಕೋಶಕಾರರೇ ಆಗಲಿ, ಗುರುಬಾಲ ಪ್ರಬೋಧಿಕಾಕಾರರೇ ಆಗಲಿ, ತತ್ತದ್ವ್ಯಕ್ತಿವಿಶೇಷದಲ್ಲಿಲ್ಲದ ಶಕ್ತಿಯನ್ನು ತತ್ಸಾಮಾನ್ಯದಲ್ಲಿ ಮಾನಿಸಿಲ್ಲ. (ವಿಧಿವಿಹಿತಮಸ್ತಕಾಗ್ರಸ್ಥಿತಕೇಶವಿಶೇಷ ದಲ್ಲಿಲ್ಲದ ಶಕ್ತಿಯನ್ನು ಶಿರೋವರ್ತಿಕೇಶತ್ವಾವಚ್ಛಿನ್ನದಲ್ಲಿ ಮಾನಿಸಿಲ್ಲವು). ಕಿಂತು ವಿಧಿವಿಹಿತಾದಿಕೇಶತ್ವಾವಚ್ಛಿನ್ನದಲ್ಲಿದ್ದ ಶಕ್ತಿಯನ್ನೇ ಶಿರೋವರ್ತಿ ಕೇಶತ್ವಾವಚ್ಛಿನ್ನದಲ್ಲಿ ಮಾನಿಸಿರುವರೆಂಬುದೇ ಸಿದ್ಧಾಂತವು. ಅತಏವ ತಾರ್ಕಿಕರೂ ಕೂಡ ವಿಶೇಷಾಭಾವಕೂಟಕ್ಕೆ ಸಾಮಾನ್ಯಾಭಾವಹೇತುತ್ವ ವನ್ನು ಅಂಗೀಕರಿಸಿರುವರು.

ಈ ಘನಪಂಡಿತನು ಸಾಮಾನ್ಯಧರ್ಮಾವಚ್ಛಿನ್ನವಾಚಕಶಬ್ದದ ಶಕ್ತಿಯು ವಿಶೇಷಧರ್ಮಾವಚ್ಛಿನ್ನಾರ್ಥದಲ್ಲಿರುವುದಿಲ್ಲ, ಆದರೆ ಲಕ್ಷಣಾ ಇರುವದೆಂದು ಬರೆದಿರುತ್ತಾನೆ. ಈ ವಿಷಯವನ್ನು ವಿಮರ್ಶಿಸೋಣ! ಒಂದೊಂದು ಘಟದಲ್ಲಿಲ್ಲದ ಘಟಪದಶಕ್ತಿಯು ಘಟಸಾಮಾನ್ಯದಲ್ಲಿ ಬರಲಾರದೆಂಬುದು ಲೋಕಪ್ರಸಿದ್ಧವು. ಘಟತ್ವಾವಚ್ಛಿನ್ನಘಟವಾಚಕಶಬ್ದದ ಶಕ್ತಿಯ ಅಭಾವವು ಘಟವಿಶೇಷ (ನೀಲಪೀತಘಟ) ಗಳಲ್ಲಿರುವುದೆಂದು ಒಪ್ಪಿದರೆ, ಆಯಾಯ ನೀಲಾದಿಘಟಗಳಲ್ಲಿರುವ ಘಟಪದಶಕ್ತ್ಯಭಾವಕೂಟವನ್ನೇ ಹೇತುವನ್ನಾಗಿ ಮಾಡಿಕೊಂಡು ಆ ಅಭಾವಕೂಟ ಹೇತುವು ಸ್ವರೂಪಸಂಬಂಧದಿಂದ ಘಟತ್ವಾವಚ್ಛಿನ್ನಘಟವೆಂಬ ಪಕ್ಷದಲ್ಲಿರುವುದರಿಂದ ಘಟಪದಶಕ್ತ್ಯಭಾವವೆಂಬ ಸಾಧ್ಯವೂ ಘಟದಲ್ಲಿ ಬರಲೇಬೇಕು. ಬರುವುದೆಂದರೆ ಘಟವು ಘಟದ ಶಕ್ತ್ಯಭಾವವುಳ್ಳದ್ದು ಎಂಬುವ ಬುದ್ಧಿಗೆ ಪ್ರಾಮಾಣ್ಯಾಪತ್ತಿಯುಂಟಾಗಬೇಕು. ಸಾಮಾನ್ಯವಾಚಕಪದಶಕ್ತಿಯನ್ನು ವಿಶೇಷದಲ್ಲಿ ಮಾನಿಸದಿರುವ ಈತನು ಈ ಆಪತ್ತಿಯನ್ನು ವಾರಣಮಾಡಬಹುದೋ? ಸಾಮಾನ್ಯತಃ ಘಟತ್ವಾವಚ್ಛಿನ್ನವಾಚಕವಾದ ಘಟಪದಶಕ್ತಿಯು ನೀಲಾದಿಘಟವಿಶೇಷದಲ್ಲಿಲ್ಲವಾದರೆ ಘಟತ್ವಾವಚ್ಛಿನ್ನವಾದ ಘಟಪದಾರ್ಥದಲ್ಲಿಯೂ ಇಲ್ಲವೆಂದು ಹೇಳಬೇಕಾದೀತು.

ಈತನು ೫೬ ನೆಯ ಪುಟದಲ್ಲಿ—

"ಘಟಶಬ್ದಕ್ಕೆ ನೀಲಘಟವೆಂದಾಗಲಿ ಅಥವಾ ಜಲಾನಯನಯೋಗ್ಯಘಟವೆಂದಾಗಲಿ ಮಾಡುವ ಅರ್ಥವಾದರೂ ವಾಚ್ಯಾರ್ಥವಾಗಬೇಕಾದೀತು. ಆಗುವದಿಲ್ಲ. ಯಾಕಂದರೆ—ಸಾಮಾನ್ಯಧರ್ಮಾವಚ್ಛಿನ್ನವಾಚಕಶಬ್ದಗಳು ವಿಶೇಷಧರ್ಮಾವಚ್ಛಿನ್ನಾರ್ಥದಲ್ಲಿ ಲಾಕ್ಷಣಿಕವೆಂದು ಶಾಸ್ತ್ರಸಿದ್ಧಾಂತವಿದೆ"

ಎಂದು ಬರೆದಿರುತ್ತಾನೆ. ಹೀಗೆ ಬರೆದಿರುವುದು ಅಯುಕ್ತವಾಗಿದೆ. ಏಕೆಂದರೆ—"ಯಃ ಘಟವಿಶೇಷೇ ನಾಸ್ತಿ ಸ ಘಟಸಾಮಾನ್ಯೇಽಪಿ

ನಾಸ್ತಿ ಯಥಾ ಪಟತ್ವಂ" ಅಂದರೆ ಯಾವುದು ಘಟವಿಶೇಷದಲ್ಲಿಲ್ಲವೋ ಅದು ಘಟಸಾಮಾನ್ಯದಲ್ಲಿಯೂ ಇಲ್ಲ. ಹೇಗೆಂದರೆ—ಪಟತ್ವವು ನೀಲ ಘಟಾದಿವಿಶೇಷದಲ್ಲಿಲ್ಲವಾದಪ್ರಯುಕ್ತ, ಅದು (ಪಟತ್ವವು) ಘಟತ್ವಾವಚ್ಛಿನ್ನದಲ್ಲಿಯೂ ಇಲ್ಲವಷ್ಟೆ! ಇದರಂತೆ ನೀಲಾದಿಘಟವಿಶೇಷದಲ್ಲಿಲ್ಲದ ಘಟಪದಶಕ್ತಿಯು ಯಾವ ಘಟತ್ವಾವಚ್ಛಿನ್ನದಲ್ಲಿ (ಎಲ್ಲ ಘಟಗಳಲ್ಲಿ) ಯೂ ಇಲ್ಲದೆ ಹೋಗಬೇಕಲ್ಲವೇ? ಆದುದರಿಂದ ಘಟತ್ವಾವಚ್ಛಿನ್ನವಾಚಕ ವಾದ ಘಟಪದಶಕ್ತಿಯು ನೀಲಾದಿಘಟವಿಶೇಷದಲ್ಲಿಯೂ ಇರುವುದೆಂದು ಶಾಸ್ತ್ರಸಿದ್ಧಾಂತವದೆಯಲ್ಲದೆ ಘಟವಿಶೇಷದಲ್ಲಿಲ್ಲವೆಂದು ಶಾಸ್ತ್ರಸಿದ್ಧಾಂತ ವಿಲ್ಲ. ಲೋಕದಲ್ಲಿ "ಘಟಮಾನಯ" ಘಟವನ್ನು ತೆಗೆದುಕೊಂಡು ಬಾ, ಎಂದು ಹೇಳಲು, ಸೇವಕನು ಘಟವಿಶೇಷವನ್ನೇ ತರುತ್ತಾನಲ್ಲದೆ ಘಟತ್ವಾವಚ್ಛಿನ್ನವನ್ನು (ಲೋಕದಲ್ಲಿರುವ ಎಲ್ಲ ಘಟಗಳನ್ನೂ) ತರುವು ದಿಲ್ಲ. ಅಂದಮೇಲೆ ಸಾಮಾನ್ಯಧರ್ಮಾವಚ್ಛಿನ್ನವಾಚಕಘಟಪದಶಕ್ತಿ ಯು ವಿಶೇಷದಲ್ಲಿರದೆ ಇದ್ದರೆ ಘಟವಿಶೇಷವನ್ನು ತರಲಾರನಷ್ಟೆ! ಆದುದರಿಂದ ಸಾಮಾನ್ಯಧರ್ಮಾವಚ್ಛಿನ್ನವಾಚಕಘಟಾದಿಪದಶಕ್ತಿಯನ್ನು ನೀಲಘಟಾದಿ ವಿಶೇಷದಲ್ಲಿಯೂ ಸ್ವೀಕರಿಸಬೇಕು. ಹೀಗೆ ಸ್ವೀಕರಿಸಿದರೆ ಕೇಶತ್ವಾವಚ್ಛಿನ್ನಕೇಶಪಾಶಿ ಶಬ್ದಕ್ಕೆ ವಿಧಿವಿಹಿತಮಸ್ತಕಾಗ್ರಸ್ಥಿತ ಕೇಶ ಸಮೂಹವು ವಾಚ್ಯಾರ್ಥವಾಗುವದಿಲ್ಲವೆಂದು ಹೇಳುವದು ಅಯುಕ್ತವು. ಆದುದರಿಂದ ತತ್ತದ್ವ್ಯಕ್ತಿವಿಶೇಷದಲ್ಲಿಯೂ ಕೂಡ ಸಾಮಾನ್ಯಪದದ ಶಕ್ತಿಯಿರುವುದೆಂದು ಮುಕ್ತಾವಲಿಯಲ್ಲಿ—

ನಚ ವ್ಯಕ್ತೌ ಲಕ್ಷಣಾ ಅನುಪಪತ್ತಿಪ್ರತಿಸಂಧಾನಂ ವಿನಾಪಿ ವ್ಯಕ್ತಿಬೋಧಾತ್ । ನಚ ವ್ಯಕ್ತಿಶಕ್ತಾವಾನಂತ್ಯಂ ಸಕಲವ್ಯ ಕ್ತಾವೇಕಸ್ಯಾ ಏವ ಶಕ್ತೇಃ ಸ್ವೀಕಾರಾತ್ । ನಚಾನನುಗಮಃ ಗೋತ್ವಾದೇರೇವಾನುಗಮಕತ್ವಾತ್ । ಕಿಂಚ ಗೌಃ ಶಕ್ಯಾ ಇತಿ ಶಕ್ತಿಗ್ರಹೋ ಯದಿ ತದಾ ವ್ಯಕ್ತೌ ಶಕ್ತಿಃ । ಇತ್ಯಾದಿಯಾಗಿ

"ತಸ್ಮಾತ್ ತತ್ತಜ್ಞಾತ್ಯಾಕೃತಿವಿಶಿಷ್ಟತತ್ತದ್ವ್ಯಕ್ತಿಬೋಧಾನುಪಪತ್ತ್ಯಾಕಲ್ಪ್ಯಮಾನಾಶಕ್ತಿರ್ಜಾತ್ಯಾಕೃತಿವಿಶಿಷ್ಟವ್ಯಕ್ತೌ ವಿಶ್ರಾಮ್ಯತಿ" ಇತ್ಯಂತಪಂಕ್ತಿಗಳಿಂದ ಶ್ರೀ ವಿಶ್ವನಾಥಪಂಚಾನನ ಭಟ್ಟಾಚಾರ್ಯರು ಸಿದ್ಧಾಂತಿಸಿರುವರು. ಈ ಪಂಕ್ತಿಗಳಿಂದ ಘಟಾದಿಪದಶಕ್ತಿಯು ತತ್ತದ್ಘಟಾದಿವ್ಯಕ್ತಿವಿಶೇಷದಲ್ಲಿಯೂ ಸಿದ್ಧಿಸಲ್ಪಟ್ಟತಷ್ಟೆ! ಇದರಿಂದ ಘಟಶಬ್ದಕ್ಕೆ ನೀಲಘಟಾದಿವ್ಯಕ್ತಿವಿಶೇಷದಲ್ಲಿ ಶಕ್ತಿಯನ್ನು ಅಂಗೀಕರಿಸಿದಂತಾಗಲಿಲ್ಲವೇ? ಅಂದಮೇಲೆ ಘಟಶಬ್ದಕ್ಕೆ ನೀಲಪೀತಾದಿ ಘಟವೆಂದಾಗಲಿ ಜಲಾನಯನಯೋಗ್ಯಘಟವೆಂದಾಗಲಿ ಮಾಡುವ ಅರ್ಥವು ವಾಚ್ಯಾರ್ಥವಾಗಲು ಬಾಧಕವೇನು? "ಜಾತ್ಯಾಕೃತಿವ್ಯಕ್ತಯಃ ಪದಾರ್ಥಃ" ಎಂಬ ನ್ಯಾಯಸೂತ್ರವು ಘಟಾದಿಪದಶಕ್ಯಾರ್ಥಗಳು (ಆಯಾಯ ವ್ಯಕ್ತಿವಿಶೇಷಗಳು) ಆಗುತ್ತವೆಂದೂ, "ಪದಾರ್ಥಃ" ಎಂಬ ಏಕವಚನದಿಂದ ಜಾತ್ಯಾಕೃತಿವ್ಯಕ್ತಿಗಳಲ್ಲಿ ಒಂದೇ ಘಟಾದಿಪದಶಕ್ತಿಯೆಂದೂ ಅಭಿಪ್ರಾಯಪಡುತ್ತದೆ. ಹೀಗಿದ್ದು—

"ಘಟ ಶಬ್ದಕ್ಕೆ ನೀಲಘಟವೆಂದಾಗಲಿ ಜಲಾನಯನಯೋಗ್ಯಘಟವೆಂದಾಗಲಿ ಮಾಡುವ ಅರ್ಥವು ವಾಚ್ಯಾರ್ಥವಾಗುವುದಿಲ್ಲ."

ಎಂದು ಈತನು ಬಹು ಧಿಟ್ಟತನದಿಂದ ಹೇಳಿರುವುದು ಆಶ್ಚರ್ಯವು. "ಅನುಪಪತ್ತಿಪ್ರತಿಸಂಧಾನಂ ವಿನಾಪಿ ವ್ಯಕ್ತಿಬೋಧಾತ್"ಎಂದು ಪೂರ್ವದಲ್ಲಿ ಹೇಳಿದ ವಾಕ್ಯದಂತೆ ಯಾವ ಸ್ಥಲದಲ್ಲಿ ಅನ್ವಯಾನುಪಪತ್ತಿ ತಾತ್ಪರ್ಯಾನುಪಪತ್ತಿಗಳೆಂಬ ಲಕ್ಷಣಾಬೀಜಗಳಿಲ್ಲವೋ, ಅಲ್ಲಿಯೂ ಲಕ್ಷಣೆಯನ್ನು ಸ್ವೀಕರಿಸುವುದು ಪ್ರಮಾದವು. ಪ್ರಕೃತ ಘಟಶಬ್ದಕ್ಕೆ ನೀಲಘಟವೆಂತಲೂ ಪೀತಘಟವೆಂತಲೂ ಹೀಗೆ ಬೇರೆ ಬೇರೆ ಘಟವಿಶೇಷಗಳು ವಾಚ್ಯಾರ್ಥವಾಗಲು ಬಾಧಕವಿಲ್ಲ. (ಅನ್ವಯಕ್ಕೂ ತಾತ್ಪರ್ಯಕ್ಕೂ ಅನುಪಪತ್ತಿ ಇಲ್ಲ)."ಜಾತೇರಸ್ತಿತ್ವನಾಸ್ತಿತ್ವೇ ನ ಹಿ ಕಶ್ಚಿದ್ವಿವಕ್ಷತಿ। ನಿತ್ಯತ್ವಂ ಲಾಕ್ಷಣೀಯಾಯಾ ವ್ಯಕ್ತೇಸ್ತೇಹಿ ವಿಶೇಷಣೇ ॥ ಇತಿ

ತದಪಿ ತುಚ್ಛಂ । ವ್ಯಕ್ತಿಂ ವಿನಾ ಕೃತಾಯಾಂ ಗೋತ್ವಾದಿಜಾತೌ ಗವಾದಿಪದಸ್ಯ ಮುಖ್ಯಪ್ರಯೋಗಾಭಾವೇನ ತನ್ಮಾತ್ರಸ್ಯ ಅಶಕ್ಯತ್ವೇ ತದ್ವತಿ ಗವಾದೌ ಲಕ್ಷಣಾಯಾ ವಕ್ತುಮಶಕ್ಯತ್ವಾತ್ ಶಕ್ಯಸಂಬಂಧಸ್ಯೈವ ಲಕ್ಷಣಾತ್ವಾತ್" ಎಂದು ಜಗದೀಶಚಂದ್ರ ತರ್ಕಾಲಂಕಾರಭಟ್ಟಾಚಾರ್ಯರು ಕೂಡ ಶಬ್ದಶಕ್ತಿಪ್ರಕಾಶಿಕೆಯಲ್ಲಿ ಸಾಮಾನ್ಯವಾಚಿಗೋಪದಶಕ್ತಿಯನ್ನು ಗೋವಿಶೇಷವ್ಯಕ್ತಿಗಳಲ್ಲಿ ಸ್ವೀಕರಿಸಿರುವರು.

ಈತನು ಇದೇ ಪುಟದಲ್ಲಿ—

"ಸಾಮಾನ್ಯಧರ್ಮಾವಚ್ಛಿನ್ನವಾಚಕಾನಾಂ ಶಬ್ದಾನಾಂ ವಿಶೇಷಧರ್ಮಾವಚ್ಛಿನ್ನೇ ಲಕ್ಷಣಾ । ಕ್ಷಿತ್ಯಾದಿನವದ್ರವ್ಯವಾಚಕಸ್ಯ ದ್ರವ್ಯಪದಸ್ಯ ಸುವರ್ಣಾದಿದ್ರವ್ಯವಿಶೇಷೇ ಲಕ್ಷಣಾ ಏವಂ ಸಾಮಾನ್ಯತೋ ಗೋತ್ವಾವಚ್ಛಿನ್ನವಾಚಕಸ್ಯ ಗೋಃಪದಸ್ಯ ಹಲವಹನಯೋಗ್ಯಗೋವಿಶೇಷೇ ಲಕ್ಷಣಾ ನತು ಶಕ್ತಿಃ" ಎಂದು ಗದಾಧರಭಟ್ಟಾಚಾರ್ಯನು ಶಕ್ತಿವಾದದಲ್ಲಿ ಸಿದ್ಧಾಂತಿಸಿರುವನು."

ಎಂದು ಬರೆದಿರುತ್ತಾನೆ.

ಈತನು ಬರೆದಿರುವಂತೆ ಶಕ್ತಿವಾದದಲ್ಲಿ ವಾಕ್ಯಗಳಿರುವುದಿಲ್ಲ. ಆದರೆ ಈ ಕೆಳಗೆ ಬರೆದಂತೆ ವಾಕ್ಯಗಳಿರುವವು. "ಏವಂಚ ಯತ್ರ ಸುವರ್ಣಹಲವಹನಯೋಗ್ಯಗವಾದಿರೂಪವಿಶೇಷಪರಂ ಸಾಮಾನ್ಯವಾಚಕಪದಘಟಿತಂ ದ್ರವ್ಯಂ ನಾಸ್ತಿ ಗೌರ್ನಾಸ್ತೀತಿ ವಾಕ್ಯಂ ಪ್ರಯುಜ್ಯತೇ ತತ್ರ ವಿಶೇಷಧರ್ಮಾವಚ್ಛಿನ್ನೇ ಲಕ್ಷಣೈವ ವಿಶೇಷಧರ್ಮಸ್ಯ ಸಾಮಾನ್ಯಪದಾವಾಚ್ಯತಯಾ ಶಕ್ತ್ಯಾ ತದ್ರೂಪಪ್ರಕಾರಕಬೋಧಾನಿರ್ವಾಹಾತ್" ಹೀಗೆ ವಾಕ್ಯಗಳಿವೆ. ಮೂಲಗ್ರಂಥಕಾರರ ವಾಕ್ಯಗಳನ್ನು ಇದ್ದಕ್ಕಿದ್ದಹಾಗೆ ಬರೆಯದೆ ತನ್ನ ಮನಸ್ಸಿಗೆ ಬಂದಂತೆ ಬರೆದಿರುವುದನ್ನು ನೋಡಿದರೆ ಈತನ ಸ್ವಭಾವವು ಯಾವರೀತಿಯಾಗಿರಬಹುದೆನ್ನುವುದನ್ನು ವಾಚಕರೇ ಊಹಿಸಬಹುದು. ಅಸ್ತು! ಈ ಗದಾಧರ

ಭಟ್ಟಾಚಾರ್ಯರ ವಾಕ್ಯಗಳ ತಾತ್ಪರ್ಯವೇನಂದರೆ—ಯಾವ ಸ್ಥಲದಲ್ಲಿ ಸಾಮಾನ್ಯವಾಚಕಪದಘಟಿತವಾಗಿರುವ ದ್ರವ್ಯವಿಲ್ಲವೆಂಬ ವಾಕ್ಯವು ಮತ್ತು ಗೋವು ಇಲ್ಲವೆಂಬ ವಾಕ್ಯವು ಸುವರ್ಣ ಮತ್ತು ಹಲವಹನ ಯೋಗ್ಯ ಗೋವು ಎಂಬ ವಿಶೇಷಪದಾರ್ಥದಲ್ಲಿ ತಾತ್ಪರ್ಯವುಳ್ಳದ್ದಾಗಿ ಪ್ರಯೋಗಿಸಲ್ಪಡುವುದೋ, ಅಲ್ಲಿ ವಿಶೇಷಧರ್ಮಕ್ಕೆ (ಸುವರ್ಣತ್ವ ಹಲವಹನಯೋಗ್ಯಗೋತ್ವಗಳಿಗೆ) ಸಾಮಾನ್ಯವಾಚಕಪದ (ದ್ರವ್ಯಪದ ಗೋಪದ) ಗಳಿಂದ ನಿರೂಪಿತವಾದ ವಾಚ್ಯತ್ವ (ಶಕ್ತಿಯು) ವಿಲ್ಲದಿರುವದರಿಂದ ವಿಶೇಷಧರ್ಮಾವಚ್ಛಿನ್ನ (ಸುವರ್ಣತ್ವಾವಚ್ಛಿನ್ನಸುವರ್ಣ-ಹಲವಹನಯೋಗ್ಯತ್ವಾವಚ್ಛಿನ್ನಗೋವು) ಇವುಗಳಲ್ಲಿ ಲಕ್ಷಣಾವೃತ್ತಿಯೇ ಇರುತ್ತದೆ. ಯಾಕಂದರೆ—ಶಕ್ತಿಯಿಂದ (ಸಾಮಾನ್ಯವಾಚಕಪದದ ಶಕ್ತಿಯಿಂದ) ಸುವರ್ಣತ್ವಪ್ರಕಾರಕಬೋಧದ ಹಾಗೂ ಹಲವಹನ ಯೋಗ್ಯತ್ವಪ್ರಕಾರಕಬೋಧವ ನಿರ್ವಾಹವಾಗುವದಿಲ್ಲವಷ್ಟೆ! ಎಂದು ಈ ವಾಕ್ಯಗಳ ಅಭಿಪ್ರಾಯವು. ಎಂದರೆ—ಎಲ್ಲಿ ದ್ರವ್ಯಪದವು ಸುವರ್ಣದ್ರವ್ಯತ್ವಪ್ರಕಾರಕತಾತ್ಪರ್ಯದಿಂದ ಉಚ್ಚರಿಸಲ್ಪಡುವುದೋ, ಹಾಗೂ ಗೋಪದವು ಎಲ್ಲಿ ಹಲವಹನಯೋಗ್ಯತಾತಾತ್ಪರ್ಯದಿಂದ ಉಚ್ಚರಿಸಲ್ಪಡುವುದೋ ಅಲ್ಲಿ ಸಾಮಾನ್ಯವನ್ನೇ (ದ್ರವ್ಯ ಮತ್ತು ಗೋವುಗಳನ್ನೇ) ಗ್ರಹಿಸಿದರೆ ವಕ್ತೃವಿನ ತಾತ್ಪರ್ಯಕ್ಕೆ ಅನುಪಪತ್ತಿಬರುವುದಾದಪ್ರಯುಕ್ತ ವಿಶೇಷಾರ್ಥದಲ್ಲಿ ಲಕ್ಷಣಾವೃತ್ತಿಯನ್ನು ಸ್ವೀಕರಿಸಬೇಕು. ಎಂದು ಗದಾಧರಭಟ್ಟಾಚಾರ್ಯರು ಕಂಠೋಕ್ತವಾಗಿ ಹೇಳಿದ್ದರೂ, ಅದನ್ನು ಮರೆಮಾಚಿ ತನ್ನ ಮುಂಡನೋದ್ದೇಶವನ್ನು ಸಾಧಿಸುವುದಕ್ಕೋಸ್ಕರ ಪ್ರಾಚೀನಗ್ರಂಥವಾಕ್ಯಗಳನ್ನೇ ಕೆಡಿಸಿರುವುದನ್ನು ನೋಡಿದರೆ ಆಶ್ಚರ್ಯವೆನಿಸುತ್ತದೆ. ಗದಾಧರಭಟ್ಟಾಚಾರ್ಯರು ಯತ್ರ.... ವಿಶೇಷಪರಂ.... ತತ್ರ.... ಇತ್ಯಾದಿ ಪದಗಳನ್ನಿಟ್ಟಿರುವುದರಿಂದ ತಾತ್ಪರ್ಯಾನುಪಪತ್ತಿಯಿದ್ದಲ್ಲಿ ಲಕ್ಷಣಾವೃತ್ತಿಯಿರುವುದನ್ನು ಸ್ಪಷ್ಟವಾಗಿ ಹೇಳಿರುವರು. ಇದನ್ನು ಈತನು ಚನ್ನಾಗಿ ನೋಡಿಕೊಳ್ಳಬೇಕು.

ವಾಚಕರೇ, ಇನ್ನು ಶಿಖಾಶಬ್ದಕ್ಕೆ ವಿಧ್ಯುಕ್ತಕೇಶಸಮೂಹ ದಲ್ಲಿಯೇ ಶಕ್ತಿಯಲ್ಲದೆ ಬೇರೆಯಿಲ್ಲವೆಂದು ನಿರೂಪಿಸುತ್ತೇವೆ. "ಶಿಖಾಯಾಂ" ಇತ್ಯಾದಿ ವಿಧಿವಾಕ್ಯದಲ್ಲಿರುವ ಶಿಖಾ ಶಬ್ದಕ್ಕೆ ವಿಧಿವಿಹಿತ ಮಸ್ತಕಾಗ್ರಸ್ಥಿತಕೇಶಸಮೂಹವು ವಾಚ್ಯಾರ್ಥವಾಗುವುದೆಂಬುವಲ್ಲಿ ಪೂರ್ವಪೂರ್ವಪ್ರಯೋಗಗಳೇ ಕಾರಣಗಳಾಗಿವೆ. "ಸಶಿಖಂ ವಪನಂ ಕೃತ್ವಾ ಬಹಿಸ್ಸೂತ್ರಂ ತ್ಯಜೇದ್ಬುಧಃ" ಎಂಬ ಬ್ರಹ್ಮೋಪನಿಷದ್ವಾಕ್ಯ ಗತವಾದ ಶಿಖಾಶಬ್ದವು ವಿಧ್ಯುಕ್ತ ಕೇಶಸಮೂಹದಲ್ಲಿ ಪ್ರಯೋಗಿಸಲ್ಪಟ್ಟಿದೆ. "ಸಶಿಖಾನ್ ಕೇಶಾನ್ನಿಕೃತ್ಯ ವಿಸೃಜ್ಯಯಜ್ಞೋಪವೀತಂ" ಇತ್ಯಾದಿ ಕಾಠಕಶ್ರುತ್ಯಾದಿಗಳಲ್ಲಿರುವ ಶಿಖಾ ಶಬ್ದವು ವಿಧ್ಯುಕ್ತಕೇಶ ಸಮೂಹದಲ್ಲಿ ಪ್ರಯೋಗಿಸಲ್ಪಟ್ಟಿದೆ. "ಶಕ್ತೇಃ ಪೂರ್ವಪೂರ್ವ ಪ್ರಯೋಗನಿಯತತ್ವಾತ್" ಎಂದು ಶಬ್ದಶಕ್ತಿಪ್ರಕಾಶಿಕೆಯಲ್ಲಿ ಹೇಳಲ್ಪಟ್ಟಿರುವುದರಿಂದಲೂ, ಶಿಖಾಶಬ್ದಕ್ಕೆ ವಿಧಿವಿಹಿತಮಸ್ತಕಾಗ್ರವರ್ತಿಕೇಶ ಸಮೂಹವೆಂಬ ಅರ್ಥದಲ್ಲಿ ಶಕ್ತಿಯಿರುವದೆಂಬ ವಿಷಯದಲ್ಲಿ ನಿಗಮಾಗಮಸ್ಮೃತ್ಯಾದ್ಯನೇಕಪ್ರಾಚೀನಪ್ರಯೋಗಗಳಿರುವುದರಿಂದಲೂ ಶಿಖಾ ಶಬ್ದಕ್ಕೆ ವಿಧಿವಿಹಿತಮಸ್ತಕಾಗ್ರವರ್ತಿಕೇಶಸಮೂಹವೆಂಬ ಅರ್ಥವು ವಾಚ್ಯಾರ್ಥವಲ್ಲದೆ ಲಕ್ಷ್ಯಾರ್ಥವಲ್ಲವೆನ್ನುವುದು ಸಿದ್ಧಾಂತವು. ಯಾವ ಶಬ್ದಕ್ಕೆ ಯಾವ ಅರ್ಥದಲ್ಲಿ ಪೂರ್ವಪೂರ್ವಪ್ರಯೋಗಗಳಿರುವವೋ, ಆ ಶಬ್ದಕ್ಕೆ ಆ ಅರ್ಥದಲ್ಲಿ ಶಕ್ತಿಯನ್ನು ಸ್ವೀಕರಿಸಬೇಕಾದುದು ನ್ಯಾಯವು. ಶಿಖಾಶಬ್ದಕ್ಕೆ ವಿಧ್ಯುಕ್ತಶಿಖೆಯಲ್ಲಿ ಪೂರ್ವಪೂರ್ವಪ್ರಯೋಗಗಳಿರುವುದರಿಂದ ವಿಧಿವಿಹಿತಮಸ್ತಕಾಗ್ರಸ್ಥಿತಕೇಶಸಮೂಹವೆಂಬ ಶಿಖೆಯಲ್ಲಿ ಶಕ್ತಿಯನ್ನು ಸ್ವೀಕರಿಸಬೇಕು. ಯಾಕಂದರೆ—ಪೂರ್ವಪೂರ್ವಪ್ರಯುಕ್ತತ್ವಕ್ಕೂ ಶಕ್ತಿಗೂ ವ್ಯಾಪ್ಯವ್ಯಾಪಕಭಾವವಿದೆ.

"ಗಂಗಾದಯಸ್ತು ತೀರಾದಾವಸಂಕೇತಿತಾಃ ತತ್ಸಂಬಂಧಿ ನೀರಾದಿಶಕ್ತತ್ವೇನ ಗೃಹೀತಾ ಏವ ತೀರಾದ್ಯನ್ವಯಂ ಬೋಧ

ಯಂತೀತಿ ತತ್ರ ತೇ ಲಕ್ಷಕಾ ಏವ ಶಕ್ತತ್ವೇ ಪೂರ್ವಪೂರ್ವ ಪ್ರಯುಕ್ತತ್ವಾಪತ್ತೇಃ ತಸ್ಯ ತದ್ವ್ಯಾಪ್ಯತ್ವಾತ್ " ಎಂದು ಶಬ್ದಶಕ್ತಿ ಪ್ರಕಾಶಿಕೆಯಲ್ಲಿ ಹೇಳಲ್ಪಟ್ಟಿರುವುದು. ಆದುದರಿಂದ " ಶಿಖಾಯಾಂ " ಇತ್ಯಾದಿ ವಾಕ್ಯಘಟಕವಾದ ಶಿಖಾ ಶಬ್ದಕ್ಕೆ ವಿಧಿವಿಹಿತಮಸ್ತಕಾಗ್ರವರ್ತಿ ಕೇಶಗಳ ಸಮೂಹವೆಂದು ವಾಚ್ಯಾರ್ಥವೇ ಸಂಭವಿಸುತ್ತಿರಲು, ಶಿಖಾ ಸಂಬಂಧಿಯಾದ ಸ್ಥಾನವೆಂದು ಲಕ್ಷ್ಯಾರ್ಥವನ್ನು ಮಾಡುವುದು ಮಂದ ತನವಲ್ಲವೇ ? ಅಸ್ತು ! ಇದಲ್ಲದೆ " ಶಿಖಾಯಾಮೇಕಮೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ " ಎಂಬ ಸಿದ್ಧಾಂತಶಿಖಾಮಣಿ ವಚನ ದಂತೆ ಶಿಖೆಯಲ್ಲಿ ಏಕಮುಖದ ರುದ್ರಾಕ್ಷಧಾರಣವನ್ನು ವಿಧಿಸುವ ವಾಕ್ಯ ಗಳು ವಿಧಾಯಕವಾಕ್ಯಗಳಾಗಿರುವುದರಿಂದ ಈ ವಾಕ್ಯಘಟಕಪದಗಳಿಗೆ ಲಕ್ಷ್ಯಾರ್ಥವನ್ನು ಮಾಡುವುದು ಪೂರ್ವಮೀಮಾಂಸಾಶಾಸ್ತ್ರಕ್ಕೆ ಅತಿ ವಿರೋಧವು. " ನ ವಿಧೌ ಪರಃ ಶಬ್ದಾರ್ಥಃ " ಎಂದು ಶಬರಸ್ವಾಮಿ ಯವರು ಹೇಳಿದ್ದಾರೆ. ಈ ವಾಕ್ಯವನ್ನು ಭಾಮತೀಕಾರರು " ನಚಾನನ್ಯ ಪರಂ ವಾಕ್ಯಂ ಸ್ವಾರ್ಥ ಉಪಚರಿತಾರ್ಥಂ, ಉಕ್ತಂ ಹಿ 'ನ ವಿಧೌ ಪರಃ ಶಬ್ದಾರ್ಥಃ' ಇತಿ ॥ ಹೀಗೆಂದು ಪ್ರಮಾಣವನ್ನಾಗಿ ಉದಾ ಹರಿಸಿರುವರು. " ವಿಧೌ ವಿಧಾಯಕೇ ವಾಕ್ಯೇ ಪರೋ ಲಕ್ಷ್ಯಃ ಶಬ್ದಾರ್ಥೋ ನಭವತಿ " ಎಂದು ಕಲ್ಪತರುಕಾರರು ಆದರ ಅರ್ಥ ವನ್ನು ಹೇಳಿದ್ದಾರೆ. ಅಂದರೆ ವಿಧಿವಾಕ್ಯದಲ್ಲಿ ಮುಖ್ಯಾರ್ಥವೇ (ಶಕ್ಯಾ ರ್ಥವೇ) ಗ್ರಾಹ್ಯವಾಗಿರುವುದಲ್ಲದೆ, ಲಕ್ಷ್ಯಾರ್ಥವು ಗ್ರಾಹ್ಯವಾಗುವು ದಿಲ್ಲವೆಂಬುದು ಮೀಮಾಂಸಾಭಾಷ್ಯಕಾರರಾದ ಶಬರಸ್ವಾಮಿಯವರ ಅಭಿಪ್ರಾಯವು. ಹೀಗಿದ್ದು ಈತನು " ಶಿಖಾಯಾಮೇಕಮೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ " ಎಂಬ ವಿಧಿವಾಕ್ಯದಲ್ಲಿರುವ ಶಿಖಾ ಶಬ್ದಕ್ಕೆ ಶಿಖಾಸಂಬಂಧಿಸ್ಥಾನವೆಂದು ಲಕ್ಷ್ಯಾರ್ಥವನ್ನು ಮಾಡುವುದು ಅತ್ಯಂತ ಮಂದತನವಾಗಿದೆ.

ಈತನು ೫೭ ನೆಯ ಪುಟದಲ್ಲಿ—

" ಶಿಖಾಯಾಮೇಕಮೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ | ದ್ವಿತ್ರಿದ್ವಾದಶವಕ್ತ್ರಾಣಿ ಶಿರಸಿ ತ್ರೀಣಿ ಧಾರಯೇತ್ | ಷಟ್ತ್ರಿಂಶದ್ಧಾರಯೇನ್ಮೂರ್ಧ್ನಿ ನಿತ್ಯಮೇಕಾದಶಾನನಾನ್... || " ಇತ್ಯಾದಿ ಪೂರ್ವೋಕ್ತವಾಕ್ಯಗಳಿಂದ ಒಂದು ಮಸ್ತಕದಲ್ಲಿಯೇ ಶಿಖಾ-ಶಿರಸ್ಸು-ಮೂರ್ಧಗಳೆಂದು ಮೂರು ಸ್ಥಾನಗಳು ಉಕ್ತಗಳಾಗಿರುವದರಿಂದ ಶಿರಸ್ಸು ಮೂರ್ಧಗಳಂತೆ ಶಿಖೆಯಾದರೂ ಮಸ್ತಕದ ಒಂದು ಸ್ಥಾನವೆಂದು ನಿಸ್ಸಂಶಯವಾಗಿದೆ. ಅದರಿಂದ ಪ್ರಕೃತಶಿಖಾಶಬ್ದಕ್ಕೆ ' ಶಿಖಾ ಶಿಫಾಯಾಂ ಚೂಡಾಯಾಂ ಜ್ವಾಲಾಯಾಮುಗ್ರಮಾತ್ರಕೇ ' ಎಂಬ ಕೋಶ ವಚನಾನುಸಾರವಾಗಿ ಅಗ್ರ (ಮಸ್ತಕಾಗ್ರ) ವೆಂದು ವಾಚ್ಯಾರ್ಥವನ್ನು ಮಾಡಲು ಅಭ್ಯಂತರವಿಲ್ಲ. ವಿಧಿವಿಹಿತಮಸ್ತಕಾಗ್ರವರ್ತಿ ಕೇಶಸಮೂಹವೆಂದು ಲಕ್ಷ್ಯಾರ್ಥವನ್ನಾಗಲಿ ಅಥವಾ ಸಾಮಾನ್ಯವಾಗಿ ಕೇಶಸಮೂಹವೆಂಬ ವಾಚ್ಯಾರ್ಥವನ್ನಾಗಲಿ ಮಾಡಲಿಕ್ಕೆ ಸರ್ವಥಾ ಅವಕಾಶವಿಲ್ಲ. ಯಾಕೆಂದರೆ ಪ್ರಕೃತದಲ್ಲಿ ಈ ಅರ್ಥವು ಅನುಪಯುಕ್ತವಾಗಿದೆ. ಆದುದರಿಂದ " ಶಿಖಾಯಾಮೇಕಮೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ " ಎಂಬ ವಾಕ್ಯದಿಂದ ವೀರಶೈವರಿಗೆ ಕರ್ಮಾಂಗಭೂತವಾದ ಶಿಖೆಯು (ಜುಟ್ಟು) ನ್ನು ಹೇಳುವದು ಕೇವಲ ಭ್ರಾಂತಿಯು "

ಎಂದು ಬರೆದಿರುತ್ತಾನೆ. ಈತನ ಅಭಿಪ್ರಾಯವನ್ನು ವಿಮರ್ಶಿಸೋಣ!

ಮಸ್ತಕಾಗ್ರದಲ್ಲಿ ಲೋಕಪ್ರಸಿದ್ಧವಾಗಿಯೂ ಶಾಸ್ತ್ರಪ್ರಸಿದ್ಧವಾಗಿಯೂ ಇರುವ ಕೇಶಮಯಶಿಖೆಯು ಇಲ್ಲದಿದ್ದರೆ ಈತನ ಅರ್ಥಕ್ಕೆ ಸಮ್ಮತಿಸಬಹುದಾಗಿತ್ತು. ಪಾಪ! ಸೃಷ್ಟಿಕರ್ತನು ಈತನ ಇಷ್ಟದಂತೆ ವೀರಶೈವರ ಮಸ್ತಕದಲ್ಲಿ ಕೂದಲುಗಳನ್ನೇ ಹುಟ್ಟಿಸದೆ ಎಲ್ಲರನ್ನೂ ತಿಗುಳುದಲೆಯವರನ್ನು ಮಾಡಿದ್ದರೆ ಆಗ ಈತನ ಇಷ್ಟವು ನೆರವೇರುತ್ತಿತ್ತು. ಹಾಗೆ ಮಾಡದಿರುವುದು ಆ ಸೃಷ್ಟಿಕರ್ತನ ತಪ್ಪೆಂದೇ ಹೇಳಬೇಕಾಗಿದೆ. " ಶಿಖಾಯಾಮೇಕಮೇಕಾಸ್ಯಂ " ಇತ್ಯಾದಿರುದ್ರಾಕ್ಷಧಾರಣ ಪ್ರಕರಣದಲ್ಲಿ ಹೇಳಿದ ಶಿಖಾಶಬ್ದಕ್ಕೆ ಈ ಮುಂಡಿತಮುಂಡನು ನಡುನೆತ್ತಿಯೆಂದು ಅರ್ಥಮಾಡುತ್ತಾನೆ. ಈ ಪ್ರಕರಣದಲ್ಲಿ ಶರೀರದ ಮೇಲ್ಭಾಗದಿಂದ ಕೆಳಭಾಗದಲ್ಲಿರುವ ಸ್ಥಾನಗಳಲ್ಲಿ ರುದ್ರಾಕ್ಷಧಾರಣವು

ವಿಧಿಸಲ್ಪಡುತ್ತದೆ. ಮಸ್ತಕದ ಒಂದು ಭಾಗವಾದ ಮಸ್ತಕದ ಅಗ್ರಕ್ಕೂ ಅಗ್ರವಾಗಿರುವ ಶಿಖೆಯು (ವಿಧಿವಿಹಿತಕೇಶಸಮೂಹವು) ಇಲ್ಲದ ಪಕ್ಷದಲ್ಲಿ ಶಿಖಾಶಬ್ದಕ್ಕೆ ಮಸ್ತಕಾಗ್ರವೆಂದು ಅರ್ಥಮಾಡಿ ಅದರಲ್ಲಿ ಏಕಮುಖದ ರುದ್ರಾಕ್ಷಧಾರಣವನ್ನು ಹೇಳಬಹುದಾಗಿತ್ತು. ಎಲ್ಲಕ್ಕೂ ಅಗ್ರವೆನಿಸುವ ಕೇಶಮಯವಿಧಿವಿಹಿತಶಿಖೆಯು ಇದ್ದು ಅದನ್ನು ಬಿಟ್ಟು ಅದರ ಅಧಃಪ್ರದೇಶದಲ್ಲಿರುವ ಮಸ್ತಕದ ಒಂದು ಭಾಗವಾದ ಮಸ್ತಕಾಗ್ರವೆಂದು ಶಿಖಾಶಬ್ದಕ್ಕೆ ಅರ್ಥಮಾಡಿ ಅದರಲ್ಲಿ ಏಕಮುಖದರುದ್ರಾಕ್ಷಧಾರಣವನ್ನು ಹೇಳುವುದು ಪ್ರಕರಣವಿರೋಧವೂ ಲೋಕವಿರೋಧವೂ ಆಗುವುದಲ್ಲದೆ, ರೇಣುಕಭಗವತ್ಪಾದರ ತಾತ್ಪರ್ಯಕ್ಕೆ ವಿರುದ್ಧವೂ ಆಗುತ್ತದೆ. ರೇಣುಕಭಗವತ್ಪಾದರು ವೇದಾಗಮಸಮ್ಮತವಾಗಿಯೇ ಶಿಖೆಯಲ್ಲಿ ಒಂದು ರುದ್ರಾಕ್ಷಧಾರಣವನ್ನು ವಿಧಿಸಿರುವರಲ್ಲದೆ ವೇದಾಗಮುಗಳಿಗೆ ವಿರುದ್ಧವಾಗಿ ವಿಧಿಸಿರುವುದಿಲ್ಲ. ರುದ್ರಾಕ್ಷಜಾಬಾಲಾದ್ಯುಪನಿಷತ್ತುಗಳಲ್ಲಿ "ಶಿಖಾಯಾಮೇಕರುದ್ರಾಕ್ಷಂ" ಇತ್ಯಾದಿ ವಾಕ್ಯಗಳಿರುವುದರಿಂದ ಈ ವಾಕ್ಯಗಳಲ್ಲಿರುವ ಶಿಖಾ ಶಬ್ದಕ್ಕೆ ವಿಧಿವಿಹಿತ ಶಿಖೆಯೆಂದೇ ಅರ್ಥಮಾಡಬೇಕಾಗುತ್ತದೆ. ಯಾಕಂದರೆ—"ಸಶಿಖಂ ವಪನಂ" "ಸಶಿಖಾನ್ ಕೇಶಾನ್ ನಿಕೃತ್ಯ" "ಸ್ವಪುತ್ರಕಲತ್ರಬಂಧ್ವಾದೀನ್ ಶಿಖಾಂ ಸನ್ಯಸ್ಯ" ಇತ್ಯಾದಿಬ್ರಹ್ಮೋಪನಿಷದಾದಿಮಂತ್ರಗಳು ಶಿಖಾಶಬ್ದಕ್ಕೆ ವಿಧಿವಿಹಿತಮಸ್ತಕಾಗ್ರದಲ್ಲಿರುವ ಕೇಶಗಳ ಸಮೂಹದಲ್ಲಿ ಪಠಿತಗಳಾಗಿರುವುದರಿಂದ ವಿಧಿವಿಹಿತಶಿಖೆಯೆಂದೇ ಅರ್ಥಮಾಡಬೇಕು. ಇಲ್ಲವಾದರೆ ಉಪನಿಷದ್ವಾಕ್ಯಗಳಿಗೆ ಪರಸ್ಪರವಿರೋಧವು ಬರುವುದು. "ಸಶಿಖಂ ವಪನಂ" ಇತ್ಯಾದಿ ವಾಕ್ಯಗಳು ಸನ್ಯಾಸಪ್ರಕರಣಪಠಿತಗಳಾಗಿರುವುದರಿಂದ ಶಿಖಾಶಬ್ದಕ್ಕೆ ಈತನಂತೆ ಮಸ್ತಕಾಗ್ರ (ತಲೆಯ ತುದಿ) ವೆಂದು ಅರ್ಥಮಾಡಿದರೆ ಸನ್ಯಾಸಗ್ರಹಣಕಾಲದಲ್ಲಿ ತಲೆಯ ತುದಿಯನ್ನು ಆಯುಧದಿಂದ ಕೆತ್ತುವ ಪ್ರಸಂಗವು ಬರುವುದು. ಇದಕ್ಕೆ ಈತನು ಒಪ್ಪ

ಬಹುದೆ? "ಶಿಖಾ ಶಿಘಾಯಾಂ ಚೂಡಾಯಾಂ ಜ್ವಾಲಾಯಾಮಗ್ರ ಮಾತ್ರಕೇ" ಈ ಕೋಶವಚನದಿಂದ ಶಿಖಾಶಬ್ದಕ್ಕೆ ಮಸ್ತಕಾಗ್ರವೆಂದು ವಾಚ್ಯಾರ್ಥವಾಗುವುದಿಲ್ಲ. ಸಾಮಾನ್ಯತಃ ಅಗ್ರವೆಂದು ವಾಚ್ಯಾರ್ಥ ವಾದರೂ ಮಸ್ತಕಸಂಬಂಧಿ ಅಗ್ರವೆಂದು ಕಲ್ಪಿಸಿರುವ ಅರ್ಥವು ಈತನ ಮಂದತನವನ್ನು ಸೂಚಿಸುತ್ತದೆ. "ಅಗ್ರಮಾತ್ರಕೇ" ಎಂಬ ಪದ ದಿಂದ ಅಗ್ರತ್ವಾವಚ್ಛಿನ್ನಾಗ್ರತ್ವೇತರಧರ್ಮಾನವಚ್ಛಿನ್ನಾರ್ಥದಲ್ಲಿ ಶಕ್ತಿ ಯು ಸ್ವೀಕರಿಸಲ್ಪಟ್ಟಿದೆಯಲ್ಲದೆ ಅಗ್ರತ್ವವಿಶಿಷ್ಟತತ್ತದ್ವ್ಯಕ್ತಿಗಳಲ್ಲಿ ಸ್ವೀಕ ರಿಸಲ್ಪಟ್ಟಿಲ್ಲವು. ಅಗ್ರತ್ವೇತರಮಸ್ತಕಸಂಬಂಧಿತ್ವಧರ್ಮಾನವಚ್ಛಿನ್ನಾ ಗ್ರತ್ವಾವಚ್ಛಿನ್ನಾರ್ಥದಲ್ಲಿಯೇ ಶಿಖಾ ಶಬ್ದದ ಶಕ್ತಿಯನ್ನು ಹೇಳುತ್ತೀ ವೆಂದರೆ, ಜಗತ್ತಿನಲ್ಲಿರುವ ಎಲ್ಲ ಅಗ್ರ (ವೃಕ್ಷಾಗ್ರ, ಶಾಖಾಗ್ರ, ನಾಸಾಗ್ರ, ಕರಾಗ್ರ, ಪಾದಾಗ್ರ) ಮೊದಲಾದ ಎಲ್ಲ ಅಗ್ರಗಳಲ್ಲಿಯೂ, ಏಕಮುಖದ ರುದ್ರಾಕ್ಷಧಾರಣಪ್ರಸಕ್ತಿಯು ಬರುವುದು. ಒಂದು ಪಕ್ಷದಲ್ಲಿ "ಮಸ್ತಕಶಿಖಾಯಾಂ" ಎಂದಿದ್ದರೆ ಮಸ್ತಕಶಿಖಾ ಶಬ್ದಕ್ಕೆ ಮಸ್ತ ಕಾಗ್ರವೆಂದು ರುದ್ರಾಕ್ಷಧಾರಣಪ್ರಕರಣಕ್ಕೆ ಭಿನ್ನಪ್ರಕರಣದಲ್ಲಿ ಅರ್ಥ ಮಾಡಬಹುದು. ಹಾಗಿಲ್ಲದಿರುವುದರಿಂದ ಕೇವಲ ಶಿಖಾಶಬ್ದಕ್ಕೆ ಪ್ರಸಿದ್ಧ ವಾದ ಕೇಶಮಯವಿಧಿವಿಹಿತಶಿಖೆಯೆಂದೇ ಅರ್ಥಮಾಡಬೇಕು. ಇನ್ನು ಈತನು ಮಸ್ತಕಾಗ್ರವೇ ಶಿಖಾಶಬ್ದಕ್ಕೆ ವಾಚ್ಯಾರ್ಥವಾಗುತ್ತದೆಂದು ದುರಾಗ್ರಹಪಟ್ಟಲ್ಲಿ, ಮಸ್ತಕಾಗ್ರಕ್ಕೆ ಅಗ್ರವೆನಿಸುವ ವಿಧ್ಯುಕ್ತಕೇಶ ಸಮೂಹವೂ ಕೂಡ ವಾಚ್ಯಾರ್ಥವೇ ಆಗುವುದೆಂತಲೂ ಒಪ್ಪಲೇಬೇಕು. ಮಸ್ತಕಾಗ್ರದ ಅಗ್ರವು (ವಿಧ್ಯುಕ್ತಕೇಶಸಮೂಹವು) ವಾಚ್ಯಾರ್ಥವಾಗು ವದಿಲ್ಲವೆಂದರೆ, ಮಸ್ತಕದ ಅಗ್ರವೂ ವಾಚ್ಯಾರ್ಥವಾಗುವದಿಲ್ಲವೆಂದು ಹೇಳಬೇಕಾಗುವುದು. ಆದುದರಿಂದ "ಶಿಖಾಯಾಮೇಕಮೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ" ಎಂಬ ವಿಧಿವಾಕ್ಯದಲ್ಲಿರುವ ಶಿಖಾ ಶಬ್ದಕ್ಕೆ "ಶಿಖಾ ಚೂಡಾ ಕೇಶಪಾಶೀ ವ್ರತಿನಸ್ತು ಸಟಾಜಟಾ" ಎಂಬ

ಕೋಶವಚನದಿಂದ ವಿಧಿವಿಹಿತಕೇಶಮಯಶಿಖೆಯೆಂದು ವಾಚ್ಯಾರ್ಥ ವಾಗುತ್ತದೆ. ಹಾಗೂ ಶಿಖಾಶಬ್ದಕ್ಕೆ ಈ ಅರ್ಥದಲ್ಲಿಯೇ ಉಪನಿಷದಾದಿ ಪೂರ್ವಪೂರ್ವಪ್ರಯೋಗಗಳಿರುವುದರಿಂದಲೂ, ಈ ಅರ್ಥದಲ್ಲಿಯೇ ರೇಣು ಕಭಗವತ್ಪಾದರ ತಾತ್ಪರ್ಯವಿರುವುದರಿಂದಲೂ ಏಕಮುಖದ ರುದ್ರಾಕ್ಷ ಧಾರಣಯೋಗ್ಯವಾದ ವಿಧ್ಯುಕ್ತಶಿಖೆಯು ಶಿಖಾಶಬ್ದಕ್ಕೆ ವಾಚ್ಯಾರ್ಥ ವಾಗುವುದಿಲ್ಲವೆನ್ನುವುದು ಮಂದರ ಮಾತಾಗಿದೆ. ರುದ್ರಾಕ್ಷಧಾರಣಪ್ರಕ ರಣದಲ್ಲಿ ಹೇಳಿದ ಶಿಖಾಶಬ್ದಕ್ಕೆ ವಿಧ್ಯುಕ್ತಕೇಶಮಯಶಿಖೆಯೆಂಬ ಅರ್ಥವು ಬಹುಶಾಸ್ತ್ರಸಮ್ಮತವಾಗಿರುವುದರಿಂದಲೂ, ಲೋಕಸಮ್ಮತ ವಾಗಿರುವುದರಿಂದಲೂ ಈತನು ನಿರಾಧಾರವಾಗಿ ಮಸ್ತಕದ ಒಂದು ಭಾಗವಾದ ಮಸ್ತಕಾಗ್ರವೆಂದು ಬರೆದಿರುವುದು ತಿರಸ್ಕರಣೀಯವೂ ಹಾಸ್ಯಾಸ್ಪದವೂ ಆಗಿದೆ. ಸಾಮಾನ್ಯಧರ್ಮಾವಚ್ಛಿನ್ನವಾಚಕಪದಗಳಿಗೆ ವಿಶೇಷಧರ್ಮಾವಚ್ಛಿನ್ನಾರ್ಥದಲ್ಲಿ ಲಕ್ಷಣಾವೃತ್ತಿಯನ್ನಂಗೀಕರಿಸಿದ ಈತನು ಪುನಃ ಸಾಮಾನ್ಯಧರ್ಮಾವಚ್ಛಿನ್ನವಾಚಕವಾದ ಶಿಖಾ ಶಬ್ದಕ್ಕೆ ಮಸ್ತಕಾಗ್ರವೆಂಬ ವಿಶೇಷಧರ್ಮಾವಚ್ಛಿನ್ನಾರ್ಥದಲ್ಲಿ ಶಕ್ತಿ ಯನ್ನು ಅಂಗೀಕರಿಸಿ ಗದಾಧರಭಟ್ಟಾಚಾರ್ಯರ ವಾಕ್ಯಗಳನ್ನು ತನ್ನ ಮನಸ್ಸಿಗೆ ಬಂದಂತೆ ತಿದ್ದಿಕೊಂಡು ಜಿಗಿದಾಡಿರುವುದು ಹಾಸ್ಯಾಸ್ಪದ ವಲ್ಲವೇ ? ಶಿಖಾಶಬ್ದಕ್ಕೆ ವಿಧಿವಿಹಿತಕೇಶಮಯಶಿಖೆಯು ವಾಚ್ಯಾರ್ಥ ವಾಗುವುದೆಂದು ಹೇಳಿದ ಪಂಡಿತರಿಗೆ ಪ್ರಮಾದಭ್ರಾಂತಿಯೆಂದು ಹೇಳುವ ಈತನು, ಸಾಮಾನ್ಯಧರ್ಮಾವಚ್ಛಿನ್ನ (ಅಗ್ರತ್ವಾವಚ್ಛಿನ್ನ ಅಗ್ರತ್ವೇತರ ಧರ್ಮಾನವಚ್ಛಿನ್ನ) ದಲ್ಲಿ ,, ಶಿಖಾ ಶಿಫಾಕೇಕಿಮೌಲ್ಯೋರ್ಜ್ವಾಲಾ ಯಾಮಗ್ರಮಾತ್ರಕೇ " ಎಂಬ ಕೋಶವಚನದಂತೆ ಶಕ್ತಿಯುಳ್ಳ ಶಿಖಾ ಶಬ್ದಕ್ಕೆಮಸ್ತಕಾಗ್ರವೆಂಬ ವಿಶೇಷಧರ್ಮಾವಚ್ಛಿನ್ನದಲ್ಲಿ ಶಕ್ತಿಯನ್ನು ಹೇಳುವುದು ಪ್ರಮಾದವಲ್ಲವೋ ? ಅಥವಾ ಸ್ವೋಕ್ತಿವಿರೋಧವಲ್ಲವೋ? ಹೀಗೆ ಪೂರ್ವಾಪರವಿಚಾರವಿಲ್ಲದೆ ಎಚ್ಚರದಪ್ಪಿಬರೆಯುವ ಈತನು ಭ್ರಾಂ

ತನೋ, ಶಾಸ್ತ್ರಮರ್ಯಾದೆಯನ್ನನುಸರಿಸಿ ಬರೆಯುವವರು ಭ್ರಾಂತರೋ, ಎನ್ನುವುದನ್ನು ವಾಚಕರೇ ಊಹಿಸಬೇಕು. ಆದುದರಿಂದ ಶೇಣುಕಭಗವತ್ಪಾದರ ತಾತ್ಪರ್ಯಕ್ಕೆ ವಿರುದ್ಧವಾಗಿ ಶಿಖಾಶಬ್ದಕ್ಕೆ ಎಲ್ಲರೂ ನಗುವಂತೆ ಬೋಳುದಲೆಯೆಂದು ಅರ್ಥವನ್ನು ಮಾಡಿ ಗುರುವಾಕ್ಯೋಲ್ಲಂಘನದೋಷಕ್ಕೆ ಗುರಿಯಾಗಬಾರದೆಂದು ಈತನಿಗೆ ಬಹು ಕಳಕಳಿಯಿಂದ ಬೋಧಿಸುತ್ತೇವೆ.

ಈತನು ೫೮ ನೆಯ ಪುಟದಲ್ಲಿ—

"ವೀರಶೈವರು ಶಿಖಾಸೂತ್ರಗಳನ್ನು ಧರಿಸಬೇಕೆಂಬ ವಿಷಯದಲ್ಲಿ—
ಶ್ರೀಮದ್ದಂಡಶಿಖೋಪವೀತವಿಲಸತ್ಕಂಥಾಜಿನಾಲಂಕೃತಃ
ಕಾಷಾಯಾಂಬರಕುಂಡಿಕಾಪ್ರಣವಪಾತ್ರಚ್ಛತ್ರಮೌಂಜೀಧರಃ |
ವೇದಾಂತೋಭಯವಾಕ್ಯಬೋಧಿತಲಸಚ್ಛ್ರೀಭಸ್ಮಘಂಟೀಯುತಃ
ಏಕೋರಾಮಯತೀಂದ್ರಶೇಖರಶಿವಾಚಾರ್ಯಃ ಸದಾ ಪಾತು ನಃ ||

ಈ ಪ್ರಕಾರವಾಗಿ ಶ್ರೀಪತಿಪಂಡಿತರು ಮಾಡಿರುವ ಏಕೋರಾಮಶಿವಾಚಾರ್ಯರ ಸ್ತೋತ್ರವು ಪ್ರಮಾಣವಾಗಿವೆ. ಇದರಿಂದ ಶ್ರೀಮದೇಕೋರಾಮಶಿವಾಚಾರ್ಯರಿಗೆ ಶಿಖಾಸೂತ್ರಗಳಿದ್ದವೆಂದು ವ್ಯಕ್ತವಾಗುತ್ತದೆ. ಹಾಗೂ 'ಅಥಾತೋಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಲ್ಲಿ 'ಹರಿಕೇಶಾಯೋಪವೀತಿನೇ ರುದ್ರಶಿಖೇತ್ಯಾದೌ ಭಸ್ಮರುದ್ರಾಕ್ಷಾದಿವಚ್ಛಿವಸ್ಯೈವಶಿಖಾಸೂತ್ರಶ್ರವಣಾಚ್ಛಿವಲಾಂಛನಮಿತಿಸಿದ್ಧಂ' ಎಂದು ಸ್ಪಷ್ಟರೀತಿಯಿಂದ ಶಿವನಿಗೆ ಶಿಖಾಸೂತ್ರಗಳಿದ್ದವೆಂದು ಸಿದ್ಧಗೊಳಿಸಿರುವರು. ಆದುದರಿಂದ ವೀರಶೈವರು ಜುಟ್ಟು ಜನಿವಾರಗಳನ್ನು ಧರಿಸುವದು ವಿಹಿತವೆಂದು ಕೆಲವರು ಅನ್ನುವರು. ಇದಕ್ಕೆ ಉತ್ತರವೇನೆಂದು ಪ್ರಶ್ನಮಾಡಿಕೊಂಡು ಶ್ರೀಪತಿಪಂಡಿತರು ಕರ್ಮಾಂಗಭೂಷಗಳಾದ ಶಿಖಾಸೂತ್ರಗಳು (ಜುಟ್ಟುಜನಿವಾರಗಳು) ಳ್ಳ ಆರಾಧ್ಯಮತದವರಿದ್ದು ಅವರು ತಮ್ಮ ಮತಸಿದ್ಧಾಂತದಂತೆ ಶ್ರೀಮದೇಕೋರಾಮಶಿವಾಚಾರ್ಯರ ಸ್ತೋತ್ರವನ್ನು ಮಾಡಿರುವರಲ್ಲದೆ ವೀರಶೈವಮತಸಿದ್ಧಾಂತವನ್ನನುಸರಿಸಿ ಮಾಡಿರುವದಿಲ್ಲ."
ಎಂದು ಉತ್ತರವನ್ನು ಬರೆದಿರುತ್ತಾನೆ.

ಈತನು ಮೇಲೆ ಬರೆದಿರುವ ಶ್ರೀಕರಭಾಷ್ಯ ಪಂಕ್ತಿಗಳಂತೆ ವೈದಿಕರಾದ ವೀರಶೈವಬ್ರಾಹ್ಮಣರು ಅನ್ನುವುದು ನಿಜ. ಶ್ರೀಪತಿಪಂಡಿತರು

ವೀರಶೈವಮತೀಯರಲ್ಲವಂತೆ! ಆರಾಧ್ಯಮತದವರಂತೆ! ಅಬ್ಬಬ್ಬಾ! ಹೀಗೆ ಬರೆದಿರುವ ಈ ಮುಂಡಿಯ ಪಾಂಡಿತ್ಯವನ್ನು ನೋಡಿ ಹೆದರಿಕೆ ಬರುತ್ತದೆ. ಏನಪ್ಪಾ! ಆರಾಧ್ಯಮತವೆನ್ನುವುದು ಬೇರುಂಟೇ? ಈ ವಿಷಯವನ್ನು ಯಾವ ಶಿವಾಗಮಗಳಲ್ಲಿ ನೋಡಿರುವಿ? ವೀರಶೈವಮತ ಸ್ಥಾಪಕರಾದ ರೇವಣಾರಾಧ್ಯ, ಮರುಲಾರಾಧ್ಯ, ಏಕೋರಾಮಾರಾಧ್ಯ, ಪಂಡಿತಾರಾಧ್ಯ, ವಿಶ್ವಾರಾಧ್ಯರಿಗೆ ಆರಾಧ್ಯರೆಂಬ ನಾಮವಿರುವುದಲ್ಲ! ಇದಕ್ಕೆ ಏನೆನ್ನುವಿ? ಹುಚ್ಚಪ್ಪಾ! ಆರಾಧ್ಯರೆನ್ನುವವರು ಬೇರೆಯಲ್ಲ; ವೀರಶೈವಮತದಲ್ಲಿರುವ ಗುರುವಂಶೀಯರಿಗೆ ಆರಾಧ್ಯರೆಂಬ ಪವಿತ್ರಾಭಿಧಾನವು ಸೃಷ್ಟ್ಯಾದಿಯಿಂದಲೂ ಲೋಕದಲ್ಲಿಯೂ ಶಾಸ್ತ್ರದಲ್ಲಿಯೂ ಪ್ರಸಿದ್ಧವದೆ.

ಆರಾಧ್ಯೋ ಗುರುರಾಚಾರ್ಯೋ ಗಣಾಧೀಶೋ ಶಿವದ್ವಿಜಃ ।
ಋತ್ವಿಕ್ಚ ದೇಶಿಕೋಽಧ್ಯಕ್ಷೋ ಗೌರವಃ ಸ್ಥಿರಜಂಗಮಃ ॥
ಆರ್ಯದೀಕ್ಷಿತಬ್ರಹ್ಮಜ್ಞಾ ಆರಾಧ್ಯಾಖ್ಯಾಸ್ತ್ರಯೋದಶ ॥

ಎಂದು ಆರಾಧ್ಯಕವಚವು ಆರಾಧ್ಯರಿಗೆ ಹದಿಮೂರುನಾಮಗಳುಂಟೆಂದು ಸಾರುತ್ತದೆ. ಈ ವಿಷಯವು ಶೂದ್ರಧರ್ಮಗಳನ್ನಾಚರಿಸುವವರಿಗೆ ಗೊತ್ತಾಗುವುದು ಕಠಿನವು. ಅಸ್ತು! ವೀರಶೈವಗುರುವಂಶೋತ್ಪನ್ನರಾದ ಶ್ರೀಪತಿಪಂಡಿತರು ವೀರಶೈವಬ್ರಾಹ್ಮಣರಿದ್ದು ಅವರು ತಮ್ಮ ವೀರಶೈವಸಿದ್ಧಾಂತದಂತೆ ಆ ಮತಸ್ಥಾಪಕರಾದ ಏಕೋರಾಮಭಗವತ್ಪಾದರ ಸ್ತೋತ್ರವನ್ನು ಮಾಡಿರುವರಲ್ಲದೆ, ಮುಂಡನವಾದಿಗಳಾದ ಶೂದ್ರರ ಮತವನ್ನು ಅನುಸರಿಸಿ ಮಾಡಿರುವುದಿಲ್ಲವೆಂದು ಭಾವಿಸಬೇಕು.

ಈತನು ೫೯ನೆಯ ಪುಟದಲ್ಲಿ—

"ಶ್ರೀಕರಭಾಷ್ಯವು ಅನೇಕ ವೀರಶೈವಮತತತ್ವಗಳಿಂದ ಗರ್ಭಿತವಾಗಿದ್ದರೂ ಅದು ವೀರಶೈವಮತಪರವಾದ ಭಾಷ್ಯವಾಗಿರದೆ ಕೇವಲ ಆರಾಧ್ಯಮತಪರವಾದ ಭಾಷ್ಯವಾಗಿದೆ."

ಎಂದು ಬರೆದಿದ್ದಾನೆ. ನೋಡಿದಿರಾ, ಈ ಘನಪಂಡಿತನ ಬರವಣಿಗೆಯ ಸರಣಿಯನ್ನು? ಶ್ರೀಕರಭಾಷ್ಯವು ಅನೇಕವೀರಶೈವಮತತತ್ತ್ವಗಳಿಂದ ಕೂಡಿದ್ದರೂ ಅದು ವೀರಶೈವಮತಭಾಷ್ಯವಲ್ಲವಂತೆ! ಬಹು ಬುದ್ಧಿ! ಬಹು ಬುದ್ಧಿ! ಇಂಥ ಬುದ್ಧಿಯು ನಮ್ಮ ಭರತಖಂಡದಲ್ಲಿ ಆವಿರ್ಭವಿಸಿದ್ದು ನಮ್ಮಗಳ ಪುಣ್ಯೋದಯವೆಂದೇ ಹೇಳಬೇಕಾಗುತ್ತದೆ. ಶ್ರೀಕರಭಾಷ್ಯದ ಆದಿಯಲ್ಲಿ—

ಶ್ರುತ್ಯೇಕದೇಶಪ್ರಾಮಾಣ್ಯಂ ದ್ವೈತಾದ್ವೈತಮತಾದಿಷು ।
ದ್ವೈತಾದ್ವೈತಮತೇ ಶುದ್ಧೇ ವಿಶೇಷಾದ್ವೈತಸಂಜ್ಞಕೇ ॥
ವೀರಶೈವೈಕಸಿದ್ಧಾಂತೇ ಸರ್ವಶ್ರುತಿಸಮನ್ವಯಃ ॥

ಎಂಬೀ ಶ್ಲೋಕದಿಂದ ಭಾಷ್ಯಕಾರರು ದ್ವೈತಾದ್ವೈತರೂಪವಾದ ವೀರಶೈವಮತದ ಪ್ರಾಶಸ್ತ್ಯವನ್ನು ಹೇಳಿರುವುದರಿಂದ ಶ್ರೀಕರಭಾಷ್ಯವು ಕೇವಲ ವೀರಶೈವಮತಪರವಾದ ಭಾಷ್ಯವಾಗಿರುವದಲ್ಲದೆ ಬೇರೆಯಿಲ್ಲವೆನ್ನುವುದು ಚಿಕ್ಕಮಕ್ಕಳಿಗೂ ಸಹ ತಿಳಿಯುವಂತಿದೆ. ಹೀಗಿದ್ದರೂ ಈತನು ತಿಳಿಯದಿರುವುದು ಈತನ ವಿಕಟಪಾಂಡಿತ್ಯವನ್ನು ವ್ಯಕ್ತಗೊಳಿಸುತ್ತದೆ.

ಈತನು ಇದೇ ಪುಟದಲ್ಲಿ—

"ವೀರಶೈವಮತವು ಆರಾಧ್ಯಮತಕ್ಕಿಂತಲೂ ಸ್ವತಂತ್ರ (ಭಿನ್ನ) ವಾಗಿರುವದೆಂಬುವದು ವೀರಶೈವೋತ್ಕರ್ಷಪ್ರದೀಪಿಕೆಯಲ್ಲಿ "ಕಥಂ ಆರಾಧ್ಯೇತರ ಕೇವಲವೀರಶೈವವಿಷಯತ್ವಂ" ಎಂಬ ವಾಕ್ಯದಿಂದ ಸ್ಪಷ್ಟಮಾಡಲ್ಪಟ್ಟದೆ. ಅಂದಮೇಲೆ ಆರಾಧ್ಯಮತಾವಲಂಬಿಗಳಾದ ಶ್ರೀಪತಿಪಂಡಿತರು ಕೇವಲ ತಮ್ಮಿಚ್ಛಾನುಸಾರವಾಗಿ ಮಾಡಿರುವ ಏಕೋರಾಮಶಿವಾಚಾರ್ಯರ ಸ್ತೋತ್ರವನ್ನು ವೀರಶೈವರಿಗೆ ಕರ್ಮಾಂಗಭೂತಗಳಾದ ಶಿಖಾಸೂತ್ರಗಳಿರಬೇಕೆಂಬ ವಿಷಯದಲ್ಲಿ ಪ್ರಮಾಣವನ್ನಾಗಿ ಗ್ರಹಿಸುವದು ಸರ್ವಥಾ ಯುಕ್ತವಲ್ಲ."

ಎಂದು ಬರೆದಿರುತ್ತಾನೆ. ಈತನು ತಾನು ತೆಗೆದುಕೊಂಡಿರುವ ಈ ವಾಕ್ಯಕ್ಕೆ ಸರಿಯಾದ ಅರ್ಥವನ್ನು ತಿಳಿದುಕೊಂಡಿಲ್ಲವೆಂದು ಸ್ಪಷ್ಟವಾಗು

ತ್ತದೆ. ತಿಳಿದುಕೊಂಡಿದ್ದರೆ ಹೀಗೆಂದಿಗೂ ಬರೆಯುತ್ತಿದ್ದಿಲ್ಲ. "ಕಥಮಾರಾಧ್ಯೇತರಕೇವಲವೀರಶೈವವಿಷಯತ್ವಂ?" ಎಂಬೀ ವಾಕ್ಯವು ಮತಪರವಾಗಿರದೆ ಕೇವಲ ಮತೀಯರ ಪರವಾಗಿದೆ. ವೀರಶೈವಮತವನ್ನು ಅನುಸರಿಸುವ ವೀರಶೈವರಲ್ಲಿ ಅನೇಕ ಒಳಪಂಗಡಗಳಿರುವಂತೆ ಋಷಿಗೋತ್ರಜರಾದ ಆರಾಧ್ಯರದೊಂದು ಪಂಗಡವಿದೆ. ಈ ಪಂಗಡದ ಮತವೇ ಬೇರೆಯೆಂದರೆ, ವೀರಶೈವಮತದಲ್ಲಿರುವ ಅನೇಕ ಪಂಗಡದವರಿಗೆ ಅವರವರ ಜಾತಿಗಳ ಹೆಸರುಗಳಿಗೆ ತಕ್ಕಂತೆ ಅನೇಕ ಮತಗಳನ್ನು ಹೇಳಬೇಕಾಗುವ ಪ್ರಸಂಗವು ಬರುವುದು. ಹೀಗೆ ಹೇಳಲಿಕ್ಕಾದೀತೇ? ಆದುದರಿಂದ ಆರಾಧ್ಯಮತವೆನ್ನುವುದು ವೀರಶೈವಮತಕ್ಕೆ ಬೇರೆಯಾಗಿಲ್ಲವೆಂದು ತಿಳಿಯಬೇಕು. ಆದುದರಿಂದಲೇ ಶ್ರೀಪತಿಪಂಡಿತರು ವೀರಶೈವಸಿದ್ಧಾಂತಕ್ಕನುಸಾರವಾಗಿ ಶಿವಲಾಂಛನಗಳೆನಿಸುವ ಶಿಖಾಸೂತ್ರಗಳನ್ನು ಏಕೋರಾಮಭಗವತ್ಪಾದರಿಗೆ ಹೇಳಿ ಮಂಗಲವನ್ನು ಮಾಡಿದ್ದಾರೆ. ಇದೇ ನಿಜವಾದ ವೀರಶೈವಸಿದ್ಧಾಂತವು. ಶ್ರೀಪತಿಪಂಡಿತರು ಬರೆದಿರುವ ಈ ಮಂಗಲಶ್ಲೋಕವು ಮುಂಡನವಾದಿಗಳ ಪಕ್ಷಕ್ಕೆ ವಿರುದ್ಧವಾಗಿರುವುದರಿಂದ ಅದಕ್ಕೆ ಅಪ್ರಮಾಣವೆನ್ನುವುದು ವಿವೇಕಿಗಳ ಕರ್ತವ್ಯವಲ್ಲ.

ಈತನು ಇದೇ ಪುಟದಲ್ಲಿ—

"ಯದ್ಯಪಿ ಶಿವಾಗಮಗಳಲ್ಲಿ ಶ್ರೀಮದೇಕೋರಾಮಶಿವಾಚಾರ್ಯರಿಗೆ ಕರ್ಮಾಂಗಭೂತಗಳಾದ ಶಿಖಾಸೂತ್ರಗಳಿರುವದಾಗಿ ಹೇಳಿದ್ದಪಕ್ಷದಲ್ಲಿ ಶ್ರೀಪತಿಪಂಡಿತರು ಮಾಡಿರುವ ಶ್ರೀಮದೇಕೋರಾಮಶಿವಾಚಾರ್ಯರ ಸ್ತೋತ್ರವನ್ನಾದರೂ ಪ್ರಮಾಣವನ್ನಾಗಿ ಗ್ರಹಿಸಬಹುದಾಗಿತ್ತು. ಆದರೆ ಶಿವಾಗಮಗಳಲ್ಲಿ ಶ್ರೀಮದೇಕೋರಾಮಶಿವಾಚಾರ್ಯರಿಗೆ ಶಿಖಾಸೂತ್ರಗಳಿದ್ದವೆಂದು ಹೇಳದೆ ಆಚಾರ್ಯರು ಕರ್ಮಾಂಗವಾದ ಶಿಖಾದಿಗಳನ್ನು ಧರಿಸಕೂಡದೆಂದು ವಿಶದವಾಗಿ ಹೇಳಿದೆ."

ಎಂದು ಬರೆದಿದ್ದಾನೆ. ಈ ವಿಷಯವನ್ನು ವಿಮರ್ಶಿಸೋಣ!

ಈತನು ಎಲ್ಲಾ ಮತಗ್ರಂಥಗಳನ್ನೂ ನೋಡಿದ ಘನಪಂಡಿತನಂತೆ ಆಚಾರ್ಯರಿಗೆ ಶಿಖಾದಿಗಳನ್ನು ಧರ್ಮಗ್ರಂಥಗಳು ಹೇಳಿಲ್ಲವೆಂದು

ಬರೆದಿರುವುದನ್ನು ನೋಡಿದರೆ ಈತನ ಧೈರ್ಯಕ್ಕೆ ಪಾರವೇ ಇಲ್ಲವೆಂದು ಹೇಳಬೇಕಾಗುತ್ತದೆ.

ವೀರಶೈವಸದಾಚಾರಸಂಗ್ರಹದ ೧೪ನೆಯ ಪ್ರಕರಣದಲ್ಲಿ—

ಸಿಂಹಾಸನಾಧಿಪತಿಭಿಃ ಶಿಖಾಮುದ್ರಾದಿಸಂಯುತೈಃ ।
ಪಂಚಮುದ್ರಾನ್ವಿತೋ ಭೂತ್ವಾ ಗುರುಃ ಪಟ್ಟಾಭಿಷೇಚಯೇತ್॥

ಎಂದು ಆಚಾರ್ಯರಿಗೆ ಶಿಖಾದಿಗಳಿರುವುವೆಂದು ಹೇಳಿರುವ ಶಿವಾಗಮೋಕ್ತ ವಿಷಯವನ್ನೂ, ವೀರಶೈವದೀಕ್ಷಾವಿಧಿಯಲ್ಲಿ ಶ್ರೀ ಜಗದ್ಗುರು ಏಕೋರಾಮಶಿವಾಚಾರ್ಯರಿಗೆ "ಏಕಶಿಖಾಯ" ಎಂದು ವಿಶೇಷಣವಿರುವುದನ್ನೂ ಈ ಘನಪಂಡಿತನು ನೋಡಿದಂತೆ ತೋರಲಿಲ್ಲ. ಈತನು ಇನ್ನಾದರೂ ನೋಡಿ ಭ್ರಾಂತಿಯಿಂದ ದೂರನಾಗಲಿ. ಆದುದರಿಂದ ಶ್ರೀಪತಿ ಪಂಡಿತರು ವೀರಶೈವಸಿದ್ಧಾಂತಕ್ಕನುಸಾರವಾಗಿಯೇ ಆಚಾರ್ಯರ ಸ್ತುತಿಯನ್ನು ಮಾಡಿದ್ದಾರೆಂದು ತಿಳಿಯಬೇಕು.

ಈತನು ಇದೇ ಪುಟದಲ್ಲಿ—

ವಿಶೇಷವೀರಶೈವಾಶ್ಚ ಪ್ರಮಥಾ ಯೇ ಚ ಪಾರ್ವತಿ ।
ಪಂಚಾಚಾರ್ಯಾಸ್ತಥಾ ತೇಷಾಂ ನ ಶಿಖಾ ಕೀರ್ತಿತಾ ಮಯಾ ॥

ಎಂಬ ಶ್ಲೋಕವನ್ನು ಬರೆದಿದ್ದಾನೆ. ಇದು ಶವಾಗಮಶ್ಲೋಕವಂತೆ! ಯಾವ ಶವಾಗಮುವೆನ್ನುವುದನ್ನು ಬರೆದಿಲ್ಲ. ಆಗಮದಲ್ಲಿದ್ದರಲ್ಲವೇ ಧೈರ್ಯದಿಂದ ಬರೆಯುವುದು? ಇಲ್ಲದ್ದನ್ನು ಬರೆದರೆ ಧೈರ್ಯವು ಹೇಗೆ ಬರಬೇಕು? ಇದು ಮೊದಲು ಈತನು ಉದಾಹರಿಸಿದ ಶ್ಲೋಕಗಳಂತೆ ನಿಜವಾದ ಆಗಮಶ್ಲೋಕವಲ್ಲವೆಂದು ತಿಳಿಯಬೇಕು. ಅಸ್ತು! ವಿಶೇಷವೀರಶೈವರು, ಪ್ರಮಥರು ಮತ್ತು ಪಂಚಾಚಾರ್ಯರು ಶಿಖೆಯನ್ನು ಧರಿಸಕೂಡದೆಂದು ಈತನು ಉದಾಹರಿಸಿದ ಶ್ಲೋಕದ ಅಭಿಪ್ರಾಯವಿರುತ್ತದೆ. ಈ ಶ್ಲೋಕದಿಂದ ಪ್ರಮಥರೇ ಬೇರೆ, ಪಂಚಾಚಾರ್ಯರೇ ಬೇರೆ ಎಂದು ಸಿದ್ಧವಾಗುತ್ತದೆ. ಪಂಚಾಚಾರ್ಯರು

ಪ್ರಮಥರಾಗಿದ್ದಾರೆನ್ನುವ ವಿಷಯದಲ್ಲಿ ಸಾವಿರಾರು ಗ್ರಂಥಗಳು ಪ್ರಮಾಣ ಗಳಾಗಿರುತ್ತವೆ. ಎಲ್ಲಾ ಮತಗ್ರಂಥಗಳಿಗೂ ಈ ಶ್ಲೋಕವು ವಿರುದ್ಧ ವಾಗಿರುವುದರಿಂದ, ಇದು ಕೇವಲ ಕಲ್ಪಿತಶ್ಲೋಕವಲ್ಲದೆ ಆಗಮಶ್ಲೋಕ ವಲ್ಲವೆನ್ನುವುದು ಮೂಢರಿಗೂ ಸಹ ತಿಳಿಯುವಂತಿದೆ. ಇಂಥ ಅಮಂಗಲ ಕೃತ್ರಿಮಶ್ಲೋಕವನ್ನುದಾಹರಿಸಿ ಜನಗಳನ್ನು ಭ್ರಾಂತರನ್ನಾಗಿ ಮಾಡು ವುದು ಈತನಿಗೆ ಎಷ್ಟೂ ಭೂಷಣವಲ್ಲ. ಆದುದರಿಂದ ಈತನು ಇನ್ನು ಮೇಲೆ ಇಂಥ ಅಮಂಗಲಕಾರ್ಯವನ್ನು ಮಾಡದೆ ನಿಜವಾದ ಶಿವೋಕ್ತಿ ಗಳನ್ನು ಉದಾಹರಿಸಿ ಶಿವಪ್ರೀತಿಕರವಾದ ಕಾರ್ಯವನ್ನು ಮಾಡ ಬೇಕೆಂದು ಪ್ರೇಮದಿಂದ ಸೂಚಿಸುತ್ತೇವೆ.

ವೀರಶೈವಾಚಾರಪ್ರದೀಪಿಕೆಯ ಆಚಾರ್ಯಸೇವಾಪ್ರಕರಣದಲ್ಲಿ— **"ಕೇಶಾನ್ ಸಮ್ಮಾರ್ಜಯೇನ್ನಿತ್ಯೈಃ" "ಕೇಶಾನುಲೇಪನದ್ರವ್ಯೈಃ"** ಇತ್ಯಾದಿ ವಾಕ್ಯಗಳು ಉಕ್ತವಾಗಿರುವುದರಿಂದ ಆಚಾರ್ಯರು ಶಿಖಾ ಭೂಷಿತರಾಗಿರಬೇಕೆಂಬುದೇ ಸಿದ್ಧಾಂತವು. ಇಲ್ಲಿ ಈತನು ಕೇಶಪದಕ್ಕೆ ಜಡೆಯೆಂದು ಹೇಳಬಹುದು. ಹಾಗೆ ಹೇಳಲಿಕ್ಕೆ ಬರುವುದಿಲ್ಲ. ಯಾಕಂ ದರೆ—ಮೇಲಿನ ಶ್ಲೋಕದಲ್ಲಿ ಕೇಶಗಳಿಗೆ ತೈಲಾಭ್ಯಂಗಸ್ನಾನವು ಹೇಳ ಲ್ಪಟ್ಟಿರುವುದು. ತೈಲಾಭ್ಯಂಗಸ್ನಾನವು ಧರ್ಮಶಾಸ್ತ್ರದಲ್ಲಿ ಶಿಖೆಗೆ ಉಕ್ತ ವಾಗಿರುವುದಲ್ಲದೆ ಜಡೆಗೆ ಉಕ್ತವಾಗಿರುವುದಿಲ್ಲ. ಇದನ್ನು ಈತನೇ ತನ್ನ ಪುಸ್ತಕದಲ್ಲಿ ಒಪ್ಪಿಕೊಂಡಿರುವನು.

**ಕುಟುಂಬಂ ಪುತ್ರದಾರಾಂಶ ವೇದಾಂಗಾನಿ ಚ ಸರ್ವಶಃ ।**
**ಕೇಶಾನ್ ಯಜ್ಞೋಪವೀತಂ ಚ ತ್ಯಕ್ತ್ವಾ ಗೂಢಶ್ಚರೇನ್ಮುನಿಃ ॥**

ಎಂದು ಬಾಷ್ಕಲಸ್ಮೃತಿಯಲ್ಲಿ ಕೇಶಶಬ್ದವು ಶಿಖಾಪರವಾಗಿ ಪ್ರಯೋಗಿಸಲ್ಪಟ್ಟಿರುವುದರಿಂದ "ಕೇಶಾನ್ ಸಮ್ಮಾರ್ಜಯೇನ್ನಿತ್ಯೈಃ" ಎಂಬ ಶ್ಲೋಕದಲ್ಲಿರುವ ಕೇಶಪದಕ್ಕೆ ವಿಧಿವಿಹಿತಶಿಖೆಯೆಂದೇ ಅರ್ಥ ವನ್ನು ಮಾಡಬೇಕಲ್ಲದೆ ಬೇರೆ ಮಾರ್ಗವೇ ಇಲ್ಲ. ಆದುದರಿಂದ

ಶ್ರೀಪತಿಪಂಡಿತರು ಧರ್ಮಶಾಸ್ತ್ರಾನುಸಾರವಾಗಿ ಮಂಗಲಶ್ಲೋಕದಲ್ಲಿ ಏಕೋರಾಮಭಗವತ್ಪಾದರಿಗೆ ಶಿಖಾಸೂತ್ರಗಳೆಂಬ ಶಿವಲಾಂಛನಗಳನ್ನು ಹೇಳಿರುವುದು ವೀರಶೈವಸಿದ್ಧಾಂತಕ್ಕೆ ಅತ್ಯಂತ ಸಮ್ಮತವಾಗಿರುವ್ರ ದೆಂಬುದೇ ಸಿದ್ಧಾಂತವು.

ಈತನು ೬೦ ನೆಯ ಪುಟದಲ್ಲಿ—

"ಶ್ರೀ ರೇಣುಕಾಚಾರ್ಯರು ಕರ್ಮಾಂಗಭೂತವಾದ ಶಿಖೆಯನ್ನು ಧರಿಸದೆ ಜಡೆಯನ್ನು ಧರಿಸಿಕೊಂಡಿದ್ದರು. ಈ ವಿಷಯದಲ್ಲಿ—ಭಸ್ಮೋದ್ಧೂಲಿತಸರ್ವಾಂಗಂ ಸಾರರುದ್ರಾಕ್ಷಭೂಷಣಂ | ಜಟಾಮುಕುಟಸಂಯುಕ್ತಂ ತ್ರಿಪುಂಡ್ರಾಂಕಿತಮಸ್ತಕಂ || ಎಂದು ಸಾರುವ ಸಿದ್ಧಾಂತಶಿಖಾಮಣಿವಾಕ್ಯಗಳು ಸಾಕ್ಷಿಯಾಗಿವೆ."

ಎಂದು ಬರೆದಿದ್ದಾನೆ. ಈ ಶ್ಲೋಕವನ್ನು ಉದಾಹರಿಸಿರುವುದರಿಂದ ಈತನಿಗೆ ಯಾವ ಪುರುಷಾರ್ಥವು ಪ್ರಾಪ್ತವಾಯಿತೋ ತಿಳಿಯದಾಗಿದೆ. ಆಚಾರ್ಯರಿಗೆ ಜಟಾಧಾರಣವೂ ಸಹ ಉತ್ತಮೋತ್ತಮವೆಂದು ನಾವು ಈ ಮೊದಲೇ ಹೇಳಿದ್ದೇವೆ. "ಜಟಾಮುಕುಟಸಂಯುಕ್ತಂ" ಎಂದು ಸಿದ್ಧಾಂತಶಿಖಾಮಣಿಯೂ, "ಶ್ರೀಮದುದ್ದಂಡಶಿಖೋಪವೀತವಿಲಸತ್ಕಂಥಾಜಿನಾಲಂಕೃತಃ" ಎಂದು ಶ್ರೀಕರಭಾಷ್ಯವೂ ಹೇಳಿರುವುದರಿಂದ, ಶಿಖಾಜಟೆಗಳೆರಡೂ ಆಚಾರ್ಯಲಕ್ಷಣಗಳೆಂದು ಸಿದ್ಧವಾಗುವುದಲ್ಲದೆ, ಈ ಮುಂಡಿತಮುಂಡನ ಅಭಿಪ್ರಾಯದಂತೆ ಶಿಖಾಶೂನ್ಯತ್ವವು ಸಿದ್ಧಿಸುವುದಿಲ್ಲ.

ಈತನು ಇದೇ ಪುಟದಲ್ಲಿ—

"ಈ ಪ್ರಕಾರ ಶಿವಾಗಮಗಳು ಪರಮಪೂಜ್ಯರಾದ ಪಂಚಾಚಾರ್ಯರಿಗೂ ಕರ್ಮಾಂಗಭೂತಗಳಾದ ಶಿಖಾಸೂತ್ರಗಳಿರಕೂಡದೆಂದು ಬೋಧಿಸುತ್ತಿರಲು ಶಿವಾಗಮ ವಿರುದ್ಧವಾಗಿ ಶ್ರೀಪತಿಪಂಡಿತರು ಮಾಡಿರುವ ಶ್ರೀಮದೇಕೋರಾಮಶಿವಾಚಾರ್ಯರ ಸ್ತೋತ್ರಮಾತ್ರದಿಂದ ಶ್ರೀಮದೇಕೋರಾಮಶಿವಾಚಾರ್ಯರಿಗೆ ಕರ್ಮಾಂಗಭೂತಗಳಾದ ಶಿಖಾಸೂತ್ರಗಳಿದ್ದವೆಂದು ಭಾವಿಸುವದೂ ಹಾಗೂ ತದನುಸಾರವಾಗಿ ವೀರಶೈವರಿಗೆ ಕರ್ಮಾಂಗಭೂತಗಳಾದ ಶಿಖಾಸೂತ್ರಗಳಿರಬೇಕೆಂದು ಬೋಧಿಸುವದೂ ಪಾಪಕರವಾಗಿದೆ."

ಎಂದು ಬರೆದಿದ್ದಾನೆ. ಈತನು ಬರೆದಿರುವ 'ವಿಶೇಷವೀರಶೈವಾಶ್ಚ' ಎಂಬ ಶ್ಲೋಕವು ಶಿವಾಗಮಶ್ಲೋಕವಾಗಿರದೆ ಯಾವನೋ ಒಬ್ಬ ಶೂದ್ರನಿಂದ ಕಲ್ಪಿಸಲ್ಪಟ್ಟ ಶ್ಲೋಕವಾಗಿದೆ. ಆದುದರಿಂದ ಈ ಶ್ಲೋಕಾಭಿಪ್ರಾಯವು ಆಚಾರ್ಯರಿಗೆ ಸುತರಾಂಸಂಭವಿಸುವುದಿಲ್ಲವೆಂದು ತಿಳಿಯಬೇಕು. ಶ್ರೀಪತಿಪಂಡಿತರು ತಮ್ಮ ಭಾಷ್ಯದಲ್ಲಿ ಧರ್ಮಶಾಸ್ತ್ರಾನುಸಾರವಾಗಿ ಏಕೋರಾಮಭಗವತ್ಪಾದರ ಸ್ತುತಿಯನ್ನು ಮಾಡಿರುವುದರಿಂದ ಅದಕ್ಕೆ ವಿರುದ್ಧಾರ್ಥವನ್ನು ಕಲ್ಪಿಸುವುದೂ, ಉತ್ತಮಜಾತಿಯವರಿಗೆಲ್ಲಾ ಶೂದ್ರರಂತೆ ಮುಂಡನವನ್ನು ಮಾಡಿಸಿಕೊಳ್ಳಿರೆಂದು ಬೋಧಿಸುವುದೂ ಮಹಾಪಾಪಕರವಾಗಿದೆ.

ಈತನು ಇದೇ ಪುಟದಲ್ಲಿ—

"ಒಂದು ಪಕ್ಷದಲ್ಲಿ ಶಿಖಾವಾದಿಗಳ ಅಭಿಪ್ರಾಯದಂತೆ ಶ್ರೀಪತಿಪಂಡಿತರು ಮಾಡಿರುವ ಶ್ರೀಮದೇಕೋರಾಮಶಿವಾಚಾರ್ಯರ ಸ್ತೋತ್ರವನ್ನು ಪ್ರಮಾಣವನ್ನಾಗಿ ಗ್ರಹಿಸಿದಲ್ಲಿ ಆ ಸ್ತೋತ್ರದಲ್ಲಿರುವ ಶಿಖಾಸೂತ್ರಶಬ್ದಗಳಿಗೆ ಕ್ರಮವಾಗಿ ಶಿವಾಗಮಸಮ್ಮತವಾದ ಪೂರ್ಣಶಿಖಾಲಿಂಗಯಜ್ಞೋಪವೀತಗಳೆಂದು ಅರ್ಥಮಾಡಬೇಕು."

ಎಂದು ಬರೆದು ನಿಷ್ಪ್ರಯೋಜನವಾಗಿ ಮೂರು ಶ್ಲೋಕಗಳನ್ನು ಬರೆದಿದ್ದಾನೆ. ಈ ವಿಷಯವನ್ನು ವಿಮರ್ಶಿಸೋಣ!

"ಶ್ರೀಮದ್ದಂಡಶಿಖೋಪವೀತ" ಎಂಬ ಶ್ಲೋಕವು ಪ್ರಮಾಣವೇ ಅಲ್ಲವೆಂದು ಈತನು ಮೊದಲು ಹೇಳಿದ್ದಾನೆ. ಆದರೆ ಈಗ ಪ್ರಮಾಣವನ್ನಾಗಿ ಗ್ರಹಿಸಿದರೆ ಹೀಗೆ ಅರ್ಥಮಾಡಬೇಕೆಂದು ಬರೆದಿದ್ದಾನೆ. ಇದರಿಂದ ಈತನ ಹೃದಯವು ಯಾವತರಹದ್ದಿರಬಹುದೆನ್ನುವುದು ಕುಶಲರಿಗೆ ವೇದ್ಯವಾಗದಿರದು. ಒಬ್ಬಾನೊಬ್ಬ ಹುಚ್ಚನು ಗೋವಿಗೆ ಮೊದಲು ಇದು ಗೋವೇ ಅಲ್ಲವೆಂದು ಹೇಳಿದನಂತೆ! ಅನೇಕ ಜನರು ಅವನ ಅಭಿಪ್ರಾಯವನ್ನು ಖಂಡಿಸಲು ಆಗ ಅವನು ನಿಮ್ಮೆಲ್ಲರ ಮನಸ್ಸಮಾಧಾನಕ್ಕಾಗಿ ಎಮ್ಮೆಯೆಂದು ಹೇಳುತ್ತೇನೆಂದು ಹೇಳಿದನಂತೆ! ಪಾಠ

ಕರೇ, ಈ ತರಹವಾಗಿ ನುಡಿದ ಹುಚ್ಚನ ಮಾತಿನ ರೀತಿಯೂ, ಈತನ ಬರವಣಿಗೆಯ ರೀತಿಯೂ ಒಂದೇ ಮಾಲಿಕೆಯೊಳಗಿನ ಮಣಿಗಳಂತಿವೆ. ಶ್ರೀಮದೇಕೋರಾಮಾರಾಧ್ಯರ ಸ್ತೋತ್ರದಲ್ಲೆಲ್ಲಾ ಭಾಷ್ಯಕಾರರು ಬಾಹ್ಯಚಿಹ್ನಗಳನ್ನು ವರ್ಣಿಸಿದ್ದಾರಲ್ಲದೆ ಈ ಮುಂಡನವಾದಿಯ ಅಭಿಪ್ರಾಯದಂತೆ ಜ್ಞಾನಶಿಖಾದಿಗಳನ್ನು ವರ್ಣಿಸಿರುವುದಿಲ್ಲ. ಈ ವಿಷಯದಲ್ಲಿ ಈತನು ಮೂರು ಶ್ಲೋಕಗಳನ್ನು ತೆಗೆದುಕೊಂಡಿರುವುದು ಇವಾವು ಸಾಹೇಬರಿಗೂ ಗೋಕುಲಾಷ್ಟಮಿಗೂ ಸಂಬಂಧವನ್ನು ಕಲ್ಪಿಸಿದಂತಾಗಿರುತ್ತದೆ. ಗ್ರಂಥಕಾರರ ಯಥಾರ್ಥಾಭಿಪ್ರಾಯವನ್ನು ತಿಳಿಯದೆ ಕುಕಲ್ಪನಾತ್ಮಕವಾಗಿ ಮನಸ್ಸಿಗೆ ಬಂದಂತೆ ಬರೆಯುವುದು ಧೂರ್ತತನವಲ್ಲದೆ ಬೇರೆಯಲ್ಲ! ಈ ಮೂರು ಶ್ಲೋಕಗಳಲ್ಲಿ "ಮಸ್ತಕಸ್ಥಾನಮಧ್ಯಸ್ಯ" ಎಂಬ ಮೊದಲನೆಯ ಶ್ಲೋಕವು ಶಿವಾಗಮಶ್ಲೋಕವಾಗಿರದೆ ಶವಾಗಮಶ್ಲೋಕವಾಗಿರುವುದು. ಇದು ಅರ್ಥದೋಷದಿಂದ ತುಂಬಿತುಳುಕುತ್ತದೆ. ಇನ್ನುಳಿದ "ಜ್ಞಾನಮೇವ ಶಿಖಾ" ಎಂಬ ಎರಡು ಶ್ಲೋಕಗಳ ವಿಷಯವನ್ನು ಈ ಮೊದಲೇ ಬರೆದಿದ್ದೇವೆ. ಅಲ್ಲಿಯೇ ನೋಡಿಕೊಳ್ಳಬೇಕು.

ಈತನು ೬೧ ನೆಯ ಪುಟದಲ್ಲಿ—

"ಚತುರಂಗುಲ, ತ್ರ್ಯಂಗುಲ, ದ್ವ್ಯಂಗುಲ, ಏಕಾಂಗುಲ ಪರಿಮಿತವಾದ ಶಿಖೆಯು ಕ್ರಮವಾಗಿ ಕೇವಲ ಅಲಿಂಗಿಬ್ರಾಹ್ಮಣಾದಿಗಳಿಗೆ ವಿಹಿತವಾಗಿರುವದಲ್ಲದೆ, ವೀರಶೈವರಿಗೆ ವಿಹಿತವಾಗಿರುವದಿಲ್ಲ. ಅಂತೆಯೇ, ಶಿಖಾಸ್ಥಾನಂ ಪರಿಧೃತಂ ಚತುರಂಗುಲವಿಸ್ತೃತಂ | ಅಲಿಂಗಿನಾಂ ಬ್ರಾಹ್ಮಣಾನಾಂ ಪಶುಮಾರಣಶಾಲಿನಾಂ || ಪೂರ್ವವತ್ ಕ್ಷತ್ರಿಯಾಣಾಂ ಚ ತ್ರ್ಯಂಗುಲಂ ಸಮುದೀರಿತಂ | ವೈಶ್ಯಾನಾಂ ದ್ವ್ಯಂಗುಲಂ ದೇವಿ ಶೂದ್ರಾಣಾಮೇಕಮಂಗುಲಂ || ಎಂದು ಶಿವಾಗಮವಚನವು ಸಾರುತ್ತಿದೆ."

ಎಂದು ಬರೆದಿದ್ದಾನೆ. ಇಂಥ ಅಮಂಗಲವಚನಗಳು ಶಿವಾಗಮಗಳಲ್ಲಿ ಎಂದೂ ಹೇಳಲ್ಪಡುವುದಿಲ್ಲ. ಯಾವ ಶಿವಾಗಮವೋ ಎನ್ನುವುದನ್ನಾ

ದದೂ ಬರೆದಿಲ್ಲ. ಇದರಿಂದಲೇ ಇದು ನಿಜವಾದ ಶಿವಾಗಮಶ್ಲೋಕವಲ್ಲ ವೆಂದು ವೇದ್ಯವಾಗುತ್ತದೆ. ಇದನ್ನು ಯಾವನೋ ಒಬ್ಬ ಶಿಖಾವಿರೋಧಿಯಾದ ಮಹಾಶೂದ್ರನು ರಚಿಸಿದಂತೆ ತೋರುತ್ತದೆ. ಇಲ್ಲಿಯ ವರೆಗೆ ವೀರಶೈವಮತಗ್ರಂಥಕಾರರಾರೂ ಉದಾಹರಿಸದ ಶ್ಲೋಕಗಳನ್ನು ಈತನು ಉದಾಹರಿಸಿರುವುದನ್ನು ನೋಡಿದರೆ, ಈ ಶ್ಲೋಕಗಳು ಶಿವಾಗಮಗಳಲ್ಲಿರಬಹುದೇ ಇಲ್ಲವೇ ಎನ್ನುವುದನ್ನು ಕುಶಲರೇ ಯೋಚಿಸಬೇಕು. ಈ ವರೆಗೆ ಈತನು ಉದಾಹರಿಸಿದ ಶ್ಲೋಕಗಳನ್ನು ಮುದ್ರಿತಗಳಾದ ಆಗಮಗಳಲ್ಲಾಗಲಿ, ಅಥವಾ ಪ್ರಾಚೀನರು ಬರೆದಿಟ್ಟ ಸಮಗ್ರವಿರುವ ಆಗಮಗಳಲ್ಲಾಗಲಿ ತೋರಿಸಿದರೆ ಈತನು ಹೊರುವಷ್ಟು ಇನಾಮನ್ನು ಕೊಡಬಹುದು. ಇದಕ್ಕೆ ಈತನು ಸಿದ್ಧನಾಗಬಲ್ಲನೋ? ಸುಮ್ಮ ಸುಮ್ಮನೆ ಕಲ್ಪಿತಶ್ಲೋಕಗಳಿಗೆ ಶಿವಾಗಮಶ್ಲೋಕಗಳೆಂದು ಬರೆಯುವುದು ಮಹಾಪಾಪಕಾರ್ಯವಾಗಿದೆ. ಅಸ್ತು! ಈತನು ಇಲ್ಲಿ ಉದಾಹರಿಸಿರುವ ಶ್ಲೋಕಗಳಿಗೂ ವೀರಶೈವರಿಗೂ ಯಾವ ಸಂಬಂಧವೂ ಇರುವುದಿಲ್ಲ. ಹೀಗಿದ್ದರೂ ಶಿಖೆಯ ಮೇಲಿನ ದ್ವೇಷಬುದ್ಧಿಯಿಂದ ಸುಮ್ಮನೆ ಚಟಕ್ಕಾಗಿ ಬರೆದಿದ್ದಾನೆ. ಅನೇಕಾನೇಕ ವೀರಶೈವಮತಗ್ರಂಥಗಳಲ್ಲಿ ವೀರಶೈವದ್ವಿಜರಿಗೆ ಶಿಖಾಸೂತ್ರಾದಿಗಳಿರಬೇಕೆಂದು ಸಿದ್ಧವಾಗುವುದರಿಂದ ಶ್ರೀಪತಿಪಂಡಿತರು ಶ್ರೀಮಜ್ಜಗದ್ಗುರು ಏಕೋರಾಮಶಿವಾಚಾರ್ಯರಿಗೆ "ಶ್ರೀಮದ್ದಂಡಶಿಖೋಪವೀತವಿಲಸತ್ಕಂಥಾಜಿನಾಲಂಕೃತಃ" ಎಂಬ ವಿಶೇಷಣವನ್ನು ಕೊಟ್ಟಿರುವುದು ಅತ್ಯಂತ ಮಾನ್ಯವಾಗಿದೆ.

ಈತನು ೬೧-೬೨ ನೆಯ ಪುಟಗಳಲ್ಲಿ—

"ಉಗ್ರಃ ಕಪರ್ದೀ ಶ್ರೀಕಂಠಃ—ಕಪರ್ದೋಽಸ್ಯ ಜಟಾಜೂಟಃ" "ಜಟಿನೇ—ಜಟಾಧರಾಯ—ಕಪರ್ದಿನೇ" ಇತ್ಯಾದಿ ಕೋಶವಚನ ಹಾಗೂ ಶಿವನಾಮಗಳಿಂದ ಜಡೆಯು ಕೇವಲ ಪರಮಾತ್ಮನ ಚಿಹ್ನವೆಂದು ವ್ಯಕ್ತವಾಗುತ್ತದೆ."

ಎಂದು ಬರೆದುಕೊಂಡು ಶಿವನು ಜಟಾಧಾರಿ ಎಂಬ ಬಗ್ಗೆ ವೇದಾಂತಸಾರವೀರಶೈವಚಿಂತಾಮಣಿಯಲ್ಲುಕ್ತವಾಗಿರುವ ವಾಕ್ಯಗಳನ್ನುದಾ

ಹರಿಸಿ ನಿಷ್ಪ್ರಯೋಜನವಾಗಿ ಹರಟೆಯನ್ನು ಕೊಚ್ಚಿದ್ದಾನೆ. ಶಿವನು ಜಟಾಧಾರಿಯಾಗಿರುವನೆಂಬ ವಿಷಯವನ್ನು ಎಲ್ಲರೂ ಒಪ್ಪಿಕೊಳ್ಳುತ್ತಾರೆ. ಶಿಖೆಯು ಜಟಾಂತರ್ಗತವಾಗಿರುವುದರಿಂದ ಶಿಖಾಧಾರಿಗಳಿಗಂತೂ ಇದು ಪರಮಮಾನ್ಯವಾಗಿದೆ. ಆದರೆ ಈ ಜಟಾಧಾರಣವು ಮುಂಡನವಾದಿಗಳಿಗೇನೇ ಅತ್ಯಂತ ವಿರೋಧವಾಗಿದೆ. ಈತನು ಶಿವನಿಗೆ ಜಟಾಧಾರಣವನ್ನು ಸಾಧಿಸದೆ ಮುಂಡನವನ್ನು ಸಾಧಿಸಿದ್ದರೆ, ಮುಂಡನವಾದಿಯಾದ ಈತನ ತತ್ತ್ವಕ್ಕೆ ಬಹುಶೋಭಿಸುತ್ತಿತ್ತು. ಆದರೆ ಈತನು ತನ್ನ ಸಿದ್ಧಾಂತವನ್ನು ಸಾಧಿಸದೆ ನಮ್ಮ ಸಿದ್ಧಾಂತವನ್ನು ಸಾಧಿಸಿರುವುದು ಮಂದತನದ ಕುರುಹಾಗಿದೆ. ಇರಲಿ; ಶಿವನಿಗೆ ಜಟೆಯು ಉಕ್ತವಾದಂತೆ ಜಟಾಂತರ್ಗತವಾದ ಶಿಖೆಯೂ ಉಕ್ತವಾಗಿದೆ. "ಶಿಖಿನೇ ನಮಃ—ಶಿಖಂಡಿನೇ ನಮಃ" ಎಂದು ಮಹಾನ್ಯಾಸಗ್ರಂಥದಲ್ಲಿರುವ ಶಿವಾಷ್ಟೋತ್ತರಸಹಸ್ರನಾಮಾವಳಿಯಲ್ಲಿ ಶಿವನಿಗೆ ಶಿಖೆಯು ಹೇಳಲ್ಪಟ್ಟಿರುವುದು. "ಶಿಖಂಡ" ಶಬ್ದವು ಶಿಖಾಪರ್ಯಾಯನಾಮವಾಗಿರುವುದೆಂಬಲ್ಲಿ "ಶಿಖಂಡೌತು ಶಿಖಾಬರ್ಹೌ" ಎಂಬೀ ಅಮರಶೇಷಕೋಶವೇ ಪ್ರಮಾಣವಾಗಿದೆ. ಆದುದರಿಂದ ಜಟೆಯಂತೆ ಶಿಖೆಯೂ ಶಿವಲಾಂಛನವೆಂದು ಸಿದ್ಧವಾಗುತ್ತದೆ. ಆದುದರಿಂದಲೇ ವೀರಶೈವಸದಾಚಾರಸಂಗ್ರಹದ ೬ನೆಯ ಪ್ರಕರಣದಲ್ಲಿ "ಶಿಖಾಸೂತ್ರ ಜಟಾಭಸ್ಮ ಶಿವಲಾಂಛನ ಲಾಂಛಿತಃ" ಎಂಬೀ ಶ್ಲೋಕದಿಂದ ಶಿಖೆಯೂ ಜಟೆಯೂ ಶಿವಲಾಂಛನಗಳೆಂದು ಹೇಳಲ್ಪಟ್ಟಿದೆ. ಇದರಿಂದ ಶಿಖೆಯು ಶಿವಲಾಂಛನವಲ್ಲವೆಂದು ಸಾಧಿಸುವುದು ಮಹಾಪಾಪವಲ್ಲವೇ ?

ಈತನು ೬೩ ನೆಯ ಪುಟದಲ್ಲಿ—

"ಶ್ರೀಪತಿಪಂಡಿತರು "ಹರಿಕೇಶಾಯೋಪವೀತಿನೇ—ರುದ್ರಶಿಖಾ" ಇತ್ಯಾದಿ ವಾಕ್ಯಗಳಲ್ಲಿರುವ ಶಿಖೋಪವೀತಶಬ್ದಗಳಿಗೆ ಕರ್ಮಾಂಗಭೂತವಾದ ಜುಟ್ಟುಜನಿವಾರಗಳೆಂದು ಅರ್ಥವನ್ನು ಮಾಡುವದೂ ಜುಟ್ಟುಜನಿವಾರಗಳು ಪರಮಾತ್ಮನ ಚಿಹ್ನವೆಂದು ಹೇಳುವದೂ ಕೇವಲ ಅವರ ಘನತರ ಪಾಂಡಿತ್ಯಕ್ಕೆ ಕಲಂಕಪ್ರದವು."

ಎಂದು ಬರೆದಿದ್ದಾನೆ. ಈ ತರಹದ ಈತನ ಬರವಣಿಗೆಯನ್ನು ನೋಡಿ ದರೆ ನಗೆಬರುತ್ತದೆ. ಸಮಸ್ತವೇದಾಗಮಪುರಾಣಗಳನ್ನು ಆಮೂಲಾಗ್ರ ವಾಗಿ ಪರಿಶೀಲಿಸಿ ಸದಾ ಅವುಗಳಲ್ಲಿಯೇ ವಿಹರಿಸುತ್ತ, ಬ್ರಹ್ಮಸೂತ್ರ ಗಳಿಗೆ ಶಕ್ತಿವಿಶಿಷ್ಟಾದ್ವೈತಸಿದ್ಧಾಂತಪರವಾಗಿ ವೀರಶೈವಭಾಷ್ಯವನ್ನು ಬರೆದು ಲೋಕವಂದ್ಯರಾಗಿಹೋಗಿರುವ ಶ್ರೀಪತಿಪಂಡಿತರಿಗೆ, ಅವರ ಒಂದು ರೋಮದ ಬೆಲೆಬಾಳದ ಈ ಬೋಳಪಂಥಿಯು ವಿಚಾರಶೂನ್ಯತೆ ಯಿಂದ ಕಲಂಕಶಬ್ದವನ್ನುಪಯೋಗಿಸಿರುವುದು, ಸೂರ್ಯಪ್ರಕಾಶವನ್ನು ನೋಡಿ ಗೂಬೆಯು ನಿಂದಿಸಿದಂತಿರುವುದಲ್ಲದೆ ಬೇರೆಯಿಲ್ಲ.

ಈತನು ಇದೇ ಪುಟದಲ್ಲಿ—

"ಪ್ರಕೃತದಲ್ಲಿ ಶಿಖಾ ಶಬ್ದಕ್ಕೆ, ಕರ್ಣೋಪರಿ ಬ್ರಹ್ಮರಂಧ್ರೇ ಭದ್ರಾಂ ರುದ್ರಜಟಾಂ ಶಿವೇ | ಸ್ವೀಕುರ್ವಂತಿ ಯದಿ ಪ್ರೋಕ್ತಂ ನಕಲಂಕಮಿತಿ ಪ್ರಿಯೆ || ಎಂಬ ವಾತುಲಸಿದ್ಧಾಂತ ವಚನದಂತೆ ಬಾಲಲೀಲೋಚಿತವಾದ ರುದ್ರಜುಟ್ಟೆಂದು ಅರ್ಥಾತ್ ಜುಟುಪಿ ಎಂದಾಗಲಿ ಅಥವಾ ಜಟಾರೂಪವಾದ ಕೇಶಸಮೂಹವೆಂದಾಗಲಿ ಅರ್ಥವನ್ನು ಮಾಡುವದೂ ಉಪವೀತ ಶಬ್ದಕ್ಕೆ ಲಿಂಗವೆಂದು ಅರ್ಥವನ್ನು ಮಾಡುವದೂ ಯುಕ್ತವೆನಿ ಸುವದಲ್ಲದೆ ಕರ್ಮಾಂಗಭೂತವಾದ ಜುಟ್ಟುಜನಿವಾರಗಳೆಂದು ಅರ್ಥವನ್ನು ಮಾಡುವದು ಯುಕ್ತವೆನಿಸುವದಿಲ್ಲ."

ಎಂದು ಬರೆದಿರುತ್ತಾನೆ. ಈತನು ಉದಾಹರಿಸಿರುವ "ಕರ್ಣೋಪರಿ ಬ್ರಹ್ಮರಂಧ್ರೇ" ಎಂಬ ಶ್ಲೋಕವು ವಾತುಲಾಗಮಶ್ಲೋಕವಂತೆ! ವಾತು ಲಾಗಮದಲ್ಲಿ ಈ ಶ್ಲೋಕವು ಇರುವುದೇ ಇಲ್ಲ. ಇದು ಯಾವ ವಾತು ಲಾಗಮವೋ ಯಾರಿಗೂ ತಿಳಿಯದಾಗಿದೆ. ಈತನು ಉದಾಹರಿಸಿರುವ ಪ್ರತಿಯೊಂದು ಶ್ಲೋಕಗಳೂ ಯಾವ ಆಗಮಗಳಲ್ಲಿಯೂ ದೊರೆಯುವು ದಿಲ್ಲ. ಈತನ ಆಗಮಗಳೇ ಬೇರೆ ಇರುವಂತೆ ತೋರುತ್ತದೆ. ಈ ಶ್ಲೋಕವನ್ನು ಯಾವನೋ ಒಬ್ಬ ಹುಚ್ಚನು ಬರೆದಂತೆ ಕಾಣುತ್ತದೆ. ಯಾಕಂದರೆ—ಇದರಲ್ಲಿರುವ ಮಾತುಗಳು ಒಂದಕ್ಕೊಂದು ಸಂಬಂಧವಿರು

ವುದಿಲ್ಲ. ಅಲ್ಲದೆ ಈ ಶ್ಲೋಕದಲ್ಲಿ 'ಕಲಂಕ' ಶಬ್ದವು ನಪುಂಸಕಲಿಂಗ ದಲ್ಲಿ ಪ್ರಯೋಗಿಸಲ್ಪಟ್ಟದೆ. "ಕಲಂಕಾಂಕೌ ಲಾಂಛನಂಚ" ಮತ್ತು "ಕಲಂಕೋಂಕಾಪವಾದಯೋಃ" ಎಂಬ ಕೋಶವಚನಗಳಂತೆ ಕಲಂಕಶಬ್ದವು ಪುಲ್ಲಿಂಗದಲ್ಲಿ ಪಠಿತವಾಗಿರುವುದು ಬಾಲಕರಿಗೂ ಸಹ ಗೊತ್ತಿರುವುದು. ಹೀಗೆ ಲಿಂಗಜ್ಞಾನ ಅರ್ಥಜ್ಞಾನವಿಲ್ಲದೆ ರಚಿಸಲ್ಪಟ್ಟಿರುವ ಈ ಶ್ಲೋಕಕ್ಕೆ ಹುಚ್ಚರ ಶ್ಲೋಕವೆಂದೇ ಹೇಳಬೇಕಾಗುವುದು. ಕಲಂಕಶಬ್ದವು ನಪುಂಸಕಲಿಂಗವಾಗಿರುವುದೆಂದು ಸಾಧಿಸುವುದಕ್ಕೋಸ್ಕರ ಇನ್ನು ಈತನು ಹೊಸ ಹೊಸ ಕೋಶಗಳನ್ನಾದರೂ ಕಂಡುಹಿಡಿಯಬಹುದೆಂಬ ಶಂಕೆಯು ಉತ್ಪನ್ನವಾಗುತ್ತದೆ ಯಾಕಂದರೆ—ಮುಂಡನವನ್ನು ಸಾಧಿಸುವುದಕ್ಕೋಸ್ಕರ ಹೊಸ ಹೊಸ ಆಗಮಶ್ಲೋಕಗಳನ್ನು ಕಂಡುಹಿಡಿದಿದ್ದಾನಲ್ಲವೇ? ಈರೀತಿ ನವೀನ ತತ್ತ್ವಶೋಧಕರು ನಮ್ಮ ಭರತಭೂಮಿಯಲ್ಲಿ ಅವತರಿಸಿದರೆ ನಮ್ಮ ಪುಣ್ಯಕ್ಕೆ ಬೆಲೆಯೇ? ಆಸ್ತು! ಈ ಅಬದ್ಧಶ್ಲೋಕವನ್ನು ಒಂದುವೇಳೆ ಮನ್ನಿಸಿದರೂ ಇದಕ್ಕೆ ಈತನು ಬರೆದಂತೆ ಅರ್ಥವಾಗುವುದಿಲ್ಲ. ರುದ್ರಜಟಾಶಬ್ದಕ್ಕೆ ರುದ್ರ ಜುಟ್ಟು ಅಥವಾ ಜುಲುಪಿ ಎಂದು ಅರ್ಥಮಾಡುವುದು ಮಂದತನವು. ಜಟೆಯು ಎಂದಾದರೂ ಜುಟ್ಟಾಗಬಹುದೇ? ಜುಟ್ಟೇ ಬೇರೆ, ಜುಲುಪಿಯೇ ಬೇರೆ ಎನ್ನುವುದು ಈ ಘನಪಂಡಿತನಿಗೆ ಗೊತ್ತಿದ್ದಂತೆ ತೋರುವುದಿಲ್ಲ. ಆದುದರಿಂದಲೇ ಹಿಗ್ಗಿ ಹಿಗ್ಗಿ ಅರ್ಥವನ್ನು ಬರೆದಂತೆ ಕಾಣುತ್ತದೆ. ಇದರಿಂದ ಈತನು ಬರೆದ ಅರ್ಥವು ಆ ಶ್ಲೋಕಕ್ಕೆ ಎಷ್ಟು ಮಾತ್ರವೂ ಸಂಬಂಧಿಸುವುದಿಲ್ಲವೆಂದು ಸಾರಿ ಸಾರಿ ಹೇಳಬಹುದಾಗಿದೆ. ಆದುದರಿಂದ "ಹರಿಕೇಶಾಯೋಪವೀತಿನೇ—ರುದ್ರಶಿಖಾ" ಇತ್ಯಾದಿಶ್ರುತಿಗಳಿಗೆ ಜಗತ್ಪೂಜ್ಯಪಂಡಿತರಾದ ಶ್ರೀಪತಿಪಂಡಿತರು ಅರ್ಥಮಾಡುವಂತೆ ಶಿಖೋಪವೀತಗಳೆಂದು ಅರ್ಥಮಾಡುವುದೇ ಸಿದ್ಧಾಂತವು! ಸಿದ್ಧಾಂತವು!!

ಈತನು ೬೪ ನೆಯ ಪುಟದಲ್ಲಿ—

"ದೀಕ್ಷಾವಿಧಿಯಲ್ಲಿ "ಏಕಶಿಖಾಯ— ಪಂಚಶಿಖಾಯ — ಅಪರಿಮಿತ ಶಿಖಾಯ" ಎಂಬ ವಾಕ್ಯಗಳಲ್ಲಿರುವ ಶಿಖಾಶಬ್ದಗಳಿಗೆ ಕರ್ಮಾಂಗಭೂತಶಿಖೆಯೆಂದು ಅರ್ಥವಾಗುವದಿಲ್ಲ. ಕಥಂಚಿತ್ ಏಕಶಿಖಾಶಬ್ದಕ್ಕೆ ಕರ್ಮಾಂಗಭೂತವಾದ ಶಿಖೆ ಯೆಂದು ಅರ್ಥವನ್ನು ಮಾಡಿದರೂ ಪಂಚಶಿಖಾ ಅಪರಿಮಿತಶಿಖಾಶಬ್ದಗಳಿಗೆ ಕರ್ಮಾಂಗ ಭೂತವಾದ ಶಿಖೆಯೆಂದು ಅರ್ಥವನ್ನು ಮಾಡುವದು ಅಸಂಗತವೆನಿಸುವದು. ಕರ್ಮಾಂಗ ಭೂತವಾದ ಶಿಖೆಯು ಕೇವಲ ವಿಧಿವಿಹಿತಮಸ್ತಕಾಗ್ರವರ್ತಿಚತುರಂಗುಲಾದಿಪರಿಮಿತಕೇಶ ಸಮೂಹರೂಪವಾಗಿದೆ. ಇಂತಹ ಕೇಶಸಮೂಹರೂಪವಾದ ಪಂಚಶಿಖೆಗಳು ಕೇವಲ ಚೌಲಕರ್ಮಾಂಗವಾಗಿದ್ದು ಚೌಲಕರ್ಮಾತೀತರಾದ ಆಚಾರ್ಯರಲ್ಲಿ ಬಾಧಿತವಾಗಿವೆ. ಅಪರಿಮಿತಶಿಖಾಶಬ್ದವಾಚ್ಯವಾದ ಕೇಶಸಮೂಹವು ಪೂರ್ಣಶಿಖೆಯೆನಿಸುವದಲ್ಲದೆ ಅರ್ಧಶಿಖೆಯೆನಿಸುವದಿಲ್ಲ."

ಎಂದು ಬರೆದಿದ್ದಾನೆ. ಈ ವಿಷಯವನ್ನು ವಿಮರ್ಶಿಸೋಣ! ದೀಕ್ಷಾವಿಧಿಯಲ್ಲಿ ಹೇಳಲ್ಪಟ್ಟಿರುವ ಏಕಶಿಖಾದಿಗಳು ಪತಿಕರ್ಮಾಂಗಭೂತಗಳಾಗಿರುತ್ತವೆ. ಏಕಶಿಖಾಶಬ್ದಕ್ಕಂತೂ ಈತನು ಶಿಖಾವಾದಿಗಳ ಅಭಿಪ್ರಾಯವನ್ನೇ ಒಪ್ಪಿದ್ದಾನೆ ಇನ್ನು ಪಂಚಶಿಖಾ ಮತ್ತು ಅಪರಿಮಿತಶಿಖಾಶಬ್ದಗಳು ಜಟಾರ್ಥವನ್ನು ಬೋಧಿಸುವುವಲ್ಲದೆ, ಈತನ ಅರ್ಥವನ್ನು ಬೋಧಿಸುವುದಿಲ್ಲವೆಂದು ತಿಳಿಯಬೇಕು. ಒಂದು ಜಟೆಯಲ್ಲಿಯೇ ಐದು ಭಾಗಗಳನ್ನು ಮಾಡಿದರೆ ಅದೇ ಪಂಚಶಿಖೆಯೆನಿಸಿಕೊಳ್ಳುವುದು. ಈ ವಿಷಯವು ವೇದಾಂತಸಾರವೀರಶೈವಚಿಂತಾಮಣಿಯಲ್ಲುಕ್ತವಾಗಿದೆ. ಈತನು ಆ ಗ್ರಂಥವನ್ನು ನೋಡಿ ಭ್ರಾಂತಿಯಿಂದ ದೂರನಾಗಬೇಕು.

ಈತನು ಇದೇ ಪುಟದಲ್ಲಿ—

"ಪ್ರಾಕೃತಕರ್ಮಾಂಗವಾದ ಜುಟ್ಟು ಜನಿವಾರಗಳನ್ನು ಧರಿಸಲು ಆಚಾರ್ಯರು ಪ್ರಾಕೃತರಾಗಿರಲಿಲ್ಲ. ಅಪ್ರಾಕೃತರೂ ಜ್ಞಾನಸಿದ್ಧರೂ ನಿತ್ಯಮುಕ್ತರೂ ಆದ ಆಚಾರ್ಯರಿಗೆ ಪ್ರಾಕೃತಕರ್ಮಾಂಗವಾದ ಜುಟ್ಟು ಜನಿವಾರಗಳನ್ನು ಹೇಳುವದು ಕೇವಲ ನೀಚತನವಲ್ಲದೆ ಬೇರೊಂದಿಲ್ಲ."

ಎಂದು ಬರೆದಿದ್ದಾನೆ. ಮುಂಡಿಯೇ, ಆಚಾರ್ಯರಿಗೆ ಪ್ರಾಕೃತಕರ್ಮಾಂಗ
ವಾದ ಶಿಖಾಸೂತ್ರಗಳನ್ನು ಯಾವ ಗ್ರಂಥಗಳೂ ಹೇಳುವದಿಲ್ಲ. ಆದರೆ
ಅಪ್ರಾಕೃತಶಿಖಾಸೂತ್ರಗಳನ್ನು ಹೇಳುತ್ತವೆ. ಆದುದರಿಂದಲೇ ದೀಕ್ಷಾ
ವಿಧಿಯಲ್ಲಿ—ಪ್ರತಿಯೊಬ್ಬ ಆಚಾರ್ಯರಿಗೆ "ಲಿಂಗಯಜ್ಞೋಪ
ವೀತಿನೇ" ಎಂಬ ವಿಶೇಷಣವು ಕೊಡಲ್ಪಟ್ಟಿದೆ. ಸಾಕ್ಷಾತ್ ಶಿವನಿಗೇನೇ
ಶಾಸ್ತ್ರಕಾರರು ಶಿಖಾಸೂತ್ರಗಳನ್ನು ಹೇಳುವಾಗ, ತತ್ಸ್ವರೂಪರಾದ
ಆಚಾರ್ಯರಿಗೆ ಹೇಳುವುದು ತಪ್ಪಾದೀತೇ? ಮಹಾನ್ಯಾಸಗ್ರಂಥದ
ಲ್ಲುಕ್ತವಾಗಿರುವ ರುದ್ರತ್ರಿಶತೀನಾಮಾವಳಿಯಲ್ಲಿ ಶಿವನಿಗೆ "ಉಪವೀ
ತಿನೇ ನಮಃ" ಎಂದು ಹೇಳಲ್ಪಟ್ಟಿರುವುದು. ಅಲ್ಲದೆ ಇದೇ ಗ್ರಂಥ
ದಲ್ಲುಕ್ತವಾಗಿರುವ ಶಿವಾಷ್ಟೋತ್ತರಸಹಸ್ರನಾಮಾವಳಿಯಲ್ಲಿ ಶಿವನಿಗೆ
"ಶಿಖಿನೇ ನಮಃ" ಎಂದು ಹೇಳಲ್ಪಟ್ಟಿರುವುದು. ಶ್ರೀರುದ್ರದಲ್ಲುಕ್ತ
ವಾಗಿರುವ "ನಮೋ ಹರಿಕೇಶಾಯೋಪವೀತಿನೇ ಪುಷ್ಟಾನಾಂ
ಪತಯೇ ನಮಃ" ಎಂಬ ಮಂತ್ರದಲ್ಲಿ ಶಿವನಿಗೆ "ಉಪವೀತಿನೇ"
ಎಂದು ಹೇಳಲ್ಪಟ್ಟಿರುವುದು. ಸುಪ್ರಸಿದ್ಧನಾದ ಹಂಪೆಯ ಹರೀಶ್ವರ
ಕವಿಯು ತನ್ನಿಂದ ರಚಿಸಲ್ಪಟ್ಟ ಗಿರಿಜಾಕಲ್ಯಾಣವೆಂಬ ಗ್ರಂಥದ ೫ನೆಯ
ಆಶ್ವಾಸದಲ್ಲಿ—

ವಿಲಸತ್ಪದ್ಮಾಸನಂ ಭಾಸುರಭಸಿತವಪುರ್ವಲ್ಕಲಂ ಧ್ಯಾನಮುದ್ರಾಂ।
ಗುಲಿರುದ್ರಾಕ್ಷಮಾಲಾರುಚಿನಳಿನಗುಣವ್ರಾತಯಜ್ಞೋಪವೀತಂ
॥೩೨॥

ಎಂಬೀ ಪದ್ಯದಿಂದ ಶಿವನಿಗೆ ಯಜ್ಞೋಪವೀತವನ್ನು ಹೇಳಿದ್ದಾನೆ.
ಇದೇ ರೀತಿಯಾಗಿ ಅನೇಕ ಜನ ಪ್ರಾಚೀನಕವಿಗಳು ಶಿವನಿಗೆ ಯಜ್ಞೋ
ಪವೀತವನ್ನು ಹೇಳಿದ್ದಾರೆ. ಇವುಗಳನ್ನೆಲ್ಲಾ ಈತನು ಚನ್ನಾಗಿ ಕಣ್ದೆರೆದು
ನೋಡಬೇಕು. ಯಜ್ಞೋಪವೀತ ಶಿಖಾದಿಗಳು ಪರಾತ್ಪರನಾದ ಶಿವ
ನಿಗೆ ಲಾಂಛನಗಳೆಂದು ಸಿದ್ಧವಾಗುತ್ತಿರಲು, ಆ ಅಪ್ರಾಕೃತ ಶಿವಲಾಂಛನ

ಗಳನ್ನು ಶಿವಾಚಾರ್ಯರು ಧರಿಸಬಾರದೆಂದು ಸಾಧಿಸುವುದು ದ್ರೋಹ ವಲ್ಲವೇ? ಈ ಸಂದರ್ಭದಲ್ಲಿ ಈತನು ಒಳ್ಳೇ ಆವೇಶದಿಂದ ನೀಚಶಬ್ದ ವನ್ನು ಪ್ರಯೋಗಿಸಿದ್ದಾನೆ. ಶಾಸ್ತ್ರರೀತಿಯಂತೆ ನಿಜತತ್ತ್ವವನ್ನುಪದೇ ಶಿಸುವುದು ನೀಚತನವೋ, ಶಾಸ್ತ್ರವಿರುದ್ಧವಾಗಿ ಮನಸ್ಸಿಗೆ ಬಂದಂತೆ ಬರೆಯುವುದು ನೀಚತನವೋ ಎನ್ನುವದನ್ನು ಕುಶಲಮತಿಗಳಾದ ವಾಚ ಕರೇ ನಿರ್ಣಯಿಸಬೇಕು. ಅಸ್ತು!

ಈತನು ಇದೇ ಪುಟದಲ್ಲಿ—

"ಪರಮಪೂಜ್ಯರಾದ ಆಚಾರ್ಯರಿಗೆ ಜಟಾಧಾರಣವು ಪ್ರಮಾಣಸಿದ್ಧವಾಗಿದ್ದು ಹಾಗೂ ಶಿಖಾ ಶಬ್ದವು ನಾನಾರ್ಥಬೋಧಕವಾಗಿದ್ದು ಪ್ರಕೃತ "ಏಕಶಿಖಾಯ ಪಂಚಶಿಖಾಯ—ಅಪರಿಮಿತಶಿಖಾಯ" ಎಂಬ ವಾಕ್ಯಗಳಲ್ಲಿರುವ ಏಕಶಿಖಾದಿ ಶಬ್ದಗಳಿಗೆ ಕ್ರಮವಾಗಿ "ಶಿಖಾಶಿಫಾಕೇಕಿಮಾಲ್ಯೋಜ್ವಾಲಾಶಾಖಾಗ್ರಮಾಲಿಷು" ಎಂಬ ಕೋಶವಚನದಂತೆ ಜಟಾಶಾಖೆ (ಶಿಳ್ಳು) ಗಳೆಂದು ಅರ್ಥಮಾಡುವದು ವಿಹಿತವು"

ಎಂದು ಬರೆದಿದ್ದಾನೆ. ಪರಮಪೂಜ್ಯರಾದ ಆಚಾರ್ಯರಿಗೆ ಶಿವಲಾಂಛನ ವೆನಿಸುವ ಜಟಾಧಾರಣವನ್ನು ಯಾರೂ ನಿಷೇಧಿಸುವುದಿಲ್ಲ. ಶಿಖೆಯು ಜಟಾಂತರ್ಗತವಾದುದರಿಂದ ಪ್ರಾಚೀನರು ಶಿವಾಚಾರ್ಯರಿಗೆ ಶಿಖೆಯನ್ನು ಹೇಳಿರುವರಲ್ಲದೆ ಬೇರೆಯಿಲ್ಲ. ಶಿವಾಷ್ಟೋತ್ತರಸಹಸ್ರನಾಮಾವಳಿಯಲ್ಲಿ ಶಿವನಿಗೆ "ತ್ರಿಜಟಿನೇ ನಮಃ" ಎಂದು ಹೇಳಲ್ಪಟ್ಟಿರುವಂತೆ, ಪ್ರಾಚೀ ನರು ಆಚಾರ್ಯರಿಗೆ "ಪಂಚಶಿಖಾಯ" "ಅಪರಿಮಿತಶಿಖಾಯ" "ಶಿಖಾಲಂಬಿತಮಸ್ತಕಸ್ಯ" ಇತ್ಯಾದಿಯಾಗಿ ಹೇಳಿರುವರು. ಈ ರಹಸ್ಯಾರ್ಥವನ್ನು ತಿಳಿದು ಈತನು ಇನ್ನಾದರೂ ವಕ್ರಮಾರ್ಗದಿಂದ ದೂರನಾಗಿ ಶಿವನ ಕೃಪೆಗೆ ಪಾತ್ರನಾಗುವುದು ಒಳ್ಳೆಯದೆಂದು ಪ್ರೇಮ ಪೂರ್ವಕವಾಗಿ ಸೂಚಿಸುತ್ತೇವೆ. ಈ ಸಂದರ್ಭದಲ್ಲಿ ಈತನು ತೋರಿಸಿ ರುವ ಅಭಿಪ್ರಾಯವು ಎಷ್ಟುಮಾತ್ರವೂ ವಿಹಿತವಾದುದಲ್ಲ.

ಈತನು ೬೫ ನೆಯ ಪುಟದಲ್ಲಿ—

" ಲಿಂಗಯಜ್ಞೋಪವೀತಿನೇ " ಎಂಬ ವಾಕ್ಯದಿಂದ ಲಿಂಗರೂಪವಾದ ಯಜ್ಞೋಪವೀತವೆಂದು ಅರ್ಥವಾಗುವದಲ್ಲದೆ, ತಂತುಮಯಯಜ್ಞೋಪವೀತವೆಂದು ಅರ್ಥವಾಗುವದಿಲ್ಲ. ಒಂದು ಪಕ್ಷದಲ್ಲಿ ಶಿಖಾವಾದಿಗಳು " ಲಿಂಗಂಚಯಜ್ಞೋಪವೀತಂಚ " ಎಂಬ ದ್ವಂದ್ವಸಮಾಸದಿಂದ ಲಿಂಗವು ಹಾಗೂ ತಂತುಮಯಯಜ್ಞೋಪವೀತವು ಎಂದು ಅರ್ಥವಾಗುವದರಿಂದ ತಂತುಮಯಯಜ್ಞೋಪವೀತವು ಆಚಾರ್ಯರಿಗೆ ಗ್ರಾಹ್ಯವೆಂದು ಹೇಳಬಹುದು. ಆದರೂ ವಿನಿಗಮನಾವಿರಹೇಣ " ಲಿಂಗಮೇವಯಜ್ಞೋಪವೀತಂ " ಎಂದು ಕರ್ಮಧಾರಯಸಮಾಸವನ್ನು ಅಂಗೀಕರಿಸಿ ಲಿಂಗರೂಪವಾದ ಯಜ್ಞೋಪವೀತವೆಂದು ಅರ್ಥವನ್ನು ಮಾಡಲಿಕ್ಕೆ ಅವಕಾಶವಿದೆ. " ನವತಂತುಮಯಂದೂಷ್ಯಂ " ಇತ್ಯಾದಿ ಪೂರ್ವೋಕ್ತ ಶಿವಾಗಮವಚನದಿಂದ ವೀರಶೈವರಿಗೆ ತಂತುಮಯವಾದ ಯಜ್ಞೋಪವೀತವು ನಿಷೇಧಿಸಲ್ಪಟ್ಟಿರುವದರಿಂದ " ಲಿಂಗಂಚಯಜ್ಞೋಪವೀತಂಚ " ಎಂದು ದ್ವಂದ್ವಸಮಾಸವನ್ನಾಶ್ರಯಿಸಿ, ಲಿಂಗವೂ ಹಾಗೂ ತಂತುಮಯಯಜ್ಞೋಪವೀತವೂ ಎಂದು ಅರ್ಥವನ್ನು ಮಾಡಲು ಅವಕಾಶವಿರುವದಿಲ್ಲ. ಆದುದರಿಂದ ಲಿಂಗಮೇವಯಜ್ಞೋಪವೀತಂ ಎಂದು ಕರ್ಮಧಾರಯಸಮಾಸದಿಂದ ಲಿಂಗರೂಪವಾದ ಯಜ್ಞೋಪವೀತವೆಂದು ಅರ್ಥವನ್ನು ಮಾಡುವದು ನಿರ್ದೋಷವೆನಿಸುವದು."

ಎಂದು ಬರೆದಿದ್ದಾನೆ. " ಲಿಂಗಯಜ್ಞೋಪತಿನೇ "ಎಂಬ ವಾಕ್ಯಘಟಕವಾದ ಲಿಂಗಯಜ್ಞೋಪವೀತಶಬ್ದಕ್ಕೆ ಲಿಂಗರೂಪವಾದ ಯಜ್ಞೋಪವೀತವೆಂದು ಅರ್ಥಮಾಡಲಿಕ್ಕೆ ಸರ್ವಥಾ ಅವಕಾಶವಿಲ್ಲ. ಲಿಂಗವೇ ಯಜ್ಞೋಪವೀತವಾದ ಪಕ್ಷದಲ್ಲಿ " ಲಿಂಗಿನೇ " ಎಂದಾಗಲಿ, ಅಥವಾ " ಯಜ್ಞೋಪವೀತಿನೇ " ಎಂದಾಗಲಿ ಹೇಳಬೇಕಾಗಿತ್ತು. ಲೋಕದಲ್ಲಿ ಒಂದೇ ಅರ್ಥವನ್ನು ಬೋಧಿಸುವ ಎರಡು ಶಬ್ದಗಳನ್ನು ಕೂಡಿಸಿ " ಘಟಕಲಶಮಾನಯ " ಎಂದು ಯಾರೂ ಪ್ರಯೋಗಿಸುವದಿಲ್ಲ. ಕಿಂತು " ಘಟಮಾನಯ " ಅಥವಾ " ಕಲಶಮಾನಯ " ಎಂದು ಪ್ರಯೋಗಿಸುತ್ತಾರೆಂಬುದೇ ವಿನಿಗಮನೆಯೆಂದು ತಿಳಿಯಬೇಕು. ಈತನು " ಲಿಂಗಯಜ್ಞೋಪವೀತಿನೇ " ಎಂಬಲ್ಲಿ " ಲಿಂಗಮೇವ ಯಜ್ಞೋಪವೀತಂ"

ಎಂದು ಕರ್ಮಧಾರಯ ಸಮಾಸವನ್ನು ಮಾಡಬೇಕೆಂದು ಬರೆದಿದ್ದಾನೆ. ಹೀಗೆ ವ್ಯಾಕರಣಜ್ಞಾನ ಮತ್ತು ಅರ್ಥಜ್ಞಾನವಿಲ್ಲದೆ ಬರೆದಿರುವ ಈತನ ಬುದ್ಧಿಯು ಎಷ್ಟು ಸೂಕ್ಷ್ಮವಿರಬಹುದೆನ್ನುವುದನ್ನು ವಾಚಕರೇ ಊಹಿಸಬೇಕಾಗಿದೆ.

"ಮೋಹಮಹಾವ್ಯಾಧಿಮಿಮಂ ದೇವ ಚಿಕಿತ್ಸಸ್ವ" "ಛಿಂದಿ ಮಮಾಜ್ಞಾನತಿಮಿರಂ" ಇತ್ಯಾದಿ ವಾಕ್ಯಗಳಿಗೆ "ಮೋಹಮೇವ ಮಹಾವ್ಯಾಧಿಃ" "ಅಜ್ಞಾನಮೇವ ತಿಮಿರಂ" ಎಂದು ಸಮಾಸಮಾಡುವಂತೆ, "ಲಿಂಗಮೇವ ಯಜ್ಞೋಪವೀತಂ" ಎಂದು ಸಮಾಸವನ್ನು ಮಾಡಲಿಕ್ಕೆ ಬರುವುದಿಲ್ಲ. ಯಾಕಂದರೆ—ಅಲ್ಲಿ ರೂಪಕವು ಮಾಡಲ್ಪಟ್ಟದೆ. ವಸ್ತುತಃ ಅಜ್ಞಾನವೇ ತಿಮಿರಪದಾರ್ಥವಲ್ಲ; ಮೋಹವೇ ಮಹಾವ್ಯಾಧಿಯಲ್ಲ. ಶುಕ್ತಿಯಲ್ಲಿ ರಜತತ್ವದ ಆರೋಪದಂತೆ ಅಜ್ಞಾನದಲ್ಲಿ ತಿಮಿರತ್ವದ, ಮೋಹದಲ್ಲಿ ಮಹಾವ್ಯಾಧಿತ್ವದ ಆರೋಪವಾಗಿದೆ. ಇದರಂತೆ ಲಿಂಗದಲ್ಲಿ ಯಜ್ಞೋಪವೀತತ್ವದ ಆರೋಪವನ್ನೊಪ್ಪಿದರೆ, ಶುಕ್ತಿಯು ವಸ್ತುತಃ ರಜತವಲ್ಲವೆನ್ನುವಂತೆ ಲಿಂಗವು ವಸ್ತುತಃ ಯಜ್ಞೋಪವೀತವಲ್ಲ; ಕಿಂತು ಅದೊಂದು ಲಿಂಗಕ್ಕೆ ಭಿನ್ನವಾದ ತಂತುಮಯ ಯಜ್ಞೋಪವೀತವು ಬೇರೆಯಾಗಿಯೇ ಇರುವುದೆಂದು ಈತನೇ ಒಪ್ಪಿಕೊಂಡಂತಾಗುವುದು. ಈತನ ಸಮಾಸದಿಂದಲೇ ಆಚಾರ್ಯರಿಗೆ ಲಿಂಗ ಯಜ್ಞೋಪವೀತಗಳು ಸಿದ್ಧವಾಗುವುವು. ಲಿಂಗ ಶಬ್ದಾರ್ಥವೇ ಯಜ್ಞೋಪವೀತವು, ಯಜ್ಞೋಪವೀತ ಶಬ್ದಾರ್ಥವೇ ಲಿಂಗವು ಎನ್ನುವುದಾದರೆ, ಘಟಕಲಶ ಶಬ್ದಗಳಂತೆ ಲಿಂಗ ಯಜ್ಞೋಪವೀತ ಶಬ್ದಗಳು ಪರ್ಯಾಯನಾಮಗಳಾಗುವುದರಿಂದ, ಘಟಕಲಶ ಶಬ್ದದ್ವಯಪ್ರಯೋಗಕ್ಕೆ ವೈಯರ್ಥ್ಯವುಂಟಾಗುವಂತೆ ಲಿಂಗಯಜ್ಞೋಪವೀತ ಶಬ್ದದ್ವಯಪ್ರಯೋಗಕ್ಕೆ ವೈಯರ್ಥ್ಯಾಪತ್ತಿಯು ಬರುವುದರಿಂದ, ಅವುಗಳಿಗೆ ಪರ್ಯಾಯನಾಮಗಳೆಂದು ಹೇಳದೆ ಬೇರೆ ಬೇರೆ ನಾಮಗಳೆಂದು ಹೇಳಬೇಕು. ಆದುದರಿಂದ

"ಲಿಂಗಯಜ್ಞೋಪವೀತಿನೇ" ಎಂಬಲ್ಲಿ ಲಿಂಗವೇ ಬೇರೆ, ಯಜ್ಞೋಪವೀತವೇ ಬೇರೆ, ಎಂದು ತಿಳಿದುಕೊಂಡು ಈತನು ಪೂರ್ವಾಚಾರ್ಯರ ಕೃಪೆಗೆ ಪಾತ್ರನಾಗಬೇಕು. "ನವತಂತುಮಯಂ" ಎಂಬ ಈತನ ಅಮಂಗಲಶ್ಲೋಕದ ವಿಷಯವನ್ನು ೭೨—೭೩ ನೆಯ ಪುಟಗಳಲ್ಲಿ ಬರೆದಿದ್ದೇವೆ. ಅಲ್ಲಿಯೇ ನೋಡಿಕೊಳ್ಳಬೇಕು.

ಈತನು ೬೬ ನೆಯ ಪುಟದಲ್ಲಿ—

"ದೀಕ್ಷಾವಿಧಿಯಲ್ಲಿ ಪ್ರಥಮತಃ "ಉಷ್ಣೇನವಾಯು ಉದಕೇನೇಹ್ಯದಿತಿ ಕೇಶಾನ್ವಪತು" ಇತ್ಯಾದಿ ಮಂತ್ರದಿಂದ ದೀಕ್ಷಾಕಾಲದಲ್ಲಿ ವಟುವಿನ ಕೇಶವಪನವನ್ನು ಮಾಡಬೇಕೆಂದು ಹೇಳಿ ಅನಂತರದಲ್ಲಿ "ಬದ್ಧಶಿಖಂಕುಮಾರಂ" ಎಂಬ ವಾಕ್ಯದಿಂದ ಕುಮಾರನು ಶಿಖಾಬದ್ಧನಾಗಿರಬೇಕೆಂದು ಹೇಳುವದು ಕೇವಲ ವಿರೋಧವು."

ಎಂದು ಬರೆದಿದ್ದಾನೆ. ಹೀಗೆ ಬರೆದಿರುವುದನ್ನು ನೋಡಿದರೆ ಈತನು ದೀಕ್ಷಾವಿಧಿಯನ್ನೇ ಕಣ್ದೆರೆದು ನೋಡಿಲ್ಲವೆಂದು ಸ್ಪಷ್ಟವಾಗುತ್ತದೆ. ಯಾಕಂದರೆ—"ಉಷ್ಣೇನ ವಾಯು ಉದಕೇನ ಹ್ಯದಿತಿ ಕೇಶಾನ್ವಪತು" ಎಂಬೀ ಮಂತ್ರದಿಂದ ದೀಕ್ಷಾಕಾಲದಲ್ಲಿ ವಟುವಿಗೆ ಕೇಶವಪನವು ಹೇಳಲ್ಪಟ್ಟಿಲ್ಲ. ಈ ಮಂತ್ರದಿಂದ ವಟುವಿನ ಮಸ್ತಕಕ್ಕೆ ಜಲಸಮ್ಮಾರ್ಜನವು ಹೇಳಲ್ಪಟ್ಟಿದೆ. ದೀಕ್ಷಾವಿಧಿಯು "ಯೇನಾವಪತ್ಸವಿತಾ" ಎಂಬ ಮಂತ್ರದಿಂದ ಮಸ್ತಕದ ಪೂರ್ವದಿಕ್ಕಿನ ಕೇಶಗಳನ್ನೂ "ಯೇನ ಪೂಷಾ" ಎಂಬ ಮಂತ್ರದಿಂದ ದಕ್ಷಿಣದಿಕ್ಕಿನ ಕೇಶಗಳನ್ನೂ, "ಯೇನ ಭೂಯಃ" ಎಂಬ ಮಂತ್ರದಿಂದ ಪಶ್ಚಿಮದಿಕ್ಕಿನ ಕೇಶಗಳನ್ನೂ, "ಯೇನಪೂಷಾ" ಎಂಬ ಮಂತ್ರದಿಂದ ಉತ್ತರದಿಕ್ಕಿನ ಕೇಶಗಳನ್ನೂ ವಪನಮಾಡಿಸಿ, ಮಧ್ಯದಲ್ಲಿ ಶಿಖೆಯನ್ನಿಡಿಸಬೇಕೆಂದು ಹೇಳಿ, ಆಮೇಲೆ ಯಜಮಾನನು "ಬದ್ಧಶಿಖಂ ಕುಮಾರಂ ಸಮ್ಯಗೀಕ್ಷೇತ" ಬದ್ಧಶಿಖೆಯುಳ್ಳ ಕುಮಾರನನ್ನು ಚನ್ನಾಗಿ ನೋಡಬೇಕೆಂದು ಸ್ಪಷ್ಟವಾಗಿ ಹೇಳಿದ್ದರೂ, ಈತನು ಇದನ್ನು ತಿಳಿದೂ ತಿಳಿದೂ ಜನರನ್ನು ವಂಚಿಸುವ

ದಕ್ಕಾಗಿ ದೀಕ್ಷಾವಿಧಿಯಲ್ಲಿ ಪರಸ್ಪರವಿರೋಧವಿದೆಯೆಂದು ಬರೆದಿರುವುದು ಕೇವಲ ವಂಚಕತನವೂ ಧೂರ್ತತನವೂ ಆಗಿದೆ. ಈ ರೀತಿಯಾಗಿ ಸುಳ್ಳು ಬರೆದು ಜನರನ್ನು ವಂಚಿಸುವುದಕ್ಕಿಂತಲೂ ಶಾಸ್ತ್ರೀಯಮಾರ್ಗವನ್ನು ಹಿಡಿದು ಲೋಕದ ಪ್ರೀತಿಗೂ ಶಿವನ ಕೃಪೆಗೂ ಪಾತ್ರನಾಗುವುದು ಈತನಿಗೆ ಭೂಷಣವಲ್ಲವೇ ?

ಈತನು ಇದೇ ಪುಟದಲ್ಲಿ—

"ವೀರಶೈವರಿಗೆ ದೀಕ್ಷಾಕಾಲದಲ್ಲಿ ಶಿಖಾದಿಗಳಿರತಕೂಡದೆಂದು ಶಿವಾಗಮಗಳ ಅಭಿಪ್ರಾಯವಿದೆ. ಅಂತೆಯೇ "ದೀಕ್ಷಾಕಾಲೇ ಬಾಲಕಾನಾಂ ತ್ವಥತಾರುಣ್ಯಶಾಲಿನಾಂ । ವೃದ್ಧಾನಾಂ ಮಧ್ಯಮಾನಾಂ ಚ ಸರ್ವಕೇಶವಿಮುಂಡನಂ ॥ ತ್ಯಕ್ತ್ವಾಧಃಕೇಶಸಂವೃಂದಂ ನಖಶ್ಮಶ್ರೂಣಿ ಭೇದಯೇತ್ । ನಖೀ ಶಿಖೀ ಶ್ಮಶ್ರುವಾಂಶ್ಚ ಜಟೀ ದೀಕ್ಷಾಂ ನವಾಹಯೇತ್ ॥ ಈ ಪ್ರಕಾರವಾಗಿ ವಾತುಲಾಗಮವು ದೀಕ್ಷಾಕಾಲದಲ್ಲಿ ಶಿಖಾದಿ ಸಕಲ ಕೇಶಗಳನ್ನು ವಪನಮಾಡಬೇಕೆಂದು ಸಾರುತ್ತದೆ."

ಎಂದು ಬರೆದಿದ್ದಾನೆ. ಈ ವಿಷಯವನ್ನು ವಿಮರ್ಶಿಸೋಣ ! ಈತನು ಇಲ್ಲಿ ತೆಗೆದುಕೊಂಡಿರುವ ೨ ಶ್ಲೋಕಗಳು ವಾತುಲಾಗಮದ ಶ್ಲೋಕಗಳೆಂದು ಬರೆದಿರುತ್ತಾನೆ. ವಾತುಲಾಗಮವು ಮುದ್ರಿತವಾಗಿದೆ. ಅಲ್ಲಿ ಪಂಜು ಹಚ್ಚಿ ಹುಡುಕಿದರೂ ಈ ಶ್ಲೋಕಗಳು ಸಿಗುವುದಿಲ್ಲ. ಇವು ವಾತುಲಾಗಮಶ್ಲೋಕಗಳೆಂದು ಬರೆಯುವುದಕ್ಕಿಂತಲೂ ಬೌದ್ಧಾಗಮದ ಶ್ಲೋಕಗಳೆಂದು ಬರೆದಿದ್ದರೆ ಬಹು ಚನ್ನಾಗಿತ್ತು. ಯಾಕಂದರೆ—ಈ ಶ್ಲೋಕಗಳಲ್ಲಿ ಬೌದ್ಧಸನ್ಯಾಸಿಗಳ ದೀಕ್ಷಾವಿಷಯವೇ ಹೊರಡುತ್ತದೆ. ಈ ಶ್ಲೋಕಗಳನ್ನು ಬೌದ್ಧಸನ್ಯಾಸಿಗಳ ರಕ್ತಸಂಬಂಧವುಳ್ಳ ಯಾವನೋ ಒಬ್ಬನು ರಚಿಸಿರುವಂತೆ ತೋರುತ್ತದೆ. ಬಾಲಕರು, ತರುಣರು, ಮಧ್ಯವಯಸ್ಸಿನವರು, ವೃದ್ಧರು ದೀಕ್ಷಾಕಾಲದಲ್ಲಿ ಎಲ್ಲಾ ಕೇಶಗಳನ್ನು ಮುಂಡನ ಮಾಡಿಸಿಕೊಳ್ಳಬೇಕೆಂದೂ, ಅಧಃಕೇಶ (ಗುದದಲ್ಲಿರುವ ಕೂದಲು ಮತ್ತು ಲಿಂಗಸ್ಥಾನದ ಹತ್ತರವಿರುವ ಕೂದಲು ಅರ್ಥಾತ್ ಶಪ್ಪ) ಗಳನ್ನು

ಮಾತ್ರ ಬೋಳಿಸಬಾರದೆಂದೂ, ಉಗುರುಳ್ಳವನೂ, ಶಿಖೆಯುಳ್ಳವನೂ, ಜಡೆಯುಳ್ಳವನೂ, ಗಡ್ಡಮೀಸೆಗಳುಳ್ಳವನೂ ದೀಕ್ಷೆಯನ್ನು ತೆಗೆದುಕೊಳ್ಳಬಾರದೆಂದೂ ಈ ಶ್ಲೋಕಗಳ ಅಭಿಪ್ರಾಯವಿರುತ್ತದೆ. ಇಂಥ ಅಮಂಗಲಾರ್ಥವುಳ್ಳ ಶ್ಲೋಕಗಳನ್ನು ಶಿವಾಗಮಗಳಿಗೆ ಸಂಬಂಧಿಸಿರುವುದು ಮಹಾದ್ರೋಹವಲ್ಲವೇ? ಈ ಶ್ಲೋಕಗಳಂತೆ ಹೋದರೆ ದೀಕ್ಷೆಯಾಗುವವರೆಲ್ಲರೂ ಗುದದಲ್ಲಿರುವ ಕೇಶ ಮತ್ತು ಶಷ್ಪ ಇವೆರಡನ್ನು ಬಿಟ್ಟು, ಕಾಲು, ಕೈ, ಎದೆ ಮೊದಲಾದ ಎಲ್ಲಾ ಅವಯವಗಳಲ್ಲಿರುವ ಕೂದಲುಗಳನ್ನು ಬೋಳಿಸಿಕೊಂಡು ಬೌದ್ಧಸನ್ಯಾಸಿಗಳಂತೆ ದೀಕ್ಷೆಯನ್ನು ತೆಗೆದುಕೊಳ್ಳಬೇಕಾಗುವುದು. ಈ ಲೋಕದಲ್ಲಿ ಈ ತರಹದ ದೀಕ್ಷೆಯನ್ನು ಯಾರಾದರೂ ತೆಗೆದುಕೊಳ್ಳುವರೋ? ಇದು ಈ ಲೋಕದ ದೀಕ್ಷೆಯಲ್ಲ; ಈ ದೀಕ್ಷೆಯ ಲೋಕವೇ ಬೇರೆಯಿರುತ್ತದೆ. ಮುಂಡಿಗಳೇ! ಈ ಶ್ಲೋಕಾಭಿಪ್ರಾಯದಂತೆ ಬೌದ್ಧಸನ್ಯಾಸಿಗಳ ದೀಕ್ಷೆಗೆ ಸದೃಶವಾದ ದೀಕ್ಷೆಯನ್ನು ತೆಗೆದುಕೊಳ್ಳಲು ಸಿದ್ಧರಿರುವಿರಾ? ಹೀಗೆ ಪೂರ್ವಾಪರ ಅರ್ಥವಿಚಾರಮಾಡದೆ ಇಂಥ ದುಷ್ಟಶ್ಲೋಕಗಳನ್ನುದಾಹರಿಸಿ ಲೋಕದಲ್ಲಿ ಛೀಮಾರಿಯಾಗುವುದಕ್ಕಿಂತಲೂ ಮೌನವಾಗಿರುವುದು ಭೂಷಣವಲ್ಲವೇ? ಈ ಶ್ಲೋಕಗಳಲ್ಲಿರುವ "ವಾಹಯೇತ್-ಭೇಯೇತ್" ಎಂಬ ಕ್ರಿಯಾಪದಗಳು ವ್ಯಾಕರಣಕ್ಕೆ ವಿರುದ್ಧಗಳಾಗಿ ವಿಪರೀತಾರ್ಥವನ್ನು ಕೊಡುತ್ತವೆ. ಈ ವಿಷಯವು ಪ್ರಥಮಪುಸ್ತಕವನ್ನು ಓದುವ ಹುಡುಗರಿಗೂ ಸಹ ಗೊತ್ತಾಗುತ್ತದೆ. ಹೀಗಿದ್ದರೂ ಈ ಶ್ಲೋಕಗಳನ್ನು ಪ್ರಮಾಣವನ್ನಾಗಿ ತೆಗೆದುಕೊಂಡಿರುವುದನ್ನು ನೋಡಿದರೆ ಇಂಥ ಘನಪಂಡಿತರೇ ನಮ್ಮ ಭರತಭೂಮಿಯಲ್ಲಿ ಜನ್ಮವೆತ್ತುವುದು ದುರ್ಲಭವೆಂದು ಹೇಳಬೇಕಾಗುತ್ತದೆ. ಅಹಾ! ಈತನ ಜನ್ಮವೇ ಸಾರ್ಥಕ! ಈತನೇ ಭಾಗ್ಯಶಾಲಿ! ಭಾಗ್ಯಶಾಲಿ! ಇಂಥ ಭಾಗ್ಯವು ಬೇರೊಬ್ಬರಿಗೆ ದೊರಕೀತೇ? ಅಸ್ತು!

"ಗರ್ಭಾಷ್ಟಮೇ ಕೃತಾ ದೀಕ್ಷಾ ಮುಖ್ಯಾ ಸಾ ಷೋಢಶಾವಧಿ।
ಗೌಣೀ ತದೂರ್ಧ್ವಮಥವಾ ವೀರಶೈವಾನ್ವಯಾಯಿನಾಂ ॥
ಇತ್ಯಾದಿ ಶಿವಾಗಮವಾಕ್ಯಬಲಾದ್ಬಾಲತ್ವಏವ ದೀಕ್ಷಾ ಕರ್ತವ್ಯೇತಿ ಸಿದ್ಧಂ" ಎಂದು ವೀರಶೈವಸದಾಚಾರಗ್ರಂಥದಲ್ಲಿ ಶಿವಾಗಮಗಳ ಅಭಿಪ್ರಾಯಕ್ಕನುಸಾರವಾಗಿ ೮ ನೆಯ ವರ್ಷದಲ್ಲಿಯೇ ಅರ್ಥಾತ್ ಬಾಲ್ಯದಲ್ಲಿಯೇ ದೀಕ್ಷೆಯನ್ನು ಮಾಡುವುದು ಮುಖ್ಯವೆಂದು ಸಿದ್ಧವಾಗುತ್ತದೆ. ಇದೇ ಸಂಪ್ರದಾಯವು ವೀರಶೈವಬ್ರಾಹ್ಮಣರಲ್ಲಿ ಅನಾದಿಕಾಲದಿಂದ ರೂಡಿಯಲ್ಲಿ ಬಂದಿರುತ್ತದೆ. ಈತನ ಶ್ಲೋಕಾಭಿಪ್ರಾಯವು ಶಿವಾಗಮಗಳಿಗೆ ಅತ್ಯಂತ ವಿರುದ್ಧವಿರುವುದರಿಂದ ಇದು ಬೌದ್ಧಾಗಮಕ್ಕೆ ಸಂಬಂಧಪಟ್ಟದೆಂದು ಘಂಟಾಘೋಷವಾಗಿ ಹೇಳಬೇಕಾಗುತ್ತದೆ.

ಈತನು ೬೭ ನೆಯ ಪುಟದಲ್ಲಿ—

"ಪರಿತ್ಯಜ್ಯ ಗುರುರ್ಗೌರಿ ದೀಕ್ಷಾಂ ಪ್ರಾಕೃತವರ್ತಿನೀಂ । ಶಿವಸೂತ್ರಾನ್ವಿತಾಂ ಕಲ್ಪಾಂ ವೀರಾಗಮಸಮನ್ವಿತಾಂ ॥ ಯಃ ಕರೋತಿ ಧ್ರುವಂ ಗೌರಿ ಮಮ ಸಾಯುಜ್ಯಮಾಪ್ನುಯಾತ್ ॥

ಎಂಬ ಶ್ಲೋಕವನ್ನು ಆಗಮಶ್ಲೋಕವೆಂದು ಉದಾಹರಿಸಿದ್ದಾನೆ. ಈ ಶ್ಲೋಕವು ಆಗಮಶ್ಲೋಕವೇ ಅಲ್ಲ. ಒಂದುಪಕ್ಷ ಈತನಂತೆ ಇದು ಆಗಮಶ್ಲೋಕವೆಂದರೂ ಇದರಿಂದ ಶಿಖಾವಾದಿಗಳ ಸಿದ್ಧಾಂತಕ್ಕೆ ಯಾವ ಚ್ಯುತಿಯೂ ಇರುವುದಿಲ್ಲ. ಈ ಶ್ಲೋಕದಿಂದ ಗುರುವಾದವನು ಪ್ರಾಕೃತದೀಕ್ಷೆಯನ್ನು ಬಿಟ್ಟು ಅಪ್ರಾಕೃತದೀಕ್ಷೆಯನ್ನು ಮಾಡಬೇಕೆಂದೂ, ಹೀಗೆ ದೀಕ್ಷೆಮಾಡಿದರೆ ದೀಕ್ಷಾಮಾಡಿದ ಗುರುವು ಶಿವಸಾಯುಜ್ಯವನ್ನು ಹೊಂದುವನೆಂದೂ ಸಿದ್ಧವಾಗುತ್ತದೆ. ಆದರೆ ದೀಕ್ಷೆಮಾಡಿಸಿಕೊಂಡ ಶಿಷ್ಯನಿಗೆ ಯಾವ ಗತಿಯಾಗುವುದೋ ತಿಳಿಯದಾಗಿದೆ. ಇಂಥ ಅಮಂಗಲ ಹುಡುಗಾಟಿಕೆಯ ಶ್ಲೋಕವನ್ನು ಬರೆದಿರುವುದರಿಂದ ಈತನಿಗೆ ಯಾವ ಪುರುಷಾರ್ಥವು ದೊರಯಿತೋ ತಿಳಿಯದಾಗಿದೆ.

ಈತನು ಇದೇ ಪುಟದಲ್ಲಿ—

"ಪ್ರಾಕೃತೋಪನಯನಸಂಸ್ಕಾರದಲ್ಲಾದರೂ ಬ್ರಾಹ್ಮಣನಿಗೆ ಮುಂಡನವು, ಕ್ಷತ್ರಿಯನಿಗೆ ಜಡೆಯು, ವೈಶ್ಯನಿಗೆ ಶಿಖೆಯು ಮಂಗಲಕರವೆಂದು ಗೌತಮಾದಿಗಳು "ಸವಕ್ಕಲಾಮೂರ್ಧಲಲಾಟನಾಸಾಗ್ರಪ್ರಮಾಣಾಃ | ಮುಂಡಜಟಿಲಶಿಖಾಜಟಾಶ್ಚ" ಎಂಬ ವಚನದಿಂದ ಸ್ಪಷ್ಟವಾಗಿ ಹೇಳಿರುವರು. ಆದ್ದರಿಂದ ಬ್ರಾಹ್ಮಣೋತ್ತಮನಾದ ವೀರಶೈವಕುಮಾರನಿಗೆ ದೀಕ್ಷಾಕಾಲದಲ್ಲಿ ಶಿಖೆಯಿರಬೇಕೆಂಬುದು ಅತ್ಯಂತ ಹೇಯವಾದ ಮಾತಾಗಿದೆ. ಅದರಿಂದ "ಬದ್ಧಶಿಖಂ ಕುಮಾರಂ" ಎಂಬ ವಾಕ್ಯವು ಕೇವಲ ಕಲ್ಪಿತವಾದುದೆಂದು ಸ್ಥಿರವಾಗುತ್ತದೆ."

ಎಂದು ಬರೆದಿದ್ದಾನೆ. ಈತನು ಬರೆದಿರುವಂತೆ ಯಾವ ಮತದ ಬ್ರಾಹ್ಮಣಾದಿಗಳಲ್ಲಿಯೂ ಈ ಪದ್ಧತಿಯು ಇರುವುದಿಲ್ಲ. "ಶಿಖಾಜಟೋ ವಾ ವಾಪಯೇದಿತರಾನ್" ಎಂಬ ಆಪಸ್ತಂಬಸೂತ್ರದಿಂದಲೂ, "ಶಿಖಾಮೇವ ಜಟಾಂ ಕೃತ್ವಾ ಇತರಾನ್ ಕೇಶಾನ್ ವಾಪಯೇನ್ನಾಪಿತೇನ" ಎಂದಿರುವ ಈ ಸೂತ್ರದ ವ್ಯಾಖ್ಯಾನದಿಂದಲೂ ಉಪನಯನಕಾಲದಲ್ಲಿ ಶಿಖಾಧಾರಣವು ಸಿದ್ಧಿಸುತ್ತದೆ. ಹೀಗಿದ್ದರೂ ಈತನು ಗೌತಮಾದಿಗಳು "ಮುಂಡಜಟಿಲಶಿಖಾಜಟಾಶ್ಚ" ಎಂದು ಹೇಳಿರುವರೆಂದು ಬರೆದಿರುತ್ತಾನೆ. ಇದು ಯಾವ ಗ್ರಂಥದ ವಾಕ್ಯವೆನ್ನುವುದನ್ನು ಬರೆದಿಲ್ಲ. ಗೌತಮಾದಿಗಳು ಎಂದು ಆದಿಪದವನ್ನು ಜೋಡಿಸಿರುವುದರಿಂದ ಈ ವಿಷಯವನ್ನು ಇನ್ನೂ ಅನೇಕ ಋಷಿಗಳು ಹೇಳಿರುವರೆಂದು ಅರ್ಥವಾಗುತ್ತದೆ. ಹೀಗೆ ಮನಸ್ಸಿಗೆ ಬಂದಂತೆ ಬರೆದರೆ ಜನರು ನಗಲಿಕ್ಕಿಲ್ಲವೇ? ಒಂದೇ ವಾಕ್ಯದಲ್ಲಿ ಜಟಿಲ ಮತ್ತು ಜಟಾ ಎಂದು ಶಬ್ದಗಳಿವೆ. ಇದಕ್ಕೆ ಈತನು ಯಾವ ಅರ್ಥವನ್ನು ಮಾಡುವನೋ ತಿಳಿಯದಾಗಿದೆ. ಗೌತಮರು ಹೀಗೆ ಹುಚ್ಚರಂತೆ ಎಂದಾದರೂ ಬರೆಯಬಹುದೋ? ಈತನು ೭೪ನೆಯ ಪುಟದಲ್ಲಿ "ಮಧ್ಯಶಿಖಾವರ್ಜಂ" ಎಂಬ ಶ್ರುತಿಯಿಂದ ಮಸ್ತಕಮಧ್ಯದಲ್ಲಿ ಶಿಖೆಯನ್ನಿಟ್ಟು ಉಪನಯನಮಾಡಬೇಕೆಂದು ಬರೆದಿರು

ತ್ತಾನೆ. ಈಗ ತನ್ನ ವಾಕ್ಯಕ್ಕೆ ವಿರೋಧವಾಗಿ ಉಪನಯನಕಾಲದಲ್ಲಿ ಪ್ರಾಕೃತಬ್ರಾಹ್ಮಣನಿಗೆ ಮುಂಡನವನ್ನು ಹೇಳುತ್ತಾನೆ. ಹೀಗೆ ಹುಚ್ಚರಂತೆ ಪರಸ್ಪರ ವಿರೋಧವಾಗಿ ಹೇಳುವ ಈತನ ಮಾತು ಯಾವುದು ನಿಜವೆಂದು ತಿಳಿಯಬೇಕು? ಆದುದರಿಂದ ಬುದ್ಧಿಯು ಸ್ವಾಧೀನವಿಲ್ಲದೆ ಹೀಗೆ ಬರೆದಿರುವುದು ಅಪ್ರಮಾಣವೂ ತುಚ್ಛವೂ ಆಗಿರುವುದಲ್ಲದೆ ಸಾಧುವಲ್ಲವೆಂದು ತಿಳಿಯಬೇಕು. ಪ್ರಾಕೃತಾಪ್ರಾಕೃತಬ್ರಾಹ್ಮಣವಟುಗಳ ಉಪನಯನದಲ್ಲಿ ಶಿಖಾಸಹಿತಮುಂಡನದ ಸಂಪ್ರದಾಯವು ಸೃಷ್ಟ್ಯಾದಿಯಿಂದಲೂ ಬಂದಿಲ್ಲ. ಈತನ ಕಾಲದಲ್ಲಿ ಬರಬೇಕಾಗಿದೆ. ಈ ವಿಷಯವನ್ನು ಪರಮತೀಯರ ಮುಂದಿಟ್ಟರೆ ಅವರು ಈತನಿಗೆ ಜನ್ಮಜನ್ಮಾಂತರದಲ್ಲಿಯೂ ಸ್ಮರಿಸತಕ್ಕ ಪದವಿಯನ್ನು ಕೊಡದೆ ಇರಲಾರರು. ಅಸ್ತು! ಪೂರ್ವಾಚಾರ್ಯರಿಂದ ರಚಿಸಲ್ಪಟ್ಟ ದೀಕ್ಷಾವಿಧಿಯಲ್ಲಿ ಹೇಳಿರುವ "ಬದ್ಧಶಿಖಂ ಕುಮಾರಂ" ಎಂಬ ವಾಕ್ಯವು ಕಲ್ಪಿತವೆಂದು ಹೇಳುವುದು ಹುಚ್ಚರ ಮಾತಿಗೆ ಸರಿಯಾಗಿದೆ.

ಈತನು ಇದೇ ಪುಟದಲ್ಲಿ—

"ಅಥವಾ ಯಥಾಮೂಲವಾದುದೆಂಬ ಪಕ್ಷದಲ್ಲಿ ಶಿಖಾ ಶಬ್ದಕ್ಕೆ "ಶಿಖಾ ಶಿಫಾಕೇಕಿಮಾಲ್ಯೋರ್ಜ್ವಾಲಾಶಾಖಾಗ್ರಮಾಲಿಷು" ಎಂಬ ಪೂರ್ವೋಕ್ತಕೋಶವಚನದಂತೆ ಶಾಖಾ ಎಂದು ಅರ್ಥಮಾಡಿ "ಬದ್ಧಶಿಖಾಕುಮಾರಂ" ಎಂಬ ಸಮುದಿತ ವಾಕ್ಯಕ್ಕೆ ಶಾಖಾಬದ್ಧನಾದ ಕುಮಾರನನ್ನು ಎಂದು ಅರ್ಥವನ್ನು ಮಾಡುವದು ಶಿವಾಗಮಗಳಿಗೆ ವಿರೋಧವೆನಿಸುವದಿಲ್ಲ. ಯಾಕಂದರೆ, ದೀಕ್ಷೆಯನ್ನು ಹೊಂದುವ ಕುಮಾರನು ದೀಕ್ಷಾಗುರುವಿನ ಗೋತ್ರಸೂತ್ರ ಶಾಖಾದಿಗಳಿಂದ ಬದ್ಧನಾಗಿರುವದು ಅತ್ಯವಶ್ಯವದೆ. ಈ ತತ್ವವನ್ನು ವ್ಯಕ್ತಪಡಿಸುವದಕ್ಕಾಗಿ "ಬದ್ಧಶಿಖಂ ಕುಮಾರಂ" ಎಂಬ ವಾಕ್ಯವು ದೀಕ್ಷಾವಿಧಿಯಲ್ಲಿ ಉಕ್ತವಾಗಿರುವದಲ್ಲದೆ ಕರ್ಮಾಂಗಭೂತವಾದ ಶಿಖಾಬದ್ಧತೆಯನ್ನು ವ್ಯಕ್ತಪಡಿಸುವದಕ್ಕಾಗಿ ಉಕ್ತವಾಗಿಲ್ಲ. ಆದುದರಿಂದ "ಬದ್ಧಶಿಖಂ ಕುಮಾರಂ" ಎಂಬ ವಾಕ್ಯದಿಂದ ವೀರಶೈವರಿಗೆ ದೀಕ್ಷಾಕಾಲದಲ್ಲಿ ಶಿಖೆಯಿರಬೇಕೆಂದು ಹೇಳುವದು ಕೇವಲ ಪ್ರಮಾದವು."

ಎಂದು ಬರೆದಿದ್ದಾನೆ. ಹೀಗೆ ಬರೆದಿರುವುದನ್ನು ನೋಡಿದರೆ ನಗೆಬರು
ತ್ತದೆ. "ಬದ್ಧಶಿಖಂ ಕುಮಾರಂ" ಎನ್ನುವುದಕ್ಕೆ ಶಾಖಾಬದ್ಧನಾದ
ಕುಮಾರನೆಂದು ಅರ್ಥಮಾಡಬೇಕಂತೆ! ಅಹಾ! ಏನು ಪಾಂಡಿತ್ಯ
ವಿದು? ಸಂಸ್ಕೃತಶಬ್ದಗಳು ಈತನಲ್ಲಿ ಮೇರೆದಪ್ಪಿ ನರ್ತನ ಮಾಡಲಿಕ್ಕೆ
ಹತ್ತಿವೆ. ಶಿಖಾಶಬ್ದಕ್ಕೆ ವೇದಶಾಖೆಯೆಂದು ಇಲ್ಲಿಯ ವರೆಗೆ ಯಾವ
ಕೋಶಕಾರರೂ ಅರ್ಥವನ್ನು ಮಾಡಿಲ್ಲ. ಈತನು ಉದಾಹರಿಸಿದ
"ಶಿಖಾಶಿಫಾಕೇಕಿಮೌಲ್ಯೋಃಜ್ವಾಲಾಶಾಖಾಗ್ರಮೌಲಿಷು" ಎಂಬ ನಾನಾ
ರ್ಥರತ್ನಮಾಲಾಕೋಶದಲ್ಲಿಯೂ ಈ ಅರ್ಥವು ಹೊರಡುವುದಿಲ್ಲ. ಶಿಖಾ
ಶಬ್ದವು ತಾವರೆಗಡ್ಡೆ, ನವಿಲುಜುಟ್ಟು, ಜ್ವಾಲೆ, ಗಿಡದಟೊಂಗೆ, ತುದಿ,
ಮಸ್ತಕ ಇಷ್ಟು ಅರ್ಥಗಳನ್ನು ಬೋಧಿಸುವುದೆಂದು ಈ ಕೋಶವು
ಸಾರುತ್ತದೆ. ಇದರಿಂದ ವೇದಶಾಖೆಯೆಂದು ಹೇಗೆ ಅರ್ಥವಾಗುವುದೋ
ಯಾರಿಗೂ ತಿಳಿಯದಾಗಿದೆ. ಹೀಗಿದ್ದರೂ ಈತನು ಸರಳವಾದ ಮಾರ್ಗ
ವನ್ನು ಬಿಟ್ಟು ದುರ್ಗಮವಾದ ಮಾರ್ಗವನ್ನು ಹಿಡಿದಿರುವುದು ತುಚ್ಛ
ವಾಗಿದೆ. ದೀಕ್ಷಾವಿಧಿಯಲ್ಲಿ ನಾಲ್ಕೂ ದಿಕ್ಕಿನ ಕೂದಲುಗಳನ್ನು ಬೋಳಿಸಿ
ಮಧ್ಯದಲ್ಲಿ ಶಿಖೆಯನ್ನು ಬಿಡಬೇಕೆಂದೂ, ಇಂಥ ಶಿಖಾಬದ್ಧನಾದ
ಕುಮಾರನನ್ನು ಯಜಮಾನನು ಚನ್ನಾಗಿ ನೋಡಬೇಕೆಂದೂ ಸ್ಪಷ್ಟವಾಗಿ
ವಿಧಿಸಿದ್ದರೂ, ಈ ವಿಧಿಗೆ ವಿರೋಧವಾಗಿ ಹೋಗಿರುವುದು ಮಂದತನದ
ಪ್ರಭಾವವಾಗಿದೆ. ವಪನವಿಧಿಯಲ್ಲಿ ವೇದಶಾಖೆಯು ಏಕೆ ಬರುವುದೋ
ಈ ಮಹಾತ್ಮನಿಗೇ ಗೊತ್ತು! ಅದೂಕೂಡ ಸ್ವಲ್ಪ ಹಜಾಮತ್ ಮಾಡಿಸಿ
ಕೊಂಡು ಹೋಗೋಣವೆಂದು ಬರಬಹುದೇನು? ದೀಕ್ಷಾವಿಧಿಯು ಈ
ವಾಕ್ಯವನ್ನು ಯಾವ ಸಮಯದಲ್ಲಿ ಹೇಳಿರುವುದೆನ್ನುವುದನ್ನು ಕಣ್ದೆರೆದು
ನೋಡದೆ, ಮನಸ್ಸಿಗೆ ಬಂದಂತೆ ಬರೆದಿರುವುದು ಬೆಪ್ಪತನವಲ್ಲದೆ
ಬೇರೊಂದಿಲ್ಲ.

ಈತನು ೬೮-೬೯-೭೦ ನೆಯ ಪುಟಗಳಲ್ಲಿ—

"ಶಿಖೀ ಮುಂಡೀ ಜಟೀವಾಪಿ" ಎಂಬ ವಾಕ್ಯವು ಶಿಖಾಧಾರಣದ ಪ್ರಾಮುಖ್ಯತೆಯನ್ನು ಬೋಧಿಸದೆ ಐಚ್ಛಿಕತ್ವವನ್ನು ಬೋಧಿಸುತ್ತದೆ. ಹಾಗೂ ಈ ವಾಕ್ಯವು ಕೇವಲ ನಿರಾಭಾರಿವೀರಶೈವ ಪ್ರಕರಣದಲ್ಲಿ ಪಠಿತವಾಗಿದ್ದು, ವೀರಶೈವನಿರಾಭಾರಿಯು ಶಿಖೆಯನ್ನಾದರೂ ಅಥವಾ ಜಡೆಯನ್ನಾದರೂ ಧರಿಸಬಹುದು, ಇಲ್ಲವೆ ಮುಂಡಿಯಾದರೂ ಆಗಿರಬಹುದು ಎಂದು ಅಭಿಪ್ರಾಯಪಡುತ್ತದೆ. ಪ್ರಕೃತದಲ್ಲಿ ಶಿಖಾಶಬ್ದಕ್ಕೆ ವಿಧಿವಿಹಿತ ಮಸ್ತಕಾಗ್ರವರ್ತಿ ಕೇಶಸಮೂಹವೆಂದು ಅರ್ಥವಾಗುವಂತಿಲ್ಲ................ "ಶಿಖೀ ಮುಂಡೀ ಜಟೀವಾಪಿ" ಇತ್ಯಾದಿ ವಾಕ್ಯದಲ್ಲಿರುವ ಶಿಖಾಶಬ್ದಕ್ಕೆ ಅವಶ್ಯವಾಗಿ ಪೂರ್ಣಕೇಶವೆಂದು ಅರ್ಥವನ್ನು ಮಾಡುವದು ಸಮಂಜಸವೆನಿಸುವದು"

ಎಂದು ಬರೆದಿದ್ದಾನೆ. ಈತನು ಬರೆದಿರುವ ಈ ಬರವಣಿಗೆಯು ಅತ್ಯಂತ ಅಯುಕ್ತವಾಗಿದೆ. "ಜಟೀ ಮುಂಡೀ ಶಿಖೀ ವಾಪಿ ಕೀರ್ಣಕೇಶೋ ದಿಗಂಬರಃ" ಎಂಬ ಪಾರಮೇಶ್ವರಾಗಮದ ೧೭ನೆಯ ಪಟಲದವಾಕ್ಯವೂ, "ಜಟೀ ಮುಂಡೀ ಶಿಖೀ ವಾಪಿ ಕಾಷಾಯವಸನಾನ್ವಿತಃ" ಎಂಬ ಸೂಕ್ಷ್ಮಾಗಮದ ೭ ನೆಯ ಪಟಲದ ವಾಕ್ಯವೂ ನಿರಾಭಾರಿಗಳಿಗೆ ವಿಕಲ್ಪವಾಗಿ ಶಿಖೆಯನ್ನು ಹೇಳುತ್ತವೆ. ಈ ವಾಕ್ಯಗಳಲ್ಲಿರುವ ಶಿಖಾಶಬ್ದಕ್ಕೆ ಪೂರ್ಣಕೇಶವೆಂದು ಅರ್ಥಮಾಡಲವಕಾಶವಿಲ್ಲ. ಲೋಕಶಾಸ್ತ್ರಪ್ರಸಿದ್ಧವಾದ ವಿಧ್ಯುಕ್ತಶಿಖೆಯೆಂದು ಅರ್ಥಮಾಡುವಲ್ಲಿ ಅನ್ವಯಕ್ಕೂ ತಾತ್ಪರ್ಯಕ್ಕೂ ಅನುಪಪತ್ತಿಯಿಲ್ಲ. ಎಲ್ಲಿ ಅನ್ವಯಕ್ಕೂ ತಾತ್ಪರ್ಯಕ್ಕೂ ಅನುಪಪತ್ತಿಯುಂಟೋ ಅಲ್ಲಿಯೇ ಲಕ್ಷ್ಯಾರ್ಥವನ್ನು ಸ್ವೀಕರಿಸಬೇಕಾಗುತ್ತದೆ. ಶಿಖಾಶಬ್ದಕ್ಕೆ ವಿಧ್ಯುಕ್ತಶಿಖೆಯೆಂಬ ವಾಚ್ಯಾರ್ಥವಾಗುತ್ತದೆ. ಈ ವಿಧ್ಯುಕ್ತಕೇಶಸಮೂಹವೆಂಬ ಅರ್ಥದಲ್ಲಿಯೇ ಶಿಖಾಶಬ್ದದ ಪೂರ್ವಪೂರ್ವ ಶ್ರುತ್ಯಾದಿಪ್ರಯೋಗಗಳಿರುವವು. ಅವುಗಳನ್ನು ಹಿಂದೆಯೇ ತೋರಿಸಿದ್ದೇವೆ. "ಶಿಖಾಧಾಮ ಹಿತ್ವಾ" "ಶಿಖಾಮಾರ್ಜಿತಾ" ಎಂಬ ಕಾಳಿದಾಸಕವಿಯ ವಾಕ್ಯದಲ್ಲಿರುವ ಶಿಖಾಶಬ್ದಕ್ಕೆ ತಾತ್ಪರ್ಯಾನುಪಪತ್ತಿ ರೂಪವಾದ ಲಕ್ಷಣಾಬೀಜವಿರುವುದರಿಂದ ವಿಧ್ಯವಿಹಿತಕೇಶಸಮೂಹ

(ತಲೆತುಂಬಾ ಇರುವ ಕೇಶಸಮೂಹ)ವೆಂಬ ಲಕ್ಷ್ಯಾರ್ಥವು ಅಂಗೀಕರಿಸಲ್ಪಡುತ್ತದೆ. "ನಿಷ್ಕಂಪಚಾಮರಶಿಖಾ" ಎಂಬಲ್ಲಿಯೂ, "ಸೂಚಿಶಿಖಾ" ಎಂಬಲ್ಲಿಯೂ ಚಾಮರ ಮತ್ತು ಸೂಚಿ ಸಂಬಂಧಿಯಾದ ಶಿಖಾಶಬ್ದಕ್ಕೆ ಅಗ್ರವೆಂಬ ಅರ್ಥವು ಅಂಗೀಕರಿಸಲ್ಪಟ್ಟದೆಯಲ್ಲದೆ ಬೇರೆಯಿಲ್ಲ. ಕೇವಲ ಶಿಖಾಶಬ್ದವನ್ನು ಅಗ್ರವೆಂಬ ಅರ್ಥದಲ್ಲಿ ಇಂದಿನವರೆಗೂ ಯಾವ ಕವಿಗಳೂ ಪ್ರಯೋಗಿಸಿರುವುದಿಲ್ಲ. ಆದರೆ ವಿಧಿವಿಹಿತ ಶಿಖಾರ್ಥದಲ್ಲಿ ಅನೇಕ ಜನ ಕವಿಗಳೂ, ಪಂಡಿತರೂ, ಆಚಾರ್ಯರೂ ಪ್ರಯೋಗಿಸಿರುವರು. "ಶಿಖಾಯಾಮೇಕಃ" "ಸಶಿಖಂ ವಪನಂ ಕೃತ್ವಾ" "ಶಿಖಾಂ ಯಜ್ಞೋಪವೀತಂ" ಇವೇ ಮೊದಲಾದ ಅನಂತಶ್ರುತಿಗಳು ಶಿಖಾಶಬ್ದವನ್ನು ವಿಧಿವಿಹಿತಕೇಶಸಮೂಹರೂಪ ಶಿಖೆಯಲ್ಲಿಯೇ ಬೋಧಿಸುವುವು. ಆದುದರಿಂದ "ಜಟೀ ಮುಂಡೀ ಶಿಖೀ ವಾಪಿ" ಎಂಬ ವಾಕ್ಯದಲ್ಲಿರುವ ಶಿಖಾಶಬ್ದಕ್ಕೆ ವಿಧ್ಯುಕ್ತಶಿಖೆಯೆಂಬ ವಾಚ್ಯಾರ್ಥವನ್ನೇ ಮಾಡಬೇಕು. "ಶಿಖಾಶಿಫಾಕೇಕಿಮೌಲ್ಯೋಃ ಜ್ವಾಲಾಶಾಖಾಗ್ರಮೌಲಿಷು" ಎಂಬ ಕೋಶದಿಂದಲಾದರೂ, ಶಿಖಾ ಶಬ್ದಕ್ಕೆ ಸಾಮಾನ್ಯತಃ ಅಗ್ರವೆಂದು ವಾಚ್ಯಾರ್ಥವಾಗುವುದಲ್ಲದೆ, ಯಾವುದಾದರೊಂದು ಪದಾರ್ಥಸಂಬಂಧಿಯಾದ ಅಗ್ರವೆಂಬ ವಾಚ್ಯಾರ್ಥವಾಗುವುದಿಲ್ಲ. ಆದುದರಿಂದಲೇ ಪೂರ್ವಕವಿಗಳು "ಚಾಮರಶಿಖಾ—ಸೂಚಿಶಿಖಾ" ಎಂದು ಪ್ರಯೋಗಿಸಿರುತ್ತಾರೆನ್ನುವ ರಹಸ್ಯವನ್ನು ಈತನು ಚನ್ನಾಗಿ ತಿಳಿದುಕೊಂಡು ಭ್ರಾಂತಿಯಿಂದ ದೂರನಾಗಬೇಕು. ಇನ್ನು "ಜಟೀ ಮುಂಡೀ ಶಿಖೀ ವಾಪಿ" ಎಂಬ ವಾಕ್ಯದಲ್ಲಿರುವ ಶಿಖಾಶಬ್ದಕ್ಕೆ ಹಠಾತ್ತಾಗಿ ತಲೆಯಲ್ಲಿರುವ ಎಲ್ಲಾ ಕೇಶಗಳ ಸಮೂಹವೆಂಬ ಲಕ್ಷ್ಯಾರ್ಥವನ್ನೇ ಮಾಡುವುದಾಗುವುದೆಂದರೆ, ಲಕ್ಷಣಾಸ್ವೀಕಾರಗೌರವದೋಷವು ಬರುವದಲ್ಲದೆ ಈತನು ಮುಂಡನಪಕ್ಷವನ್ನು ಸಮರ್ಥಿಸಿದಂತೆಯೂ ಆಗುವುದಿಲ್ಲ. ಯಾಕಂದರೆ—ಈತನ ಆ ಲಕ್ಷ್ಯಾರ್ಥದಲ್ಲಿ ನಮ್ಮ ವಿಧ್ಯುಕ್ತ

ಕೇಶಸಮೂಹವೂ ಕೂಡ ಸಂಭವಪ್ರಮಾಣದಿಂದ ಸಿದ್ಧವೇ ಅದೆ. ಆದು ದರಿಂದ ವೀರಶೈವಸನ್ಯಾಸಿಗಳಿಗೆ ಪತಿಕರ್ಮಾಂಗಭೂತವಾದ ವಿಧ್ಯುಕ್ತ ಶಿಖೆಯು ಸಿದ್ಧಿಸುವದಿಲ್ಲವೆನ್ನುವದು ಅಯುಕ್ತವು. ಈ ಸಂದರ್ಭದಲ್ಲಿ ಈತನು "ಮಚ್ಛಿಖಾಚಕ್ರಮಧ್ಯಸ್ಥಂ ಚರಲಿಂಗಂ ನಿರಂಜನಂ |" ಎಂಬ ಶ್ಲೋಕವನ್ನುದಾಹರಿಸಿ ಶಿಖಾಶಬ್ದಕ್ಕೆ ಚಕ್ರವೆಂದು ಅರ್ಥವನ್ನು ಬರೆದಿದ್ದಾನೆ. ಹೀಗೆ ಈತನು ಬರೆದಿರುವುದು ಮಂದತನವಾಗಿದೆ. ಇಲ್ಲಿ 'ಶಿಖಾಚಕ್ರ' ವೆಂಬ ಶಬ್ದವು ಒಂದು ಸ್ಥಾನದಲ್ಲಿ ಹೇಳಲ್ಪಟ್ಟಿರುವು ದಲ್ಲದೆ ಈ ಘನಪಂಡಿತನ ಅಭಿಪ್ರಾಯದಂತೆ ಶಿಖಾಶಬ್ದಕ್ಕೆ ಚಕ್ರವೆಂಬ ಅರ್ಥವನ್ನು ಹೇಳುವುದಿಲ್ಲ. ಈತನ ಅಭಿಪ್ರಾಯದಂತೆ ಹೋದರೆ ಈ ಶ್ಲೋಕಕ್ಕೆ ನನ್ನ ಚಕ್ರದ ಮಧ್ಯದಲ್ಲಿರುವ ಚರಲಿಂಗವು ಎಂದು ಅರ್ಥ ವಾಗುತ್ತದೆ. ಆಗ ನವವಿಧಚಕ್ರಗಳಲ್ಲಿ ಯಾವಚಕ್ರವೆಂದು ಅರ್ಥವನ್ನು ಮಾಡಬೇಕು? ಆಧಾರಚಕ್ರವೋ? ಸ್ವಾಧಿಷ್ಠಾನಚಕ್ರವೋ? ಯಾವ ಚಕ್ರವು? ಆದುದರಿಂದ ಹೀಗೆ ಬರೆದಿರುವುದು ಕೇವಲ ಅಸಮಂಜಸ ವೆಂದು ತಿಳಿಯಬೇಕು. ಈ ಶ್ಲೋಕವು ಸ್ವಾಯಂಭುವಾಗಮದಲ್ಲಿರು ವುದೆಂದು ಬರೆದಿದ್ದಾನೆ. ಆದರೆ ಈ ಶ್ಲೋಕವು ಕ್ರಮವಾಗಿರುವ ಸ್ವಾ ಯಂಭುವಾಗಮದಲ್ಲಿರುವುದಿಲ್ಲ. ಗುಳೇದಗುಡ್ಡದ ವಿರಕ್ತರಿಂದ ಕಲ್ಪಿ ಸಲ್ಪಟ್ಟ ಆಗಮಶ್ಲೋಕವಾಗಿದೆ. ಆದುದರಿಂದ ಎಲ್ಲವೂ ಅಬದ್ಧವೆಂದು ತಿಳಿಯಬೇಕು.

ಇನ್ನು ಜಾಬಾಲಶಿಖಾದಿಶಬ್ದಗಳು ಸಂಕೇತನಾಮದಿಂದ ಕೂಡಿ ರುವುವಲ್ಲದೆ ವೇದಶಾಖೆಯೆಂಬರ್ಥದಿಂದ ಕೂಡಿರುವುದಿಲ್ಲ. ವೇದ ಶಾಖಾರ್ಥದಿಂದಲೇ ಕೂಡಿರುವವೆಂದರೆ, ಪ್ರತಿಯೊಂದು ಶಾಖೆಗೂ ಶಿಖಾ ಶಬ್ದವು ಪ್ರಯೋಗಿಸಲ್ಪಟ್ಟು "ಈಶಶಿಖಾ-ಕಠಶಿಖಾ-ಮುಂಡಕಶಿಖಾ" ಇತ್ಯಾದಿ ನಾಮಗಳಿಂದ ಪ್ರಸಿದ್ಧವಾಗುತ್ತಿದ್ದುವು. ಅವುಗಳಿಗೆಲ್ಲಾ ಹೀಗೆ ನಾಮಗಳಿಲ್ಲದಿರುವುದರಿಂದ ಈತನು ಬರೆದಿರುವುದು ಕೇವಲ ಅಸಮಂ

ಜಸವಾಗಿದೆ. ಈತನು " ವಿಶೇಷವೀರಶೈವೋಽಪಿ ನಿರಾಭಾರೀ ತಥೈವಚ | ನ ಶಿಖಾಂ ನಚ ಶ್ಮಶ್ರೂಣಿ ಧಾರಯೇತ್ತು ಕದಾಚನ" ಎಂಬ ಅನಾಮಧೇಯಾಗಮದ ಶ್ಲೋಕವನ್ನು ಬರೆದಿದ್ದಾನೆ. ಇದು ಯಾವ ಆಗಮದ ಶ್ಲೋಕವೋ ಯಾರಿಗೂ ತಿಳಿಯದಾಗಿದೆ. ಇದಾದರೂ ಈತನ ಎಲ್ಲಾ ಆಗಮಶ್ಲೋಕಗಳಂತೆ ಕೃತ್ರಿಮಾಗಮದ ಶ್ಲೋಕವಲ್ಲದೆ ಬೇರೆಯಿಲ್ಲ. ಈ ಶ್ಲೋಕವು ವಿಶೇಷವೀರಶೈವ ನಿರಾಭಾರಿವೀರಶೈವರಿಗೆ ಶಿಖಾಧಾರಣವನ್ನು ಹೇಳುವ ಪಾರಮೇಶ್ವರಾಗಮ ಸೂಕ್ಷ್ಮಾಗಮವಾಕ್ಯಗಳಿಗೆ ವಿರುದ್ಧವಾಗಿರುವುದರಿಂದ ಇದು ಆಗಮಶ್ಲೋಕವೇ ಅಲ್ಲವೆಂದು ನಿಸ್ಸಂಶಯವಾಗಿ ಹೇಳಬಹುದಾಗಿದೆ. ಈ ಉಭಯ ವೀರಶೈವರಿಗೆ ಶಿಖಾಧಾರಣವನ್ನು ಹೇಳುವ ಪಾರಮೇಶ್ವರಾಗಮಸೂಕ್ಷ್ಮಾಗಮಾದಿಗ್ರಂಥಗಳ ಶ್ಲೋಕಗಳು ಈ ಮೊದಲು ಅನೇಕ ಕಡೆಗೆ ಉದಾಹರಿಸಲ್ಪಟ್ಟವೆ. ಅವುಗಳನ್ನು ನೋಡಿಕೊಳ್ಳಬೇಕು. ಆದುದರಿಂದ " ಜಟೀ ಮುಂಡೀ ಶಿಖೀ ವಾಪಿ" ಎಂಬ ವಾಕ್ಯದಲ್ಲಿರುವ ಶಿಖಾಶಬ್ದಕ್ಕೆ ವಿಧಿವಿಹಿತಮಸ್ತಕಾಗ್ರವರ್ತಿಕೇಶಸಮೂಹವೆಂದು ಅರ್ಥಮಾಡುವುದೇ ಸಿದ್ಧಾಂತವು.

ಈತನು ೭೦ ನೆಯ ಪುಟದಲ್ಲಿ—

" ಶಿಖಾಯೈವಷಟ್ " ಎಂಬ ಪಲ್ಲವವು ಅಂಗನ್ಯಾಸದಲ್ಲಿರುವದು " ಅಂಗಂ ಪ್ರತೀಕೋವಯವೋಽಪಘನೋಽಥಕಲೇವರಂ " ಎಂಬ ಕೋಶವಚನದಂತೆ ಅಂಗಶಬ್ದವು ಅವಯವವಾಚಕವಾಗಿದೆ. ಆ ಅವಯವಗಳು ಪ್ರಕೃತದಲ್ಲಿ ಹೃದಯ-ಶಿರಸ್ಸು-ಶಿಖಾ-ನೇತ್ರತ್ರಯ-ಕವಚ-ಅಸ್ತ್ರಸ್ವರೂಪವಾಗಿವೆ. ಇವುಗಳಲ್ಲಿ ಕ್ರಮವಾಗಿ ನಮಃ-ಸ್ವಾಹಾ-ವಷಟ್-ವೌಷಟ್-ಹುಂ-ಫಟ್ ಎಂಬ ಮಂತ್ರಪಲ್ಲವಗಳನ್ನು ಯೋಜಿಸುವದೇ ಅಂಗನ್ಯಾಸವು. ಈ ನ್ಯಾಸಘಟಕವಾದ ಶಿಖಾಶಬ್ದಕ್ಕೆ ವಿಧಿವಿಹಿತ ಮಸ್ತಕಾಗ್ರವರ್ತಿ ಕೇಶಸಮೂಹವೆಂದು ಅರ್ಥವನ್ನು ಮಾಡುವುದು ಪ್ರಕರಣವಿರೋಧವು. ಶಿಖಾಶಬ್ದಕ್ಕೆ ವಿಧಿವಿಹಿತ ಮಸ್ತಕಾಗ್ರವರ್ತಿ ಕೇಶಸಮೂಹವೆಂದು ಅರ್ಥವನ್ನು ಮಾಡಿದಮೇಲೆ ಕವಚ-ಅಸ್ತ್ರಶಬ್ದಗಳಿಗಾದರೂ ಅಂಗಿ-ಬಾಣವೆಂದು ಅರ್ಥಮಾಡಬೇಕಾಗುವದು. ಅದರಿಂದ ಶಿಖೆಯನ್ನು ಧರಿಸಿ ನ್ಯಾಸವನ್ನು ಮಾಡಬೇಕೆಂದು ಹೇಳುವಂತೆ ಅಂಗಿಯನ್ನು ತೊಟ್ಟು

ಕೊಂಡು ಬಾಣವನ್ನು ಹಿಡಿಮಕೊಂಡು ನ್ಯಾಸವನ್ನು ಮಾಡಬೇಕೆಂದು ಹೇಳಬೇಕಾಗು ವದು. ಇದು ಕೇವಲ ವಿರೋಧವು. ಯಾಕಂದರೆ—ನ್ಯಾಸವು ಕೂದಲುಗಳಿಗಾಗಲಿ ಅಥವಾ ಅಂಗಿ ಬಾಣಗಳಿಗಾಗಲಿ ವಿಹಿತವಾಗಿರದೆ ಶರೀರಾವಯುವಗಳಿಗೆ ವಿಹಿತವಾಗಿವೆ. ಅಂತೆಯೇ ಇದಕ್ಕೆ ಅಂಗನ್ಯಾಸವೆಂದು ಹೆಸರು ಬಂದಿದೆ.''

ಎಂದು ಬರೆದಿದ್ದಾನೆ. ಈ ಘನಪಂಡಿತನು ಬರೆದಿರುವ ವಿಷಯು ವನ್ನು ವಿಮರ್ಶಿಸೋಣ! ಈತನು "ಶಿಖಾಯೈವಷಟ್" ಎಂಬುದು ಪಲ್ಲವವೆಂದು ಬರೆದಿದ್ದಾನೆ. ಇದು ಪಲ್ಲವವಲ್ಲ. ಆದರೆ ಕೇವಲ 'ವಷಟ್' ಎಂಬುದು ಪಲ್ಲವವಾಗಿದೆ. ಈ ವಿಷಯದಲ್ಲಿ—" ಹೃದಯಂ ಮೂಲವಿದ್ಯೇಯಂ ನಕಾರಶ್ಶಂಕರಶ್ಶಿರಃ । ಶಿಖಾ ಮಕಾರಃ ಕವಚಂ ಶಿಕಾರೋ ವಾಪಿ ದೃಕ್ತ್ರಯಂ ॥ ಯಕಾರೋಽಸ್ತ್ರಂ ನಮಃ ಸ್ವಾಹಾ ವಷಡ್ಢುಂ ಚ ಯಥಾಕ್ರಮಂ । ವೌಷಟ್ ಫಡಿತಿ ದೇವೇಶಿ ಪಲ್ಲವಾಃ ಷಟ್ಪ್ರಕೀರ್ತಿತಾಃ॥ ಎಂಬ ಪಾರಮೇಶ್ವ ರಾಗಮ ಏಕಾದಶಪಟಲದ ಶ್ಲೋಕಗಳು ಪ್ರಮಾಣಗಳಾಗಿವೆ. ಹೀಗಿದ್ದು "ಶಿಖಾಯೈ ವಷಟ್" ಎಂಬುವದಕ್ಕೇನೇ ಪಲ್ಲವವೆನ್ನುವದು ತಪ್ಪು. ಇನ್ನು "ಅಂಗಂ ಪ್ರತೀಕೋಽವಯವಃ" ಎಂಬ ಕೋಶವಚನದಂತೆ ಅಂಗ ಶಬ್ದವು ಅವಯುವವಾಚಕವಾಗಿರುವುದೇನೋ ನಿಜ. ಆದರೆ ಅದು ಇಲ್ಲಿ ಉಪಾಸಕನ ಶರೀರಾವಯುವವಾಚಕವಾಗಿರದೆ ಕೇವಲ ಉಪಾಸ್ಯ ಮಂತ್ರದ (ಷಡಕ್ಷರ ಮಂತ್ರದ) ಅವಯುವವಾಚಕವಾಗಿದೆ. ಇಂತಹ ಮಂತ್ರಾಂಗಗಳ ನ್ಯಾಸವು ಉಪಾಸಕನ ಹೃದಯಾದಿಸ್ಥಾನಗಳಲ್ಲಿ ವಿಧಿಸ ಲ್ಪಡುತ್ತದೆ. ಅಂಗನ್ಯಾಸಃ ಅಂಗಾನಾಂ ಮಂತ್ರಾಂಗಾನಾಂ ಮೂಲವಿದ್ಯಾ (ಓಂ) ನಕಾರಮಕಾರಶಿಕಾರವಾಕಾರಯಕಾರಾಣಾಂ ನಮಃ ಸ್ವಾಹಾದಿ ಪಲ್ಲವಸಹಿತಾನಾಂನ್ಯಾಸಃ । ಅಂಗನ್ಯಾಸವೆಂದರೆ ನಮಃ, ಸ್ವಾಹಾ, ವಷಟ್, ಹುಂ, ವೌಷಟ್, ಫಟ್ ಎಂಬ ಆರು ಪಲ್ಲವಗಳಿಂದ ಸಹಿತಗಳಾದ ಪ್ರಣವವಿಶಿಷ್ಟನಕಾರಾದಿಯಕಾರಾಂತಗಳಾದ ಆರು ವರ್ಣಗಳನ್ನು ತನ್ನ (ಉಪಾಸಕನ) ಹೃದಯಾದಿಸ್ಥಾನಗಳಲ್ಲಿ ಯೋಜಿಸುವದೇ ಅಂಗನ್ಯಾಸವು.

ಪ್ರಣವಾದಿ ಷಡ್ವರ್ಣಗಳಿಗೆ ಹೃದಯಾದಿನಾಮಾಂತರಗಳಿರುವುವೆಂದು "ಹೃದಯಂ ಮೂಲವಿದ್ಯೇಯಂ" ಇತ್ಯಾದಿ ಮೇಲೆ ಹೇಳಿದ ಪಾರಮೇಶ್ವರಾಗಮದ ವಾಕ್ಯಗಳಿಂದ ಸ್ಪಷ್ಟವಾಗಿದೆ. ಇನ್ನು ಈ ಮಂತ್ರಾಂಗ ಅಥವಾ ಶಿವಾಂಗರೂಪಗಳಾದ ಒಂದೊಂದು ಪ್ರಣವ ಗಳನ್ನು ಉಪಾಸಕನು ತನ್ನ ಹೃದಯಾದಿ ಸ್ಥಾನಗಳಲ್ಲಿ ಪಲ್ಲವಸಹಿತ ಗಳನ್ನಾಗಿ ಯೋಜಿಸಬೇಕೆನ್ನುವಲ್ಲಿ "ಹೃದಯಾದಿಷು ವಿನ್ಯಸೇದಂಗ ಮಂತ್ರಾಂಸ್ತತಸ್ಸುಧೀಃ" ಹೃದಯಾಯನಮಃ ಪೂರ್ವಂ ಶಿರಸೇ ವಹ್ನಿವಲ್ಲಭಾ । ಶಿಖಾಯೈ ವಷಡಿತ್ಯುಕ್ತಂ ಕವಚಾಯ ಹುಮಿ ರಿತಂ। ನೇತ್ರತ್ರಯಾಯವೌಷಟ್‌ಸ್ಯಾದಸ್ತ್ರಾಯಫಡಿತಿ ಕ್ರಮಾತ್ ಷಡಂಗಮಂತ್ರಾನಿತ್ಯುಕ್ತ್ವಾ ಷಡಂಗೇಷು ನಿಯೋಜಯೇತ್ ॥ ಎಂಬ ಶಾರದಾತಿಲಕ ಚತುರ್ಥಪಟಲದ ವಾಕ್ಯಗಳು ಪ್ರಮಾಣಗಳಾ ಗಿವೆ. ಹೃದಯ, ಶಿರಸ್ಸು, ಶಿಖಾ, ಕವಚ, ನೇತ್ರತ್ರಯ-ಅಸ್ತ್ರಗಳು ಪಲ್ಲವಗಳಿಂದ ಸಹಿತಗಳಾಗಿ ಚತುರ್ಥ್ಯಂತಗಳಾಗಿರಬೇಕೆಂದು ವಾತುಲ ಶುದ್ಧಾಖ್ಯತಂತ್ರದ ಅಷ್ಟಮಪಟಲದ ೬-೭-೮-೯-೧೦ನೆಯ ಶ್ಲೋಕಗ ಳಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಈ ಹೃದಯಾದಿಗಳೆನಿಸುವ ಷಡಕ್ಷರ ಮಂತ್ರಾಂಗಗಳನ್ನು ಮಂತ್ರಾಂಗಗಳೆನಿಸುವ ನಮಃಸ್ವಾಹಾದಿಪಲ್ಲವಗ ಳಿಂದ ಸಹಿತಗಳನ್ನಾಗಿ ತನ್ನ (ಉಪಾಸಕನ) ಹೃದಯಾದಿಸ್ಥಾನಗಳಲ್ಲಿ ಯೋಜಿಸಿಕೊಳ್ಳುವುದೇ ಅಂಗನ್ಯಾಸವಾಗಿರುವುದು. ಉಪಾಸಕನ ಹೃದ ಯಾದಿಸ್ಥಾನಗಳಾದರೋ ೧ ಹೃದಯ, ೨ ಶಿರಸ್ಸು, ೩ ಶಿಖಾ ೪ ನೇ ತ್ರಯುಗ್ಮಸಹಿತಭ್ರೂಮಧ್ಯ, "ಕರ್ಣಪ್ರಾವರಣತ್ವೇನ ಸ್ತನಮಧ್ಯಾಂ ತಂಕವಚಂ" ಎಂದು ಕ್ರಿಯಾಸಾರದ ೧೪ನೆಯ ಉಪದೇಶದಲ್ಲಿ ಹೇಳಿ ರುವಂತೆ ೫ ಕರ್ಣಪ್ರಾವರಣತ್ವದಿಂದ ಸ್ತನಮಧ್ಯಾಂತವಾದ ಸ್ಥಾನ, ೬ ಕರತಲ, ಇವುಗಳಲ್ಲಿ ಮೇಲೆ ಹೇಳಿದ ಶಿವಾಂಗಗಳನ್ನು ಯೋಜಿಸಿ ಕೊಳ್ಳುವುದೇ ಅಂಗನ್ಯಾಸವೆನಿಸುವುದು. ಹೀಗಿದ್ದರೂ ಈತನು—

"ಆ ಅವಯುವಗಳು ಪ್ರಕೃತದಲ್ಲಿ ಹೃದಯ, ಶಿರಸ್ಸು, ಶಿಖಾ, ನೇತ್ರತ್ರಯ, ಕವಚ, ಅಸ್ತ್ರಸ್ವರೂಪವಾಗಿವೆ. ಇವುಗಳಲ್ಲಿ ಕ್ರಮವಾಗಿ ನಮಃ ಸ್ವಾಹಾ, ವಷಟ್, ಹುಂ, ವೌಷಟ್, ಫಟ್ ಎಂಬ ಮಂತ್ರಪಲ್ಲವಗಳನ್ನು ಯೋಜಿಸುವದೇ ಅಂಗನ್ಯಾಸವು" ಎಂದು ಬರೆದಿದ್ದಾನೆ. ಇದು ಯಾವ ಮಹಾಗುರುವಿನ ಉಪದೇಶವೋ ನಮಗಂತೂ ತಿಳಿಯದಾಗಿದೆ. ಅಸ್ತ್ರ, ಕವಚ ಇವುಗಳು ಉಪಾಸಕನ ಶರೀರಾವಯವಗಳಾಗಿರುವುದಿಲ್ಲ. ಈ ವಿಷಯವು ಬಾಲಕರಿಗೂ ಸಹ ತಿಳಿಯುವಂತಿದೆ. ಹೀಗಿದ್ದರೂ ಈತನು ಕವಚ ಮತ್ತು ಅಸ್ತ್ರಗಳಿಗೆ ಅವಯುವಗಳೆಂದು ಬರೆದಿರುವದನ್ನು ನೋಡಿದರೆ ನಗೆಬರುತ್ತದೆ. ಮಂತ್ರಾಂಗ ಅಥವಾ ಶಿವಾಂಗಗಳೆನಿಸುವ ಪಲ್ಲವಸಹಿತಗಳಾದ ಹೃದಯಾದಿಷಡಂಗಮಂತ್ರಗಳನ್ನು ಉಪಾಸಕನು ತನ್ನ ಹೃದಯ, ಶಿರಸ್ಸು, ಶಿಖಾ (ವಿಧ್ಯುಕ್ತಕೇಶಸಮೂಹ), ಭ್ರೂಮಧ್ಯಸಹಿತನೇತ್ರಯುಗ್ಮ, ಸ್ತನಮಧ್ಯಾಂತ, ಮತ್ತು ಕರತಲ ಇವುಗಳಲ್ಲಿ ಯೋಜಿಸಿಕೊಂಡು ತನ್ನನ್ನು ಶಿವನನ್ನಾಗಿಯೂ, ತನ್ನ ಶರೀರವನ್ನು ಮಂತ್ರಪಿಂಡವನ್ನಾಗಿಯೂ, ತನ್ನ ಹೃದಯ ಮೊದಲಾದವುಗಳನ್ನು ಶಿವಮಂತ್ರಾಂಗಗಳನ್ನಾಗಿಯೂ ಭಾವಿಸಿಕೊಳ್ಳುವುದೇ ಅಂಗನ್ಯಾಸದ ಫಲವಾಗಿರುವುದು. ಪೂರ್ವಜನ್ಮಕೃತಪುಣ್ಯವಿಶೇಷಸಾಧ್ಯವಾದ ಈ ಮಂತ್ರರಹಸ್ಯವನ್ನು ತಿಳಿಯದೆ ಅಥವಾ ತಿಳಿದವರಿಂದ ತಿಳಿಯಿಸಿಕೊಳ್ಳದೆ ಹುಂಬರಂತೆ ಹುಂಬರನ್ನು ಸಂತೋಷಗೊಳಿಸುವುದಕ್ಕಾಗಿ ಕವಚಕ್ಕೆ ಅಂಗಿಯೆಂದೂ, ಅಸ್ತ್ರಕ್ಕೆ ಬಾಣವೆಂದೂ ಬರೆದು ಹಾಸ್ಯಮಾಡಿರುವುದು ಮಂತ್ರಕ್ಕೇನೇ ಹಾಸ್ಯಮಾಡಿದಂತಿದೆ. ಮಂತ್ರರಹಸ್ಯವನ್ನು ತಿಳಿಯದೆ ಮನಬಂದಂತೆ ಬರೆದ ಈತನ ಚೆಪ್ಪತನಕ್ಕೆ ಬೆಲೆಯೇ ಇಲ್ಲವೆಂದು ಹೇಳಬೇಕಾಗುತ್ತದೆ. ಅಸ್ತು !

ಈತನು ಈ ಸಂದರ್ಭದಲ್ಲಿ ಸ್ತ್ರೀಯರಿಗೂ, ಮುಂಡಿಗಳಿಗೂ ಶಿಖೆಯು ಇಲ್ಲದಿರುವುದರಿಂದ ಶಿಖೆಗೆ ವಿಧ್ಯುಕ್ತಕೇಶಸಮೂಹವೆಂದು ಅರ್ಥಮಾಡಿದರೆ ಅವರಿಗೆ ನ್ಯಾಸವೇ ಸಿದ್ಧಿಸುವುದಿಲ್ಲವೆಂದು ಬರೆದಿ

ದ್ದಾನೆ. ಈತನು ಹೀಗೆ ತಿಳಿದುಕೊಂಡಿರುವುದು ತಪ್ಪು. ಅವರಿಗೆ ವಿಧ್ಯುಕ್ತಶಿಖಾಧಾರಣವಿಲ್ಲದಿದ್ದರೂ ಅವರು ಮಂತ್ರೋಚ್ಚಾರಣಮಾತ್ರ ದಿಂದ ಅದರ ಫಲವನ್ನು ಪಡೆಯುವರು. ಈ ವಿಷಯವು ೮೩ನೆಯ ಪುಟದಲ್ಲಿ ಉಕ್ತವಾಗಿದೆ. ಅಲ್ಲಿ ನೋಡಿಕೊಳ್ಳಬೇಕು. ಕ್ರಿಯಾಸಾರದ ೧೪ನೆಯ ಉಪದೇಶದಲ್ಲಿ—"**ಶಿವಸ್ಥಾನೇಷು ಹೃದಯಶಿರಶ್ಶಿಖಾಸ್ವಂಗುಷ್ಠಕನಿಷ್ಠಕಾನಾಮಿಕಾಮಧ್ಯಮಾಭಿರ್ವಿನ್ಯಸ್ಯ ಕರ್ಣಪ್ರಾವರಣತ್ವೇನ ಸ್ತನಮಧ್ಯಾಂತಂ ಕವಚಂ ತರ್ಜನೀಭ್ಯಾಂ ವಿನ್ಯಸ್ಯ ಹಸ್ತತಲಯೋರಸ್ತ್ರಮನಾಮಿಕಾಭ್ಯಾಂ ವಿನ್ಯಸೇತ್**" ಈ ರೀತಿಯಾಗಿ ಹೇಳಲ್ಪಟ್ಟಿರುವುದರಿಂದ ಶಿವಸ್ಥಾನವೆನಿಸುವ ವಿಧ್ಯುಕ್ತ ಶಿಖೆಯಲ್ಲಿಯೇ ನ್ಯಾಸವು ಸಿದ್ಧಿಸುವುದಲ್ಲದೆ ಬೇರೆಯಲ್ಲ. ಯಾಕಂದರೆ— ಕ್ರಿಯಾಸಾರದ ೨೦ನೆಯ ಉಪದೇಶದಲ್ಲಿ—"**ಶಿಖಾಯಾಂ ಬಾಹುಮೂಲೇ ವಾ ಕಂಠದೇಶೇ ಹೃದಂಬುಜೇ । ಹೃದಯೇ ಶ್ಲಾಘ್ಯಮುದಿತಂ ಶಿವಲಿಂಗಸ್ಯ ಧಾರಣಂ**" ಎಂದು ಶಿವಲಿಂಗಧಾರಣವು ವಿಧ್ಯುಕ್ತಶಿಖೆಯಲ್ಲಿ ಹೇಳಲ್ಪಟ್ಟಿರುವುದರಿಂದ ಶಿಖೆಯು ಧರ್ಮಶಾಸ್ತ್ರಾನುಸಾರವಾಗಿ ಶಿವಸ್ಥಾನವೆನಿಸುವುದು. ಆದುದರಿಂದ ಕ್ರಿಯಾಸಾರಕಾರರು "**ಶಿವಸ್ಥಾನೇಷು ಹೃದಯಶಿರಶ್ಶಿಖಾಸು**" ಎಂಬ ವಾಕ್ಯದಿಂದ ನ್ಯಾಸಾರ್ಹವಾದ ಶಿಖೆಯೇ ಶಿವಸ್ಥಾನವೆಂದು ಸಿದ್ಧಾಂತಿಸಿದ್ದಾರೆ. ಈ ವಾಕ್ಯದಲ್ಲಿರುವ ಶಿಖಾಶಬ್ದಕ್ಕೆ ಶಿಖಾಸಂಬಂಧಿಮಸ್ತಕಾಗ್ರವೆಂದುಲಕ್ಷ್ಯಾರ್ಥವನ್ನು ಮಾಡಲಿಕ್ಕೆ ಬರುವುದಿಲ್ಲ. "**ಶಕ್ತೇಃ ಪೂರ್ವಪೂರ್ವ ಪ್ರಯೋಗನಿಯತತ್ವಾತ್**" ಎಂಬಂತೆ ಆ ಶಿಖಾಶಬ್ದವು ವಿಧ್ಯುಕ್ತಶಿಖೆಯಲ್ಲಿಯೇ ಶಕ್ತಿಯುಳ್ಳದ್ದಾಗಿರುವುದು. ಈ ವಿಧಿವಿಹಿತಕೇಶಸಮೂಹವೆಂಬ ವಾಚ್ಯಾರ್ಥಪರಿತ್ಯಾಗ ಮಾಡುವಲ್ಲಿ ಅನ್ವಯಾನುಪಪತ್ತಿಯಾಗಲಿ ತಾತ್ಪರ್ಯಾನುಪಪತ್ತಿಯಾಗಲಿ ಇಲ್ಲವೇಇಲ್ಲ. ಹಾಗೂ ವಿಧ್ಯುಕ್ತಕೇಶಸಮೂಹವೆಂಬ ಶಕ್ಯಾರ್ಥ (ವಾಚ್ಯಾರ್ಥ) ವನ್ನು ಬಿಟ್ಟು ಲಕ್ಷ್ಯಾರ್ಥವನ್ನು ಸ್ವೀಕ

ರಿಸಲು ಬೀಜವಿಲ್ಲ. ಆದುದರಿಂದ ಶಿಖಾಶಬ್ದಕ್ಕೆ ವಿಧ್ಯುಕ್ತಕೇಶಸಮೂಹ ವೆಂಬ ಅರ್ಥವನ್ನೇ ಮಾಡಬೇಕು. ಮಂತ್ರಶಾಸ್ತ್ರದ ಮರ್ಮವನ್ನು ಲೇಶ ಮಾತ್ರವೂ ಅರಿಯದ ಈತನು ಮರ್ಮಜ್ಞರಾದ ಗುರುಗಳನ್ನಾಶ್ರಯಿಸಿ ಅವರ ಮುಖದಿಂದ ತಿಳಿದುಕೊಂಡು ಮುಂದೆಯಾದರೂ ಈ ತರಹದ ವಕ್ರಮಾರ್ಗವನ್ನು ಹಿಡಿಯದೆ ಸಶಾಸ್ತ್ರವಾಗಿ ನಡೆದು ಧನ್ಯನಾಗಬೇ ಕೆಂದು ಬಯಸುತ್ತೇವೆ.

ಈತನು ೭೨ ನೆಯ ಪುಟದಲ್ಲಿ—

"ಮುಖೇಮಂತ್ರೋಹೃದಿಧ್ಯಾನಂ" ಇತ್ಯಾದಿ ಗೌತಮಸ್ಮೃತಿಯು ವೀರಶೈವ ಲಕ್ಷಣವನ್ನು ಬೋಧಿಸದೆ ಬ್ರಾಹ್ಮಣಸಾಮಾನ್ಯಲಕ್ಷಣವನ್ನು ಬೋಧಿಸುತ್ತದೆ. ಇದನ್ನು ವೀರಶೈವರಿಗೆ ಅನ್ವಯಿಸಿಕೊಳ್ಳುವುದು ಯುಕ್ತವಲ್ಲ."

ಎಂದು ಬರೆದಿದ್ದಾನೆ. ಈ ವಿಷಯವನ್ನು ವಿಮರ್ಶಿಸೋಣ!

**ಮುಖೇ ಮಂತ್ರೋ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಂ |**
**ಶಿಖಾರುದ್ರಾಕ್ಷಭಸ್ಮಾನಿ ಇತಿ ಬ್ರಾಹ್ಮಣಲಕ್ಷಣಂ ||**

ಎಂಬ ಈ ಗೌತಮಸ್ಮೃತಿವಾಕ್ಯದಲ್ಲಿ ಮುಂಡನವಾದಿಗಳಿಗೆ ವಜ್ರಾಘಾತ ಸದೃಶವಾಗಿರುವ ಶಿಖಾಶಬ್ದವಿರುವುದರಿಂದ ಈ ವಾಕ್ಯವನ್ನು ವೀರಶೈವ ರಿಗೆ ಅನ್ವಯಿಸಿಕೊಳ್ಳುವುದು ಯುಕ್ತವಲ್ಲವೆಂದು ಬರೆದಿರುವುದು ಅತ್ಯಂತ ತಿರಸ್ಕರಣೀಯವಾಗಿದೆ. ಅಯ್ಯಾ! ಘನಪಂಡಿತನೇ, ಶ್ರೀ ನಂದಿಕೇ ಶ್ವರಶಿವಾಚಾರ್ಯರು ಲಿಂಗಧಾರಣವನ್ನು ಸಿದ್ಧಾಂತಗೊಳಿಸುವುದ ಕ್ಕಾಗಿ ಲಿಂಗಧಾರಣಚಂದ್ರಿಕೆಯನ್ನು ಬರೆದಿರುವರಲ್ಲದೆ, ವೀರಶೈವರಲ್ಲ ದವರಿಗೆ ಲಿಂಗಧಾರಣ ಸಿದ್ಧಾಂತವನ್ನು ಸ್ಥಾಪನಗೊಳಿಸಲು ಬರೆದಿರುವು ದಿಲ್ಲವು. ವೀರಶೈವೇತರರಲ್ಲಿಯಂತೂ ಲಿಂಗಧಾರಣವೇ ಇಲ್ಲ. ಈ ವಿಷಯವು ಇಡೀ ಜಗತ್ತಿಗೆ ಗೊತ್ತಿದೆ. ಆದುದರಿಂದ ಗೌತಮ ಸ್ಮೃತಿಯ ಈ ಶ್ಲೋಕವು ವೀರಶೈವಪರವಾದುದಲ್ಲವೆನ್ನುವುದು ಮುಂಡನಾಭಿಮಾನದಫಲವೆಂದು ಸ್ಪಷ್ಟವಾಗುತ್ತದೆ. ಇರಲಿ; ಈತನು

ಈ ಶ್ಲೋಕದಲ್ಲಿ ಅರ್ಥಸಂಕೋಚವನ್ನು ಮಾಡಬೇಕಾಗುವುದೆಂದು ಬರೆದಿದ್ದಾನೆ. ಇಲ್ಲಿ ಹಾಗೆ ಅರ್ಥಸಂಕೋಚವನ್ನು ಮಾಡಲಿಕ್ಕೆ ಯಾವ ಕಾರಣವೂ ಇರುವುದಿಲ್ಲ. ಯಾಕಂದರೆ— ಈ ಶ್ಲೋಕವು ಯಾವನು ಮುಖದಲ್ಲಿ ಶಿವಮಂತ್ರವನ್ನೂ, ಹೃದಯದಲ್ಲಿ ಶಿವಧ್ಯಾನವನ್ನೂ, ಮಸ್ತಕದಲ್ಲಿ ಶಿವಲಿಂಗಧಾರಣವನ್ನೂ, ಶಿಖೆಯನ್ನೂ, ರುದ್ರಾಕ್ಷಗಳನ್ನೂ, ಭಸ್ಮವನ್ನೂ ಧರಿಸುವನೋ ಅವನೇ ಬ್ರಾಹ್ಮಣನೆಂದು ಸಾರುತ್ತದಲ್ಲದೆ, ಈ ಲಕ್ಷಣಗಳಿಲ್ಲದವರಲ್ಲಿ ಬ್ರಾಹ್ಮಣ್ಯವಿಲ್ಲವೆಂಬ ಭಾವವನ್ನು ಸ್ಪಷ್ಟಪಡಿಸುತ್ತದೆ. ಲಿಂಗಧಾರಣಚಂದ್ರಿಕಾಕಾರರು ಮಂತ್ರ, ಧ್ಯಾನ, ಲಿಂಗಧಾರಣ, ಶಿಖಾ, ರುದ್ರಾಕ್ಷ, ಭಸ್ಮ ಈ ಆರು ಧರ್ಮಗಳಿಂದ ಕೂಡಿದವರೇ ಲಿಂಗಾಂಗಿಬ್ರಾಹ್ಮಣರೆಂದು ಸಿದ್ಧಾಂತಗೊಳಿಸಿದ್ದರೂ ಈತನು ಅವರ ಅಭಿಪ್ರಾಯಕ್ಕೆ ವಿರುದ್ಧವಾಗಿ 'ಶಿಖಾಯಾಂ ರುದ್ರಾಕ್ಷಭಸ್ಮಾನಿ' ಎಂದು ಸಮಾಸಮಾಡಬೇಕೆಂದು ಬರೆದಿರುವುದನ್ನು ನೋಡಿದರೆ ಈತನ ವಿಕಟಪಾಂಡಿತ್ಯಕ್ಕೆ ಪಾರವೇ ಇಲ್ಲವೆಂದು ಹೇಳಬೇಕಾಗುತ್ತದೆ. ಈತನ ಅಭಿಪ್ರಾಯದಂತೆಯೇ ಹೋದರೆ ಐದೇ ಧರ್ಮಗಳು ಸಿದ್ಧಿಸುವುವಲ್ಲದೆ ಆರು ಧರ್ಮಗಳು ಸಿದ್ಧಿಸುವುದಿಲ್ಲ. ಲಿಂಗಧಾರಣಚಂದ್ರಿಕಾರರು "ನನ್ವೇವಮಪಿ ಲಿಂಗಾಗಿಬ್ರಾಹ್ಮಣೋದ್ದೇಶೇನ ಮಂತ್ರಧ್ಯಾನಾದಿಷಡ್ವಿಧಧರ್ಮಸಮುದಾಯಸ್ಯ ಲಕ್ಷಣಕರಣೇ ತಥಾವಿಧಕ್ಷತ್ರಿಯಾದಾವತಿಪ್ರಸಕ್ತಮಿತಿಚೇನ್ನ । ಇತಿ ಬ್ರಾಹ್ಮಣಲಕ್ಷಣಮಿತಿವಾಕ್ಯಾನುರೋಧೇನ ಬ್ರಾಹ್ಮಣತ್ವೇ ಸತಿ ಷಡ್ವಿಧಧರ್ಮವತ್ತ್ವಂ ಲಿಂಗಾಂಗಿಬ್ರಾಹ್ಮಣಾನಾಂ ಲಕ್ಷಣಮಿತ್ಯತ್ರ ತಾತ್ಪರ್ಯಾವಸಾಯಾತ್ ಇತಿ ||" ಎಂಬೀ ವಾಕ್ಯಗಳಿಂದ ಲಿಂಗಾಂಗಿ ಬ್ರಾಹ್ಮಣರಿಗೆ ಆರು ಧರ್ಮಗಳುಂಟೆಂದು ಹೇಳಿದ್ದಾರೆ. ಅಂದ ಮೇಲೆ ಈತನು ತನ್ನ ಮುಂಡನವನ್ನು ಸಾಧಿಸುವುದಕ್ಕಾಗಿ ದುರಭಿಮಾನದಿಂದ ಲಿಂಗಧಾರಣಚಂದ್ರಿಕಾರರ ಅಭಿಪ್ರಾಯಕ್ಕೆ ವಿರುದ್ಧವಾಗಿ

'ಶಿಖಾಯಾಂ ರುದ್ರಾಕ್ಷಭಸ್ಮಾನಿ' ಎಂದು ಸಮಾಸಮಾಡಿರುವುದು
ಮಂದತನವಲ್ಲವೇ? ಆದುದರಿಂದ ಈತನ ಅಭಿಪ್ರಾಯವು ಕೇವಲ
ತುಚ್ಛವಾದುದೆಂದೇ ಸಾರಿಸಾರಿ ಹೇಳಬೇಕಾಗುವುದು. ಈತನು ಗೌತಮ
ಸ್ಮೃತಿಯ ಶ್ಲೋಕದಲ್ಲಿ ಸ್ಥಾನಗಳನ್ನು ಕಲ್ಪಿಸಿ ಹೀಗೆ ಸಮಾಸಮಾಡಿರು
ವುದನ್ನು ನೋಡಿದರೆ ಹುಡುಗರೂ ಕೂಡ ನಗುವಂತಿದೆ. ಈ ಸಂದರ್ಭ
ದಲ್ಲಿ ಈತನು ಪಂಡಿತಪಾಮರರೆಲ್ಲರೂ ನಗುವಂತೆ ೭೨—೭೩ ನೆಯ
ಪುಟಗಳಲ್ಲಿ ಸಂಬಂಧವಿಲ್ಲದ ನಿಷ್ಪ್ರಯೋಜನ ಹಾಳುಹರಟೆಯ ಮಾತುಗ
ಳನ್ನು ಬರೆದಿದ್ದಾನೆ. ಆ ಹರಟೆಯ ಮಾತುಗಳೆಲ್ಲವೂ ಇಲ್ಲಿ ಬರೆದಿರುವ
ಲಿಂಗಧಾರಣಚಂದ್ರಿಕಾಕಾರರ ಮಾತುಗಳಿಂದಲೇ ಖಂಡಿಸಲ್ಪಟ್ಟವೆಂದು
ತಿಳಿಯಬೇಕು. ಈತನು ಮುಂಡನರೂಪದುರಭಿಮಾನದಿಂದ ಕೂಡಿ
ಶಾಸ್ತ್ರೀಯವಾಕ್ಯಗಳಿಗೆಲ್ಲಾ ವಿಕಟಪಂಡಿತನಂತೆ ಅಪಾರ್ಥಮಾಡಿ
ಲೋಕದಲ್ಲಿ ಹಾಸ್ಯಾಸ್ಪದನಾಗುವುದಕ್ಕಿಂತಲೂ ಮೌನದಿಂದಿರುವುದು
ಲೇಸಲ್ಲವೇ? ದೇವರು ಈತನಿಗೆ ಈ ತರಹದ ಬುದ್ಧಿಯನ್ನನುಗ್ರಹಿಸ
ಲೆಂದು ಆ ಜಗನ್ನಿಯಾಮಕನನ್ನು ಸರ್ವರೂ ಪ್ರಾರ್ಥಿಸಬೇಕಾಗಿದೆ.

ಈತನು ೭೪-೭೫ ನೆಯ ಪುಟಗಳಲ್ಲಿ—

"ಚೌಲಕರ್ಮವು ಬಾಲಕರಿಗೆ 3 ವರ್ಷಗಳಲ್ಲಿ ಆಗತಕ್ಕ ಒಂದು ಸಂಸ್ಕಾರ
ವಾಗಿದೆ. ಇದನ್ನು ಹೊಂದಿರುವ ವೀರಶೈವಬಾಲಕರು ಸಾಮಾನ್ಯವೀರಶೈವರಲ್ಲಿ ಅಂತ
ರ್ಗತರಾಗುವರು. ಚೌಲಕರ್ಮದಲ್ಲಿ ಬಾಲಕರಿಗೆ ಬಿಡಿಸಲ್ಪಡುವ ಏಕಶಿಖಾದಿಗಳು
ದ್ವಿಜತ್ವಾದಿಪ್ರಯೋಜಕವಾಗಿರದೆ ಕೇವಲ ಮಾಂಗಲ್ಯಪ್ರಯೋಜಕವಾಗಿರುವವು.
ಹಾಗೂ ಚೌಲವಿಧಿಯಲ್ಲಿ ಬಾಲಕರಿಗೆ ಕೇವಲ ಚತುರಂಗುಲಪರಿಮಿತವಾದ ಶಿಖೆಯು
(ಜುಟ್ಟು) ನ್ನೇ ಬಿಡಿಸಬೇಕೆಂದು ಹೇಳದೆ ಅವರವರ ಕುಲಧರ್ಮಪ್ರಕಾರವಾಗಿ ಒಂದೇ
ಶಿಖೆಯನ್ನಾಗಲಿ ಮೂರು ಐದು ಶಿಖೆಗಳನ್ನಾಗಲಿ ಅಥವಾ ಜುಲುಪಿಯನ್ನಾಗಲಿ ಬಿಡಿಸಬ
ಹುದೆಂದು ಸ್ಪಷ್ಟವಾಗಿ ಹೇಳಿರುವದರಿಂದ ಬಾಲಕರಿಗೂ ಸಹ ಶಿಖೆಯು ಇಲ್ಲದಿದ್ದರೂ
ಅಭ್ಯಂತರವಿಲ್ಲವೆಂದು ವ್ಯಕ್ತವಾಗುತ್ತದೆ."

ಎಂದು ಬರೆದಿದ್ದಾನೆ. ಚೌಲಕರ್ಮವು ಬಾಲಕರಿಗೆ 3 ನೆಯ ವರ್ಷ ದಲ್ಲಾಗುವುದು ಶಾಸ್ತ್ರವಿಹಿತವಾಗಿದೆ. ಹೀಗಿದ್ದರೂ ಈತನು "ಮೂರು ವರ್ಷಗಳಲ್ಲಿ ಆಗತಕ್ಕ ಸಂಸ್ಕಾರವಾಗಿದೆ" ಎಂದು ಬರೆದಿದ್ದಾನೆ. ಇದ ರಿಂದ ಏನರ್ಥವಾಗುವುದೋ ತಿಳಿಯದಾಗಿದೆ. ಇರಲಿ; ಅಲ್ಲದೆ ಈತನು ಚೌಲಕರ್ಮವನ್ನು ಹೊಂದುವ ವೀರಶೈವಬಾಲಕರೆಲ್ಲರೂ ಸಾಮಾನ್ಯ ವೀರಶೈವರಲ್ಲಿ ಅಂತರ್ಗತರಾಗುತ್ತಾರೆಂದು ಬರೆದಿರುತ್ತಾನೆ. ಹೀಗೆ ಬರೆ ಯುವುದು ಧರ್ಮಶಾಸ್ತ್ರವನ್ನು ಕಣ್ದೆರೆದು ನೋಡದಿದ್ದುದರ ಫಲವಾಗಿದೆ. ಎಲ್ಲ ಬಾಲಕರೂ ಸಾಮಾನ್ಯವೀರಶೈವರಲ್ಲ; ವೀರಶೈವಬ್ರಾಹ್ಮಣ ಬಾಲ ಕರು ವಿಶೇಷವೀರಶೈವರಾಗುತ್ತಾರೆ. ವೀರಶೈವಕ್ಷತ್ರಿಯಾದಿಬಾಲಕರು ಸಾಮಾನ್ಯವೀರಶೈವರಾಗುತ್ತಾರೆ. ಅಸ್ತು! ಈತನು ಚೌಲವಿಧಿಯಲ್ಲಿ ಬಿಡುವ ಏಕಶಿಖಾದಿಗಳು ಮಂಗಲಪ್ರಯೋಜಕಗಳೆಂದು ಬರೆದಿದ್ದಾನೆ. ಇದು ತಪ್ಪು. ವೀರಶೈವಸದಾಚಾರಸಂಗ್ರಹದಲ್ಲಿಯೂ ದಶಕರ್ಮಪದ್ಧತಿ ಯಲ್ಲಿಯೂ "ಆಯುಷ್ಯಾಭಿವೃದ್ಧ್ಯರ್ಥಂ ಚೌಲಕರ್ಮಣಾ ಸಂಸ್ಕ ರಿಷ್ಯೆ" ಆಯುಷ್ಯಾಭಿವೃದ್ಧಿಪ್ರಯೋಜನಕ್ಕಾಗಿ ಚೌಲಕರ್ಮದಿಂದ ಸಂಸ್ಕರಿಸಬೇಕೆಂದು ಹೇಳಿರುವುದರಿಂದ, ಏಕಶಿಖಾದಿಗಳು ಆಯುಷ್ಯಾಭಿ ವೃದ್ಧಿಪ್ರಯೋಜಕಗಳಾಗಿರುವುವಲ್ಲದೆ ಮಂಗಲಪ್ರಯೋಜಕಗಳಾಗಿಲ್ಲ ವೆಂದು ತಿಳಿಯಬೇಕು. ಏಕಶಿಖಾ, ತ್ರಿಶಿಖಾ, ಪಂಚಶಿಖಾ ಅಥವಾ ಪುರಶ್ಚೂಡಾ ಇವುಗಳನ್ನು ಚೌಲವಿಧಿಯಲ್ಲಿ ಅವರವರ ಕುಲಪದ್ಧತಿ ಗನುಸರಿಸಿ ಬಿಡಿಸಬೇಕೆಂದು ಹೇಳಿರುವುದು ನ್ಯಾಯವಾಗಿದೆ ಈ ತತ್ತ್ವ ಕ್ಕನುಸಾರವಾಗಿಯೇ ವೀರಶೈವಬ್ರಾಹ್ಮಣಬಾಲಕರಿಗೆ ಏಕಶಿಖೆಯನ್ನು ಬಿಡಿಸಬೇಕು. ಬ್ರಾಹ್ಮಣೇತರರು ತಮ್ಮ ಕುಲಪದ್ಧತಿಗನುಸಾರವಾಗಿ ಯಾವರೀತಿಯಿಂದಾದರೂ ಬಿಡಿಸಬಹುದು. ಹೀಗಿದ್ದರೂ, ಬಾಲಕರಿಗೆ ಶಿಖೆಯು ಇಲ್ಲದಿದ್ದರೂ ಅಭ್ಯಂತರವಿಲ್ಲವೆಂದು ಈತನು ಬರೆದಿರುವುದು ಕೇವಲ ಅಯುಕ್ತವು.

ಈತನು ೭೫ ನೆಯ ಪುಟದಲ್ಲಿ—

"ಚೌಲಕರ್ಮದಲ್ಲಿ ಬಿಡಿಸಲ್ಪಟ್ಟ ಏಕಶಿಖಾದಿಗಳು "ಗರ್ಭಾಷ್ಟಮೇ ಕೃತಾ ದೀಕ್ಷಾ ಮುಖ್ಯಾ" ಇತ್ಯಾದಿ ಶಿವಾಗಮವಚನಾನುಸಾರವಾಗಿ ೮ ನೆಯ ವರ್ಷದಲ್ಲಿ ಮಾಡಲ್ಪಡುವ ಶಿವದೀಕ್ಷಾ ಸಂಸ್ಕಾರದಲ್ಲಿ "ದೀಕ್ಷಾಕಾಲೇ ಬಾಲಕಾನಾಂ ತ್ವಥ ತಾರುಣ್ಯಶಾಲಿನಾಂ | ವೃದ್ಧಾನಾಂ ಮಧ್ಯಮಾನಾಂಚ ಸರ್ವಕೇಶವಿಮುಂಡನಂ" ಎಂಬ ವಾತುಲಸಿದ್ಧಾಂತವಚನದಂತೆ ಅವಶ್ಯವಶ್ಯವಾಗಿ ಬೋಳಿಸಲ್ಪಡುತ್ತವೆ. ಆದ್ದರಿಂದ ಚೌಲಕರ್ಮದಲ್ಲಿ ವೀರಶೈವಬಾಲಕರಿಗೆ ದೀಕ್ಷಾಕಾಲದವರೆಗೂ ವೈಕಲ್ಪಿಕವಾಗಿ ಏಕಶಿಖಾದಿ ಪ್ರತಿಪಾದಕಪ್ರಮಾಣಗಳಿಂದ ಶಿವದೀಕ್ಷಾವಿಶಿಷ್ಟರಾದ ವೀರಶೈವರಿಗೆ ಶಿಖಾಧಾರಣವನ್ನು ಹೇಳುವದು ಕೇವಲ ಮೂಢತನವು,"

ಎಂದು ಬರೆದಿದ್ದಾನೆ. ಈ ವಿಷಯವನ್ನು ವಿಮರ್ಶಿಸೋಣ!

ಚೌಲಕರ್ಮದಲ್ಲಿ ಬಿಡಿಸಲ್ಪಟ್ಟ ಶಿಖೆಯನ್ನು ಬೋಳಿಸಬೇಕೆಂದು ಯಾವ ಆಗಮಗಳೂ ಹೇಳುವುದಿಲ್ಲ. ಈತನು ಉದಾಹರಿಸಿರುವ ಶ್ಲೋಕವು ವಾತುಲಾಗಮಶ್ಲೋಕವಲ್ಲ. ಈ ವಿಷಯವು ೧೨೯ ನೆಯ ಪುಟದಲ್ಲಿ ಹೇಳಲ್ಪಟ್ಟಿದೆ. ಅಲ್ಲಿ ನೋಡಿಕೊಳ್ಳಬೇಕು. ಈತನು ಉದಾಹರಿಸಿರುವ "ಗರ್ಭಾಷ್ಟಮೇಕೃತಾದೀಕ್ಷಾ" ಎಂಬ ಶ್ಲೋಕಕ್ಕೂ "ದೀಕ್ಷಾಕಾಲೆ" ಎಂಬ ಅಮಂಗಲಶ್ಲೋಕಕ್ಕೂ ಪರಸ್ಪರ ವಿರೋಧವಿರುತ್ತದೆ. ಈ ವಿಷಯವನ್ನು ಈತನು ನಿರ್ಮಲಮನಸ್ಸಿನಿಂದ ಯೋಚಿಸಬೇಕು. ದೀಕ್ಷಾವಿಧಿಯು ದೀಕ್ಷಾಸಮಯದಲ್ಲಿ ಶಿಖೆಯನ್ನಿರಿಸಬೇಕೆಂದು ಶಾಸನಮಾಡಿರುವ ವಿಷಯವು ಈ ಮೊದಲೇ ಪ್ರತಿಪಾದಿಸಲ್ಪಟ್ಟಿರುವುದರಿಂದ ದೀಕ್ಷಾಸಮಯದಲ್ಲಿ ಶಿಖೆಯನ್ನು ಬೋಳಿಸಬೇಕೆಂದು ಹೇಳುವುದು ಶುದ್ಧ ಶೂದ್ರಬೌದ್ಧಾದಿಗಳ ಧರ್ಮವಾಗಿದೆ.

"ಜಿನ್ನಾನಾಮಪಿ ಬುದ್ಧಾನಾಮಿತರೇಷಾಂ ಚ ಪಾರ್ವತಿ |
ಲುಂಠನಂ ಕೃಂತನಂ ಪ್ರಾಪ್ತಂ ಶೂದ್ರಾಣಾಂ ಸರ್ವದಾ ತಥಾ ||

ಇತ್ಯಾದಿ ಶ್ಲೋಕಗಳಿಂದ ಮತಗ್ರಂಥಗಳು ಬೌದ್ಧ ಜೈನ ಶೂದ್ರಾದಿಗಳು ಬೋಳಿಸಬೇಕೆಂದು ಶಾಸನಮಾಡುವುದರಿಂದ, ಈತನು ಇದನ್ನು

ಸರ್ವೋತ್ತಮವೈದಿಕರಾದ ವೀರಶೈವದ್ವಿಜರಿಗೆ ಸಂಬಂಧಿಸಿರುವುದು. ಅತ್ಯಂತ ಹೇಯವಾಗಿದೆ. ಈತನು ೭೫-೭೬ ನೆಯ ಪುಟಗಳಲ್ಲಿ—

"ತಾಸಾಂ ಮಧ್ಯಶಿಖಾವರ್ಜಮುಪನಯನಂಕಾರ್ಯಂ" ಎಂಬೀ ಶ್ರುತಿವಚನವು ಕೇವಲ ಮಧ್ಯಶಿಖೆಯನ್ನುಳಿಸಿ ಉಪನಯನವಮಾಡಬೇಕೆಂದು ಅಭಿಪ್ರಾಯಪಡುತ್ತದೆಯಲ್ಲದೆ ಶಿವದೀಕ್ಷೆಯನ್ನು ಮಾಡಬೇಕೆಂದು ಅಭಿಪ್ರಾಯಪಡುವದಿಲ್ಲ. ಉಪನಯನವು ಕೇವಲ ಪ್ರಾಕೃತಸಂಸ್ಕಾರವಾಗಿದ್ದು, ಪ್ರಾಕೃತರು ಇದಕ್ಕೆ ಮುಂಜಿಯೆನ್ನುವರು............ಆದುದರಿಂದ ಬಸವಾದಿಗಳು ಉಪನಯನವನ್ನು ನಿರಾಕರಿಸಿದ್ದು ಪ್ರಸಿದ್ಧವಾಗಿದೆ."

ಎಂದು ಬರೆದಿದ್ದಾನೆ. ಈ ವಿಷಯವನ್ನು ವಿಮರ್ಶಿಸೋಣ! ಈತನು ಉದಾಹರಿಸಿರುವ ಶ್ರುತಿವಾಕ್ಯವು ಮಧ್ಯಶಿಖೆಯನ್ನುಳಿಸಿ ಉಪನಯನವನ್ನು ಮಾಡಬೇಕೆಂದು ಶಾಸನಮಾಡುವುದಲ್ಲದೆ, ಕೇವಲ ಪ್ರಾಕೃತೋಪನಯನವನ್ನು ಮಾಡಬೇಕೆಂದು ಶಾಸನಮಾಡುವುದಿಲ್ಲ. "ಗರ್ಭಾಷ್ಟಮೇ ಪ್ರಕುರ್ವೀತ ಬ್ರಾಹ್ಮಣಸ್ಯೋಪನಯನಂ" "ಗರ್ಭಾಷ್ಟಮೇ ಕೃತಾ ದೀಕ್ಷಾ" ಎಂಬ ವಾಕ್ಯಗಳಿಂದ ಶಿವದೀಕ್ಷೆಗೂ ಉಪನಯನಕ್ಕೂ ಕಾಲವ್ಯತ್ಯಾಸವಿಲ್ಲವೆಂದು ಸಿದ್ಧವಾಗುತ್ತದೆ. ಆದುದರಿಂದಲೇ "ಶ್ರೌತಾನಾಮುಪನಯನಕಾಲೇ ಧಾರಣಂ" ಎಂಬ ಲಿಂಗೋಪನಿಷದ್ವಾಕ್ಯದಿಂದ ಉಪನಯನಕಾಲದಲ್ಲಿಯೇ ಲಿಂಗಧಾರಣಾತ್ಮಕ ಶಿವದೀಕ್ಷೆಯು ವಿಹಿತವಾಗಿರುವುದು. ವೀರಶೈವದ್ವಿಜರು ಉಪನಯನವಿಹಿತ ಶಿವಸೂತ್ರಧಾರಣವನ್ನಾಗಲಿ, ದೀಕ್ಷಾವಿಹಿತಲಿಂಗಧಾರಣವನ್ನಾಗಲಿ ಬೇರೆ ಬೇರೆ ಕಾಲಗಳಲ್ಲಿ ಮಾಡದೆ ಒಂದೇ ಕಾಲದಲ್ಲಿ ಮಾಡುತ್ತಾರೆ. ಉಪನಯನಸಂಸ್ಕಾರವಿಲ್ಲದವರಿಗೆ ವೇದಾಧ್ಯಯನಾದಿಗಳು ಅಪಶೂದ್ರಾಧಿಕರಣದಲ್ಲಿ ನಿಷೇಧಿಸಲ್ಪಟ್ಟಿರುವುವು. "ತದಭಾವನಿರ್ಧಾರಣೇಚ ಪ್ರವೃತ್ತೇಃ" ಎಂಬ ಬ್ರಹ್ಮಸೂತ್ರದಿಂದಲೂ ಉಪನಯನಸಂಸ್ಕಾರವಿಲ್ಲದವರಿಗೆ ವೇದಾಧಿಕಾರವೇ ಇಲ್ಲವೆಂದು ಸಿದ್ಧವಾಗುತ್ತದೆ. ಆದುದರಿಂದ ಪರಮವೈದಿಕ

ರಾದ ವೀರಶೈವದ್ವಿಜರಿಗೆ ಉಪನಯನವಿಲ್ಲವೆಂದು ಹೇಳಿರುವುದು ಧರ್ಮ ಶಾಸ್ತ್ರಜ್ಞಾನಶೂನ್ಯತೆಯ ಹೆಗ್ಗುರುತಾಗಿದೆ. ಈ ಸಂದರ್ಭದಲ್ಲಿ ಈತನು ಬಸವಾದಿಗಳ ದೃಷ್ಟಾಂತವನ್ನು ತೆಗೆದುಕೊಂಡಿದ್ದಾನೆ. ಬಸವಾದಿಗಳು ರಾಜ್ಯದಾಶೆಗಾಗಿ ಪರರಾಜರಮೇಲೆ ದಾಳಿಯನ್ನಿಡಬೇಕೆಂಬ ದುರಾಶೆ ಯಿಂದ ಜಾತಿಧರ್ಮಗಳನ್ನೆಲ್ಲಾ ಬಿಟ್ಟು ನೀಚನೀಚ ಜಾತಿಯವರನ್ನೆಲ್ಲಾ ಕೂಡಿಹಾಕಿ ಧರ್ಮಶಾಸ್ತ್ರವಿರುದ್ಧವಾದ ದುಷ್ಟಕಾರ್ಯವನ್ನು ಮಾಡಿದ ರಲ್ಲದೆ ಬೇರೆಯಿಲ್ಲ. ಇಂಥವರ ವಿಷಯವನ್ನು ದೃಷ್ಟಾಂತವನ್ನಾಗಿ ತೆಗೆದುಕೊಂಡಿರುವುದು ಧರ್ಮಶಾಸ್ತ್ರ ಮತ್ತು ಇತಿಹಾಸಗಳನ್ನು ನೋಡ ದಿದ್ದುದರ ಫಲವಾಗಿದೆ. ಉಪನಯನಶಿವದೀಕ್ಷಾಸಂಬಂಧಗಳಾದ ಶಿವಸೂತ್ರ-ಶಿವಲಿಂಗಧಾರಣದ ವಿಷಯವನ್ನು ಈ ಪುಸ್ತಕದಲ್ಲಿ ಅನೇಕ ಕಡೆ ಹೇಳಿದ್ದೇವೆ. ನೋಡಿಕೊಂಡು ಭ್ರಾಂತಿಯಿಂದ ದೂರನಾಗಬೇಕು.

ಈತನು ೭೬ನೆಯ ಪುಟದಲ್ಲಿ—

"ದೀಕ್ಷೆಯಲ್ಲಿ ಸಾಧಕನಿಗೆ ಲಿಂಗಾಂಗಸಾಮರಸ್ಯಬೋಧಕವಾದ ತತ್ತ್ವಮ ಸ್ಯಾದಿ ಮಹಾವಾಕ್ಯೋಪದೇಶವಾಗುವಂತೆ ಮುಂಜಿಯಲ್ಲಾಗುವುದಿಲ್ಲ."

ಎಂದು ಬರೆದಿದ್ದಾನೆ. ಈತನು ಹೀಗೆ ಬರೆದಿರುವುದು ಅತ್ಯಂತ ಅಯೋಗ್ಯ ವಾಗಿದೆ. ಶಿವದೀಕ್ಷೆಯಲ್ಲಿ ಪಂಚಾಕ್ಷರೀಮಹಾಮಂತ್ರೋಪದೇಶ ವಾಗುವುದಲ್ಲದೆ ತತ್ತ್ವಮಸ್ಯಾದಿ ಮಹಾವಾಕ್ಯೋಪದೇಶವಾಗುವುದಿಲ್ಲ. ಈ ವಿಷಯವು ದೀಕ್ಷೆಯಾದವರೆಲ್ಲರಿಗೂ ಗೊತ್ತಿರುತ್ತದೆ. ಉಳಿದವರಿಗೆ ಗೊತ್ತಾಗುವುದು ಕಠಿಣ! ಇರಲಿ; ಈ ಮಹಾವಾಕ್ಯವಿಚಾರಾಧಿಕಾರವು ಉಪನಯನ ಮತ್ತು ದೀಕ್ಷಾ ಇವೆರಡೂ ಆದನಂತರ ಬರುವುದಲ್ಲದೆ, ಕೇವಲ ಉಪನಯನದಲ್ಲಾಗಲಿ ಅಥವಾ ಕೇವಲ ದೀಕ್ಷೆಯಲ್ಲಾಗಲಿ ಬರುವುದಿಲ್ಲವೆಂಬ ಶಾಸ್ತ್ರವಿಷಯವನ್ನು ಈತನು ತಿಳಿದುಕೊಂಡು ಭ್ರಾಂತಿ ದೂರನಾಗಬೇಕು.

ಈತನು ೭೬-೭೭ ನೆಯ ಪುಟಗಳಲ್ಲಿ—

ಉಪನಯನ ಮತ್ತು ದೀಕ್ಷಾ ವಿಷಯವನ್ನೆತ್ತಿಕೊಂಡು—

"ವೀರಶೈವಮತದಲ್ಲಿ ದೀಕ್ಷೆಯ ವ್ಯವಹಾರವಿರುವಂತೆ ಉಪನಯನದ ವ್ಯವಹಾರವಿಲ್ಲ. ಆದುದರಿಂದ ಉಪನಯನವು ದೀಕ್ಷೆಗಿಂತಲೂ ಸ್ವತಂತ್ರವೆಂಬುದು ಸಿದ್ಧಾಂತವು."

ಎಂದು ಬರೆದಿದ್ದಾನೆ. ಇದು ನಿಜವು. ಉಪನಯನವೇ ಬೇರೆ; ದೀಕ್ಷೆಯೇ ಬೇರೆ. ಉಪನಯನವು ಜಾತಿಸಂಸ್ಕಾರವು; ದೀಕ್ಷೆಯು ಮತ ಸಂಸ್ಕಾರವು. ಆದುದರಿಂದ ಇವೆರಡೂ ಭಿನ್ನಭಿನ್ನಗಳಾಗಿವೆ. ವೀರಶೈವ ದ್ವಿಜರಲ್ಲಿ ಜಾತಿಸಂಸ್ಕಾರರೂಪವಾದ ಉಪನಯನವೂ, ಮತಸಂಸ್ಕಾರ ರೂಪವಾದ ದೀಕ್ಷೆಯೂ ಅನಾದಿಕಾಲದಿಂದ ವ್ಯವಹಾರದಲ್ಲಿರುವುವು. ವೀರಶೈವಶೂದ್ರರಲ್ಲಿ ಮಾತ್ರ ಈತನು ಹೇಳುವಂತೆಯೂ, ಶಾಸ್ತ್ರದಂತೆ ಯೂ ದೀಕ್ಷೆಯೊಂದೇ ವ್ಯವಹಾರದಲ್ಲಿರುವುದು.

ಈತನು ೭೭ನೆಯ ಪುಟದಲ್ಲಿ—

"ಸದಾ ಬದ್ಧಶಿಖೇನಚ" ಎಂಬ ಸ್ಮೃತಿವಚನವು ಯಾವಾಗಲೂ ಶಿಖಾಬದ್ಧ ನಾಗಿ ಕರ್ಮಗಳನ್ನು ಆಚರಿಸಬೇಕೆಂದು ಬೋಧಿಸುವುದು. ಇದು ಸಕಲರಿಗೂ ಅನ್ವಿತ ವಾದುದಲ್ಲ. ಯಾಕೆಂದರೆ, ಬ್ರಾಹ್ಮಣಾದಿಗಳಲ್ಲಿ ಬ್ರಹ್ಮಚಾರಿ ವಾನಪ್ರಸ್ಥಾಶ್ರಮಿಗಳಿಗೆ ಜಟಾಧಾರಣವು ಹೇಳಲ್ಪಟ್ಟಿರುವುದರಿಂದ ಅವರೀರ್ವರಲ್ಲಿ ಶಿಖೆಯು (ಜುಟ್ಟು) ಸದಾ ಬದ್ಧವಾಗಿರಲಿಕ್ಕೆ ಅವಕಾಶವಿಲ್ಲ. ಬ್ರಾಹ್ಮಣಾದಿ ಸನ್ಯಾಸಿಗಳು ಶಿಖೆಯಿಲ್ಲದೆ ಯಾವಾ ವಾಗಲೂ ಸನ್ಯಾಸಾಶ್ರಮಕ್ಕೆ ಸಂಬಂಧಪಟ್ಟ ಕರ್ಮಗಳನ್ನು ಆಚರಿಸುವದರಿಂದ ಬ್ರಾಹ್ಮ ಣಾದಿ ಸನ್ಯಾಸಿಗಳಲ್ಲಿ "ಸದಾ ಬದ್ಧಶಿಖೇನ ಚ" ಎಂಬ ಸ್ಮೃತಿವಚನಾರ್ಥಪ್ರವೃ ತ್ತಿಯು ಬಾಧಿತವಾಗಿದೆ. ಪಾರಿಶೇಷನ್ಯಾಯದಿಂದ ಗೃಹಸ್ಥಾಶ್ರಮಿಗಳು "ಸದಾಬದ್ಧ ಶಿಖೇನ ಚ" ಎಂಬ ಸ್ಮೃತಿವಚನದಂತೆ ಯಾವಾಗಲೂ ಶಿಖಾಬದ್ಧರಾಗಿ ಕರ್ಮಗಳನ್ನು ಆಚರಿಸಬೇಕೆಂದು ಹೇಳುವದಾದರೂ ಯುಕ್ತವಲ್ಲ. ಯಾಕೆಂದರೆ ಸತ್ರವಿಶೇಷದಲ್ಲಿ ಪ್ರಾಯಶ್ಚಿತ್ತವಿಶೇಷದಲ್ಲಿ ಗೃಹಸ್ಥಾಶ್ರಮಿಯಾದರೂ ಮುಂಡಿಯಾಗಿರಬಹುದೆಂದು ಕ್ರಿಯಾಸಾರದ ೬ನೆಯ ಉಪದೇಶದಲ್ಲಿ ಶೈವಪ್ರಕರಣದಲ್ಲಿ "ಸತ್ರವಿಶೇಷೇ ಪ್ರಾಯ

ಶ್ಚಿತ್ತವಿಶೇಷೇ ಗೃಹಸ್ಥಸ್ಯಾಪಿ ಮುಂಡನಸ್ಯ ವಿಹಿತತ್ವಾತ್'' ಎಂಬ ವಾಕ್ಯದಿಂದ ಉಕ್ತವಾಗಿದೆ........ಇದರಿಂದ ಪ್ರಾಕೃತಕರ್ಮಾತೀತರಾದ ವೀರಶೈವರಿಗೆ ಪ್ರಾಕೃತ ಕರ್ಮಾಂಗವಾದ ಶಿಖೆಯು ಸಿದ್ಧವಾಗುವುದೆಂದು ಹೇಳುವುದು ಕೇವಲ ಭ್ರಾಂತಿಯು.'' ಎಂದು ಬರೆದಿದ್ದಾನೆ. ಈ ವಿಷಯವನ್ನು ವಿಮರ್ಶಿಸೋಣ!

ವೀರಶೈವರಲ್ಲಿರುವ ಶಿಖಾದಿಗಳು ಪ್ರಾಕೃತಕರ್ಮಾಂಗಗಳಾಗಿರದೆ ಅಪ್ರಾಕೃತಕರ್ಮಾಂಗಗಳಾಗಿರುವುವೆಂಬುದನ್ನು ನಾವು ಈ ಮೊದಲು ಧರ್ಮಶಾಸ್ತ್ರಾನುಸಾರವಾಗಿ ಎಷ್ಟೋಸಾರಿ ಹೇಳಿದ್ದೇವೆ. ಈತನು ಈ ವಿಷಯವನ್ನು ಚೆನ್ನಾಗಿ ತಿಳಿದುಕೊಳ್ಳಬೇಕು. ವೀರಶೈವದ್ವಿಜನೆನಿಸುವ ಬ್ರಹ್ಮಚಾರಿಗೆ ಶಿಖಾಧಾರಣವು ಅವಶ್ಯವಾಗಿರಬೇಕೆಂಬುದನ್ನು ಈ ಮೊದಲೇ ಸಿದ್ಧಮಾಡಿದ್ದೇವೆ. ವಾನಪ್ರಸ್ಥನಿಗೆ ಜಡೆಯು ಹೇಳಲ್ಪಟ್ಟಿರುವುದರಿಂದ ಜಟಾಂತರ್ಗತಶಿಖಾಧಾರಣವು ಸಿದ್ಧಿಸಿಯೇ ಸಿದ್ಧಿಸುತ್ತದೆ. "ಸಶಿಖಂ ವಪನಂ ಕೃತ್ವಾ" "ಸಶಿಖಾನ್ ಕೇಶಾನ್ ನಿಕೃತ್ಯ" ಇತ್ಯಾದಿಬ್ರಹ್ಮಕಾಠಕಾದಿಶ್ರುತಿಗಳು ಸನ್ಯಾಸಿಯಾಗುವವನು ಶಿಖೆಯನ್ನು ಬೋಳಿಸಿಕೊಂಡು ಸನ್ಯಾಸಾಶ್ರಮವನ್ನು ಹೊಂದಬೇಕೆಂದು ಬೋಧಿಸುವುದರಿಂದ, ಹಿಂದಿನ ಮೂರು ಆಶ್ರಮದವರಿಗೂ ಶಿಖೆಯು ಇದ್ದೇ ತೀರಬೇಕೆಂದು ಸಿದ್ಧವಾಗುತ್ತದೆ. ಹಿಂದಿನ ಮೂರು ಆಶ್ರಮಗಳಲ್ಲಿ ಶಿಖೆಯು ಇಲ್ಲದಿದ್ದರೆ ಈ ಶ್ರುತಿಗಳೇ ವ್ಯರ್ಥಗಳಾಗಬೇಕಾಗುವುವೆಂಬುದನ್ನು ಈತನು ಚನ್ನಾಗಿ ಲಕ್ಷ್ಯದಲ್ಲಿಟ್ಟುಕೊಳ್ಳಬೇಕು. ಈ ವಿಷಯವು ಚಿಕ್ಕಮಕ್ಕಳಿಗೂ ಸಹ ತಿಳಿಯುವಂತಿದ್ದರೂ, ಈತನು ಮುಂಡನದ ದುರಭಿಮಾನದಿಂದ ಸುಮ್ಮನೆ ಹರಟೆಯ ಮಾತುಗಳನ್ನು ಬರೆದಿರುವುದು ನಿಷ್ಪ್ರಯೋಜನವಾಗಿದೆ. ಈತನು ಕ್ರಿಯಾಸಾರದಲ್ಲಿರುವ "ಸತ್ರವಿಶೇಷೇ'' ಎಂಬ ವಾಕ್ಯವನ್ನುದಾಹರಿಸಿ ಅನ್ಯಮತದ ಗೃಹಸ್ಥರೂ ಸಹ ಒಂದು ಸಮಯದಲ್ಲಿ ಶಿಖೆಯನ್ನು ಬೋಳಿಸಿಕೊಳ್ಳುತ್ತಾರೆಂದು ಬರೆದಿದ್ದಾನೆ. ಈ ವಾಕ್ಯವು ವೀರಶೈವದ್ವಿಜರ ಬಗ್ಗೆ ಹೇಳ

ಲ್ಪಟ್ಟಿರುವುದಿಲ್ಲವೆನ್ನುವುದು ಈತನಿಗೂ ಗೊತ್ತಿದೆ. ಆದಾಗ್ಯೂ ಚಟ ಕ್ಕಾಗಿ ಬರೆದಿದ್ದಾನೆ. ಯಾವ ಅಮಂಗಲಸತ್ರವಿಶೇಷಪ್ರಾಯಶ್ಚಿತ್ತವಿಶೇ ಷದಲ್ಲಿ ಪ್ರಾಕೃತದ್ವಿಜನಿಗೆ ಶಿಖಾಸಹಿತವಪನವು ಹೇಳಲ್ಪಡುವುದೋ, ಆ ವಿಶೇಷಕರ್ಮದಲ್ಲಿ ಮಾತ್ರ ಅವನು ಮುಂಡಿಯಾಗಬೇಕಲ್ಲದೆ, ಎಲ್ಲಾ ಕರ್ಮಗಳಲ್ಲಿಯೂ ಮುಂಡಿಯಾಗಬೇಕೆಂದು ಸಿದ್ಧಿಸುವುದಿಲ್ಲ. ಇದರಿಂದ ಈತನ ತತ್ತ್ವಕ್ಕೆ ಯಾವ ಬಲವು ಬಂದಿತೋ ಯಾರಿಗೂ ತಿಳಿಯದಾ ಗಿದೆ. "ಅನುಭಾವಿನಾಂ ಪರಿವಾಪನಂ" ಎಂಬ ಆಪಸ್ತಂಬಸೂತ್ರ ದಲ್ಲಿಯೂ, "ಅನು ಪಶ್ಚಾದುದ್ಭೂತಾ ಜಾತಾ ಅನುಭಾವಿನಃ ಮೃತಾಪೇಕ್ಷಯಾ ಅವರವಯಸಃ ತೇಷಾಂ ಪರಿವಾಪನಮಪಿ ಭವತಿ ಕೇಶಾನಾಂ" ಎಂಬ ಸೂತ್ರವ್ಯಾಖ್ಯಾನದಲ್ಲಿಯೂ ಪ್ರಾಕೃತ ದ್ವಿಜನಿಗೆ ಅಶುಭಕರ್ಮದಲ್ಲಿ ಮುಂಡನವು ಹೇಳಲ್ಪಟ್ಟಿದೆಯಲ್ಲದೆ ಶುಭ ಕರ್ಮದಲ್ಲಿ ಹೇಳಲ್ಪಟ್ಟಿಲ್ಲ. "ಸಾವಿತ್ರೀ ಪತಿತಾ ಯಸ್ಯ ದಶವ ರ್ಷಾಣಿ ಪಂಚ ಚ । ಸಶಿಖಂ ವಪನಂ ಕೃತ್ವಾ ವ್ರತಂ ಕುರ್ಯಾತ್ ಸಮಾಹಿತಃ॥" ಎಂಬ ಯಮಸ್ಮೃತಿವಚನವು ವ್ರಾತ್ಯರ ಬಗ್ಗೆ ಪ್ರಾಯಶ್ಚಿತ್ತಕರ್ಮದಲ್ಲಿ ಮುಂಡನವನ್ನು ವಿಧಿಸುವುದಲ್ಲದೆ, ನಿತ್ಯನೈಮಿ ತ್ತಿಕಾದಿ ಶುಭಕರ್ಮಗಳಲ್ಲಿ ವ್ರಾತ್ಯಾಭಿನ್ನಪ್ರಾಕೃತಗೃಹಸ್ಥರಿಗೆ ಮುಂಡ ನವನ್ನು ಬೋಧಿಸುವುದಿಲ್ಲ. ಈ ರೀತಿಯಾಗಿ ಪ್ರಾಯಶ್ಚಿತ್ತಾದಿಕರ್ಮ ಗಳಲ್ಲಿ ಹೇಳಿದ ವಾಕ್ಯಗಳನ್ನು ತೆಗೆದುಕೊಂಡು ಪ್ರಾಕೃತಗೃಹಸ್ಥರಿಗೆ ಮುಂಡನವು ವಿಹಿತವಾಗಿರುವುದೆಂದು ಸಾಧಿಸಲುದ್ಯುಕ್ತನಾಗಿರುವ ಈತನ ಬುದ್ಧಿವೈಭವವನ್ನು ಎಷ್ಟು ವರ್ಣಿಸಿದರೂ ತೀರದಾಗಿದೆ ಅನ್ಯ ಮತೀಯರು ಈತನು ಬರೆದ ಅಮಂಗಲವಿಷಯವನ್ನು ನೋಡಿದರೆ, ಈತನಿಗೆ ಅಕ್ಷರಕ್ಕೊಂದೊಂದು ಪದವಿಯನ್ನು ಕೊಡದೆ ಇರಲಾರರು. ಸಂಪೂರ್ಣವಾಗಿ ವೀರಶೈವಧರ್ಮಶಾಸ್ತ್ರವನ್ನಾಗಲಿ ಅಥವಾ ಅನ್ಯಮತ ಧರ್ಮಶಾಸ್ತ್ರವನ್ನಾಗಲಿ ತಿಳಿದುಕೊಳ್ಳದೆ, ಸಮಯಾಸಮಯಗಳನ್ನು

ಪರಿಗಣಿಸದೆ, ಸಂಬಂಧವಿರಲಿ ಇಲ್ಲದಿರಲಿ ಯಾವುದಾದರೊಂದು ಶ್ಲೋಕವನ್ನು ತೆಗೆದುಕೊಂಡು, ಯದ್ವಾತದ್ವಾ ಮನಸ್ಸಿಗೆ ಬಂದಂತೆ ಬರೆದಿರುವುದು ಕೇವಲ ಬೆಪ್ಪತನವಲ್ಲದೆ ಬೇರೆಯಲ್ಲ. ಅಸ್ತು!

ಪ್ರಾಕೃತರಂತೆ ಅಪ್ರಾಕೃತ (ವೀರಶೈವ) ರಿಗೆ ಶಿವಾರ್ಚನೆಯನ್ನು ಎಂದೂ ಬಿಡಲಿಕ್ಕೆ ಬರುವುದಿಲ್ಲ. ಇವರು ಜಾತ-ಪ್ರೇತ-ಸೂತಕಾದಿಕಾಲಗಳಲ್ಲಿಯೂ ನಿತ್ಯಕರ್ಮವೆನಿಸುವ ಶಿವಾರ್ಚನೆಯನ್ನು ಮಾಡಲೇಬೇಕು. ಅದನ್ನು ಬಿಟ್ಟರೆ ಪ್ರತ್ಯವಾಯ ಬದ್ಧರಾಗುವರು. ಆದುದರಿಂದ ಅಪ್ರಾಕೃತ (ವೀರಶೈವ) ಗೃಹಸ್ಥರು "ಸದಾ ಬದ್ಧಶಿಖೇನ ಚ" ಎಂಬ ಧರ್ಮಶಾಸ್ತ್ರೋಕ್ತಿಯಂತೆ ಶಿವಪೂಜಾಂಗವೆನಿಸುವ ಶಿಖೆಯಿಂದ ಕೂಡಿರಬೇಕೆನ್ನುವುದೇ ಸಿದ್ಧಾಂತವು. ಸನ್ಯಾಸಿಗಳಿಗೆ ಸಾಕ್ಷಾತ್ ಶ್ರುತಿಗಳೇ ಶಿಖೆಯನ್ನು ನಿಷೇಧಿಸಿರುವುದರಿಂದ, ಯಾವ ಪ್ರತ್ಯವಾಯಕ್ಕೂ ಅವಕಾಶವಿಲ್ಲವೆಂದು ತಿಳಿಯಬೇಕು.

ಈತನು ೭೮-೭೯ನೆಯ ಪುಟಗಳಲ್ಲಿ ಉದಾಹರಿಸಿದ—

"ಶಿಖಾಂ ಛಿಂದಂತಿ ಯೇ ಮೋಹಾದ್ದ್ವೇಷಾದಜ್ಞಾನತೋಽಪಿ ವಾ | ತಪ್ತಕೃಚ್ಛ್ರೇಣ ಶುದ್ಧ್ಯಂತಿ ತ್ರಯೋ ವರ್ಣಾ ದ್ವಿಜಾತಯಃ ||" "ವಿಶಿಖೋ ಯತ್ಕರೋತಿ ನ ತತ್ಕೃತಂ" "ಶಿಖೀ ತಿಲಕೀ ಕರ್ಮ ಕುರ್ಯಾತ್"

ಇತ್ಯಾದಿಸ್ಮೃತ್ಯಾದಿವಾಕ್ಯಗಳು ಶಿವಾಗಮಗಳ ಅಭಿಪ್ರಾಯಕ್ಕೆ ಅನುಕೂಲವಾಗಿರುವುದರಿಂದ ಇವು ಪ್ರಮಾಣಗಳಾಗಿವೆ. ವೀರಶೈವರು ಶಿವಾಗಮಗಳಿಗೆ ವಿರುದ್ಧಗಳಾದ ಸ್ಮೃತಿವಾಕ್ಯಗಳಿಗೆ ಅಪ್ರಮಾಣವೆಂದು ಹೇಳುವರಲ್ಲದೆ, ಶಿವಾಗಮಗಳಿಗೆ ಅವಿರುದ್ಧಗಳಾದ ವಾಕ್ಯಗಳಿಗೆ ಅಪ್ರಮಾಣಗಳೆಂದು ಹೇಳುವುದಿಲ್ಲ. ಆದುದರಿಂದಲೇ ಪ್ರಾಚೀನವೀರಶೈವ ಮತಗ್ರಂಥಕಾರರು ಶಿವಾಗಮಗಳಿಗೆ ಅವಿರುದ್ಧವಾಗಿರುವ ಸಾವಿರಾರು ಸ್ಮೃತಿವಾಕ್ಯಗಳನ್ನು ತಮ್ಮ ತಮ್ಮ ಗ್ರಂಥಗಳಲ್ಲಿ ಉದಾಹರಿಸಿದ್ದಾರೆ. ವೀರಶೈವಾಚಾರಕೌಸ್ತುಭ ಮೊದಲಾದ ಗ್ರಂಥಗಳೇ ಈ ವಿಷಯದಲ್ಲಿ

ಬಲವಾದ ಸಾಕ್ಷಿಗಳಾಗಿವೆ. ಆದುದರಿಂದ ವೀರಶೈವದ್ವಿಜರು ಸ್ವಧರ್ಮ ಶಾಸ್ತ್ರದಂತೆ ಪತಿಕರ್ಮಾಂಗಗಳೆನಿಸಿದ ಶಿಖಾಸೂತ್ರಗಳನ್ನು ಧರಿಸ ಬೇಕೆನ್ನುವುದೇ ಸಿದ್ಧಾಂತವು.

ಈತನು ೮೦ ನೆಯ ಪುಟದಲ್ಲಿ—

ಶಿಖಾಸೂತ್ರಾನ್ವಿತಂ ಕರ್ಮ ಪ್ರಾಕೃತಾನಾಂ ಶುಭಾವಹಂ |
ನೋದೀರಿತಂ ಲಿಂಗಿನಾಂ ಚ ವೀರಶೈವಾಧ್ವವರ್ತಿನಾಂ ||

ಎಂಬ ಶ್ಲೋಕವನ್ನುದಾಹರಿಸಿರುತ್ತಾನೆ. ಇದು ಶಿವಾಗಮಶ್ಲೋಕವಲ್ಲ. ಈ ಶ್ಲೋಕವು ಯಾವ ಆಗಮುಗಳಲ್ಲಿಯೂ ದೊರೆಯುವುದಿಲ್ಲ. ಒಂದು ವೇಳೆ ಈತನ ಅಭಿಪ್ರಾಯದಂತೆ ಈ ಶ್ಲೋಕವು ಪ್ರಮಾಣವೆಂದು ಹೇಳಿದರೂ, ಇದರಿಂದ ವೀರಶೈವದ್ವಿಜರಿಗೆ ಯಾವ ಹಾನಿಯೂ ತಟ್ಟುವು ದಿಲ್ಲ. ಈ ಶ್ಲೋಕದಲ್ಲಿ ಪ್ರಾಕೃತರ ಶಿಖಾಸೂತ್ರಾನ್ವಿತಕರ್ಮವು ವೀರ ಶೈವರಿಗೆ ಹೇಳಲ್ಪಟ್ಟಿಲ್ಲವೆಂದು ಅರ್ಥವಾಗುತ್ತದೆ. ಇದು ನಿಜವೇ ಆದೆ. ಆದರೆ ಇವರಿಗೆ ಅಪ್ರಾಕೃತಶಿಖಾಸೂತ್ರಾನ್ವಿತಕರ್ಮವು ಹೇಳಲ್ಪಟ್ಟಿರು ವುದೆಂದು ಇದರಿಂದಲೇ ಸಿದ್ಧವಾಗುತ್ತದೆ. ಆದುದರಿಂದ ವೀರಶೈವ ದ್ವಿಜರು ಅಪ್ರಾಕೃತಶಿಖಾಸೂತ್ರಗಳನ್ನು ಧರಿಸಬೇಕೆನ್ನುವುದೇ ಶಿವಾ ಗಮಸಿದ್ಧಾಂತವು. ಈ ಬಗ್ಗೆ ಈ ಮೊದಲು ಶಿವಾಗಮಪ್ರಮಾಣಗಳನ್ನು ಅನೇಕವಾಗಿ ಉದಾಹರಿಸಿದ್ದೇವೆ. ಅವುಗಳನ್ನು ನೋಡಿ ಈತನು ಭ್ರಾಂತಿಯಿಂದ ದೂರನಾಗಬೇಕು.

ಈತನು ೮೦-೮೧ ನೆಯ ಪುಟಗಳಲ್ಲಿ—“ದಧ್ನಾ ಜುಹೋತಿ” ಇತ್ಯಾದಿ ಶ್ಲೋಕಗಳನ್ನು ಬರೆದು ವೀರಶೈವರು ಯಜ್ಞಾದಿಗಳನ್ನಾಚರಿ ಸಬಾರದೆಂದೂ, ಸ್ಮೃತಿಗಳು ಪ್ರಮಾಣಗಳಾದರೆ ಅಲ್ಲಿ ಹೇಳಲ್ಪಟ್ಟ ಏಕಾದಶ್ಯಾದಿ ವ್ರತಗಳು, ಕಾಮ್ಯಕರ್ಮಗಳು, ಪಂಚಸೂತ್ರಗಳು, ಶ್ರಾದ್ಧ, ಉಪನಯನ, ವಿಧವಾಸ್ತ್ರೀಕೇಶಖಂಡನ ಇತ್ಯಾದಿಗಳನ್ನು

ಒಪ್ಪಬೇಕಾಗುವುದೆಂದೂ ಬರೆದಿದ್ದಾನೆ. ಯಾವ ಸ್ಮೃತಿಗಳಲ್ಲಿ ಶಿವಾಗಮಗಳಿಗೆ ಅನುಕೂಲವಾಗಿರುವ ಕ್ರಿಯೆಗಳು ಹೇಳಲ್ಪಟ್ಟವೆಯೋ ಅಂಥ ಉಪನಯನ, ಪಂಚಸೂತಕ ಮೊದಲಾದವುಗಳನ್ನು ವೀರಶೈವರು ಆಚರಿಸಲಿಕ್ಕೇಬೇಕು. ಆದರೆ ಶಿವಾಗಮಗಳಿಗೆ ವಿರುದ್ಧಗಳಾದ ಕ್ರಿಯೆಗಳನ್ನು ಮಾತ್ರ ಆಚರಿಸಬಾರದು. ಈತನು ೮೨-೮೩-೮೪ ನೆಯ ಪುಟಗಳಲ್ಲಿ "ಹಾಡಿದ್ದು ಹಾಡೋ ಕಿಸಬಾಯಿದಾಸ" ಎಂಬಂತೆ ಹಿಂದೆ ಹೇಳಿದ ಶ್ಲೋಕಗಳನ್ನೇ ತೆಗೆದುಕೊಂಡು ವ್ಯರ್ಥವಾಗಿ ಹರಟೆಯನ್ನು ಕೊಚ್ಚಿದ್ದಾನೆ. ಈ ವಿಷಯವು ನಮ್ಮಿಂದ ಈ ಮೊದಲೇ ನಿರ್ಣಯಿಸಲ್ಪಟ್ಟಿರುವುದರಿಂದ ಪುನಃ ಇದರ ಖಂಡನವು ನಿರರ್ಥಕವಾಗಿದೆ.

ಈತನು ೮೫ ನೆಯ ಪುಟದಲ್ಲಿ ವೀರಶೈವರಿಗೆ ಯಜ್ಞಾದಿಗಳು ತ್ಯಾಜ್ಯವಾಗಿವೆ ಎಂಬ ಅಭಿಪ್ರಾಯವನ್ನು ಸಮರ್ಥಿಸಿದ್ದಾನೆ. ಶಿವಾಗಮಗಳಿಗೆ ವಿರುದ್ಧಗಳಾದ ಯಜ್ಞಗಳು ವೀರಶೈವರಿಗೆ ಮಾನ್ಯವಲ್ಲವೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಆದರೆ ದೀಕ್ಷಾವಿವಾಹಾದಿಗಳಲ್ಲುಕ್ತಗಳಾದ ರುದ್ರಹೋಮ ಮೊದಲಾದವುಗಳನ್ನು ಎಲ್ಲ ವೀರಶೈವದ್ವಿಜರೂ ಆಚರಿಸಬೇಕಾಗುವುದೆನ್ನುವುದನ್ನು ಈತನು ಚನ್ನಾಗಿ ತಿಳಿದುಕೊಳ್ಳಬೇಕು.

ಈತನು ೮೭ ನೆಯ ಪುಟದಲ್ಲಿ ಷಟ್ಸ್ಥಲವಿಚಾರವನ್ನೂ, ಸದ್ಯೋನಿರ್ವಾಣ-ಅಸದ್ಯೋನಿರ್ವಾಣದೀಕ್ಷೆಯ ವಿಚಾರವನ್ನೂ ಎತ್ತಿಕೊಂಡು ತನ್ನ ಘನಪಾಂಡಿತ್ಯವನ್ನು ಪ್ರಕಟಪಡಿಸಿದ್ದಾನೆ. ಅಯ್ಯಾ! ಘನಪಂಡಿತನೇ, ಈ ವಿಷಯವನ್ನು ಲಿಂಗಧಾರಿಗಳೆಲ್ಲರೂ ಬಲ್ಲರು. ಆದರೆ ಈತನು ಇದರ ಮಧ್ಯದಲ್ಲಿ ಪ್ರಾಕೃತಕರ್ಮಾಂಗಗಳಾದ ಶಿಖಾಸೂತ್ರಗಳನ್ನು ಧರಿಸಬಾರದೆಂಬ ಕರಡಿಯನ್ನು ಬಿಟ್ಟದ್ದು ಅನುಚಿತವು. ವೀರಶೈವದ್ವಿಜರಿಗೆ ಪ್ರಾಕೃತಕರ್ಮಾಂಗಗಳಾದ ಶಿಖಾಸೂತ್ರಗಳಿರದೆ,

ಅಪ್ರಾಕೃತಕರ್ಮಾಂಗಗಳಾದ ಶಿಖಾಸೂತ್ರಗಳಿರುವುವೆನ್ನುವುದನ್ನು ಈತನು ಪುನಃ ಪುನಃ ಪುನಃ ಪುನಃ ಪುನಃ ಪುನಃ ವಿಚಾರಮಾಡಿ ಪರಶಿವನ ಕೃಪೆಗೆ ಪಾತ್ರನಾಗಬೇಕು.

ಈತನು ೮೭ನೆಯ ಪುಟದಲ್ಲಿ—" ಅಥ ನಿರ್ಬೀಜದೀಕ್ಷಾಯಾಂ " ಇತ್ಯಾದಿ ಸಿದ್ಧಾಂತಶೇಖರದ ಶ್ಲೋಕಗಳನ್ನುದಾಹರಿಸಿ ನಿಷ್ಪ್ರಯೋಜನವಾಗಿ ಹರಟೆಯನ್ನು ಕೊಚ್ಚಿದ್ದಾನೆ. ಈತನು ಹೇಳುವ ಅಭಿಪ್ರಾಯಕ್ಕೂ ಆ ಶ್ಲೋಕಗಳಲ್ಲಿರುವ ಅಭಿಪ್ರಾಯಕ್ಕೂ ಯಾವ ಸಂಬಂಧವೂ ಇರುವುದಿಲ್ಲ. ಈತನು ಸಬೀಜದೀಕ್ಷೆಯು ಶುದ್ಧಶೈವರಿಗೆಂದೂ, ನಿರ್ಬೀಜದೀಕ್ಷೆಯು ವೀರಶೈವರಿಗೆಂದೂ ಅಭಿಪ್ರಾಯಪಡುತ್ತಾನೆ. ಆದರೆ ಈತನು ಉದಾಹರಿಸಿರುವ ಶ್ಲೋಕಗಳಲ್ಲಿ ಸಬೀಜದೀಕ್ಷೆಯುಳ್ಳ ಶುದ್ಧಶೈವರಿಗೆ ಶಿಖಾಖಂಡನವು ಹೇಳಲ್ಪಟ್ಟಿರುವುದಲ್ಲದೆ, ನಿರ್ಬೀಜದೀಕ್ಷೆಯುಳ್ಳ ವೀರಶೈವರಿಗೆ ಶಿಖಾಖಂಡನವು ಹೇಳಲ್ಪಟ್ಟಿರುವುದಿಲ್ಲ. ಹೀಗಿದ್ದರೂ ಈತನು ನಿಷ್ಪ್ರಯೋಜನವಾಗಿ ೨ ಪುಟಗಳ ತುಂಬಾ ಈ ವಿಷಯದಲ್ಲಿ ಹರಟೆಯ ಬರವಣಿಗೆಯನ್ನು ಬರೆದಿರುವುದು ಅಯುಕ್ತವಾಗಿದೆ. ಇನ್ನು ಈತನು ತೆಗೆದುಕೊಂಡಿರುವ '' ಗೃಹಿಣಾಂ ಲೌಕಿಕೀ ಜ್ಞೇಯಾ ಲಿಂಗಿನಾಂ ಶಿವಧರ್ಮಿಣೀ | " ಎಂಬ ಶ್ಲೋಕದಲ್ಲಿ ಲಿಂಗಧಾರಿಗಳಿಗೆ ಶಿವಧರ್ಮಿಣೀ ದೀಕ್ಷೆಯು ಉಕ್ತವಾಗಿದೆ. ಈ ಶಿವಧರ್ಮಿಣೀ ದೀಕ್ಷೆಯು ಸಬೀಜದೀಕ್ಷೆಯ ಭೇದವಾಗಿದೆ. ಅಂದಮೇಲೆ ಸಬೀಜದೀಕ್ಷೆಯು ಲಿಂಗಧಾರಿಗಳಿಗೆ ಸಿದ್ಧವಾದಂತಾಯಿತು. ಸಬೀಜದೀಕ್ಷೆಯು ಶುದ್ಧಶೈವರಿಗಲ್ಲದೆ ವೀರಶೈವರಿಗಲ್ಲವೆಂದು ಈತನು ಬರೆದಿರುತ್ತಾನೆ. ಇದರಿಂದ ಈತನ ಅಭಿಪ್ರಾಯಕ್ಕೂ ಈ ಶ್ಲೋಕಾಭಿಪ್ರಾಯಕ್ಕೂ ಪರಸ್ಪರ ವಿರೋಧವಾಯಿತೆನ್ನುವುದು ಚಿಕ್ಕ ಮಕ್ಕಳಿಗೂ ಸಹ ತಿಳಿಯುವಂತಿದೆ. ಹೀಗೆ ಪರಸ್ಪರ ವಿರೋಧವಾಗಿ ಬರೆಯುವುದು ಬೆಪ್ಪತನದ ಪ್ರಭಾವವೆಂದೇ ಹೇಳಬೇಕಾಗುವುದು.

ಈತನು ೬೬-೬೯ ನೆಯ ಪುಟಗಳಲ್ಲಿ—“ ವೀರಶೈವಮಹಾ ದೀಕ್ಷಾಂ ” ಇತ್ಯಾದಿ ಶ್ಲೋಕಗಳನ್ನು ಬರೆದುಕೊಂಡಿರುತ್ತಾನೆ. ಈ ಶ್ಲೋಕಗಳು ಶಿವಾಗಮಶ್ಲೋಕಗಳಲ್ಲವೆನ್ನುವುದನ್ನು ಈ ಮೊದಲೇ ಖಂಡಿಸಿದ್ದೇವೆ. ವಾಚಕರು ಈ ವಿಷಯವನ್ನು ಅಲ್ಲಿಯೇ ನೋಡಿಕೊಳ್ಳಬೇಕು. “ ವೀರಶೈವಮಹಾದೀಕ್ಷಾಂ ” ಎಂಬ ಶ್ಲೋಕವು ವಾತುಲಾಗಮದ ಶ್ಲೋಕವೆಂದು ೬೬ ನೆಯ ಪುಟದಲ್ಲಿ ಬರೆದಿದ್ದಾನೆ. ೧೧ ನೆಯ ಪುಟದಲ್ಲಿ ಈ ಶ್ಲೋಕವು ವೀರಾಗಮಶ್ಲೋಕವೆಂದು ಬರೆದಿರುತ್ತಾನೆ. ೬೯ನೆಯ ಪುಟದಲ್ಲಿ ಇದೇ ಶ್ಲೋಕಕ್ಕೆ ಶಿವಾಗಮವಾಕ್ಯವೆಂದು ಬರೆದಿದ್ದಾನೆ. ಹೀಗೆ ಆಗಮುಗಳ ಹೆಸರುಗಳೇ ಭಿನ್ನಭಿನ್ನಗಳಾದಮೇಲೆ, ಇವು ಎಷ್ಟರಮಟ್ಟಿಗೆ ನಿಜವಿರಬಹುದೆನ್ನುವುದು ಕುಶಲಮತಿಗಳಾದ ವಾಚಕರಿಗೆ ಗೊತ್ತಾಗದಿರದು. ಈ ರೀತಿಯಾಗಿ ಹಿಂದೆಯೂ ಮುಂದೆಯೂ ವಿಚಾರಮಾಡದೆ ಪರಸ್ಪರ ವಿರುದ್ಧವಾಗಿರುವ ಅನೇಕಾನೇಕ ದೋಷಗಳಿಂದ ಕೂಡಿದ ಈತನ ಪುಸ್ತಕವು ತ್ಯಾಜ್ಯವಾಗಿದ್ದು ಕಣ್ಣುಗಳಿಂದ ನೋಡಲಿಕ್ಕೂ ಸಹ ಅಯೋಗ್ಯವಾಗಿದೆ. ಈತನು ತನ್ನ ಪುಸ್ತಕದಲ್ಲಿ ಉದಾಹರಿಸಿರುವ ಅಮಂಗಲಶ್ಲೋಕಗಳು ಯಾವ ಆಗಮುಗಳಲ್ಲಿಯೂ ದೊರೆಯುವುದಿಲ್ಲ. ತನ್ನ ದುರುದ್ದೇಶವನ್ನು ಸಾಧಿಸುವುದಕ್ಕೋಸ್ಕರ ಧರ್ಮಶಾಸ್ತ್ರಕ್ಕೆ ಅತ್ಯಂತ ವಿರುದ್ಧವಾಗಿ ಕೇವಲ ಮುಂಡನವನ್ನು ಸಾಧಿಸುವ ಈತನ ಪುಸ್ತಕವು, ಮುಂಡನಧರ್ಮದಿಂದ ಕೂಡಿದ ಶೂದ್ರರ ಪಠನಕ್ಕೆ ಮಾತ್ರ ಯೋಗ್ಯವಾಗಿದೆಯಲ್ಲದೆ, ಉತ್ತಮವರ್ಣದವರಿಗೆ ನೋಡಿದಮಾತ್ರದಲ್ಲಿಯೇ ಪಾಪವನ್ನುಂಟುಮಾಡತಕ್ಕದ್ದಾಗಿದೆ. ಅಸ್ತು !

ನಾವು ಇಲ್ಲಿಯವರೆಗೆ ಪಾರಮೇಶ್ವರಾಗಮು, ವೀರಾಗಮು, ಸೂಕ್ಷ್ಮಾಗಮು, ವಾತುಲಾಗಮು, ಪಾಶುಪತತಂತ್ರ, ಶ್ರೀರುದ್ರ, ಬ್ರಹ್ಮೋಪನಿಷತ್, ರುದ್ರಾಕ್ಷಜಾಬಾಲೋಪನಿಷತ್, ಬೃಹ

ಜ್ಞಾಬಾಲೋಪನಿಷತ್, ಲಿಂಗೋಪನಿಷತ್, ಸಿದ್ಧಾಂತಶಿಖೋಪ ನಿಷತ್, ಶ್ರೀಕರಭಾಷ್ಯ, ಸಿದ್ಧಾಂತಶಿಖಾಮಣಿ, ಶಿವಾಧಿಕ್ಯಶಿಖಾ ಮಣಿ, ವೀರಶೈವಧರ್ಮಶಿರೋಮಣಿ, ವೇದಾಂತಸಾರ ವೀರಶೈವ ಚಿಂತಾಮಣಿ, ವಿವೇಕಚಿಂತಾಮಣಿ, ಕ್ರಿಯಾಸಾರ, ಲಿಂಗಧಾ ರಣಚಂದ್ರಿಕಾ, ಲಿಂಗಪುರಾಣ, ಶಿವಪುರಾಣ ವಾಯುವೀಯಸಂ ಹಿತಾ, ಶಂಕರಸಂಹಿತಾ, ವೀರಶೈವಸದಾಚಾರಸಂಗ್ರಹ, ವೀರ ಶೈವಾಚಾರಪ್ರದೀಪಿಕಾ, ವೀರಶೈವಾಚಾರಕೌಸ್ತುಭ, ದೀಕ್ಷಾವಿಧಿ, ಶಾರದಾತಿಲಕ, ಮಹಾನ್ಯಾಸ, ಗಿರಿಜಾಕಲ್ಯಾಣ, ರಾಜಶೇಖರ ಮೊದಲಾದ ಮುದ್ರಿತಗ್ರಂಥಗಳಿಂದ ವೀರಶೈವದ್ವಿಜರಿಗೆ ಶಿಖಾಸೂತ್ರ ಧಾರಣವನ್ನು ಸಿದ್ಧಮಾಡಿತೋರಿಸಿರುವ ವಿಷಯವು ವಾಚಕರಿಗೆಲ್ಲಾ ಮನವರಿಕೆಯಾಗಿರಬಹುದು. ಈ ಎಲ್ಲಾ ಗ್ರಂಥಗಳ ಪರಿಶೋಧನೆ ಯಿಂದ ವೀರಶೈವದ್ವಿಜರು ಶಿಖಾಸೂತ್ರಗಳನ್ನು ಧರಿಸಬೇಕೆಂದೂ, ವೀರಶೈವಶೂದ್ರರು ಇವುಗಳನ್ನು ಧರಿಸಬಾರದೆಂದೂ ಸಿದ್ಧಾಂತವಾಗು ವುದರಿಂದ, ಸಕಲರೂ ತಮ್ಮ ತಮ್ಮ ವರ್ಣಾಶ್ರಮಧರ್ಮಾನುಸಾರವಾಗಿ ಯೂ, ಶಾಸ್ತ್ರಮರ್ಯಾದಾನುಸಾರವಾಗಿಯೂ ನಡೆದು ವರ್ಣಾಶ್ರಮ ಧರ್ಮನಿಯಾಮಕನಾದ ಶ್ರೀ ಪರಶಿವನ ಕೃಪೆಗೆ ಪಾತ್ರರಾಗಬೇಕೆಂದು ಹಾರೈಸುತ್ತೇವೆ. ವೀರಶೈವಶೂದ್ರರಿಗೆ ಮುಂಡನವೇ ಸಿದ್ಧಾಂತ ! ವೀರಶೈವದ್ವಿಜರಿಗೆ ಶಿಖಾಸೂತ್ರಧಾರಣವೇ ಸಿದ್ಧಾಂತ ! ಸಿದ್ಧಾಂತ !! ಸಿದ್ಧಾಂತ !!!

ಶಿವಾರ್ಪಣಮಸ್ತು.

